# ಶ್ರೀ ಗುರುಶಾಂತ ದರ್ಶನ







## ಷಷ್ಟ್ಯಬ್ಧಿ ಸಂಭಾವನಾ ಗ್ರಂಥ

ಅಕ್ಕಲಕೋಟೆ.

"ಅರವತ್ತರ ಹುಟ್ಟುಹಬ್ಬ" ದ ಸಂಭಾವನಾ ಗ್ರಂಥ

# ಅರ್ಪಣ



ಗುರುರ್ಬ್ರಹ್ಮಾ ಗುರುರ್ವಿಷ್ಣುಃ।
ಗುರುರ್ದೇವೋ ಮಹೇಶ್ವರಃ॥
ಗುರುಃ ಸಾಕ್ಷಾತ್ ಪರಃಬ್ರಹ್ಮ।
ತಸ್ಮೈ ಶ್ರೀ ಗುರುವೇ ನಮಃ॥

# ಅರ್ಪಣೆ.



ಪರಮ ಪೂಜ್ಯ " ಬಾಲಶಿವಯೋಗಿ "

**ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳವರ**

ಅರವತ್ತರ ಹುಟ್ಟುಹಬ್ಬದ ಸಂದರ್ಭದಲ್ಲಿ

ಅವರ ಪವಿತ್ರ ಅಡಿದಾವರೆಯಲ್ಲಿ, ಈ ಗ್ರಂಥಕುಸುಮವನ್ನು ಭಕ್ತಿಭಾವದಿಂದ ಸ್ವಾಗತ ಸಮಿತಿಯ ಪರವಾಗಿ ಸಮರ್ಪಿಸಲಾಗಿದೆ.

ಶ್ರೀ ಷ. ಬ್ರ. ಶ್ರೀಪತಿ ಪಂಡಿತಾರಾಧ್ಯ ಶಿವಾಚಾರ್ಯರ ನಾಮಾಭಿಧಾನದ

ನೂತನ ಶ್ರೀಗಳು



ಪಂ. ಶಾಂತಶರ್ಮಾ ಹಿರೇಮಠ, M. A.

ಕಾವ್ಯತೀರ್ಥ, ಸಾಹಿತ್ಯವೇದಾಂತಾಚಾರ್ಯ

ಷಷ್ಟ್ಯಬ್ಧಿ ಸಮಾರಂಭದ

ಅಧ್ಯಕ್ಷರು.



ಪರಮ ಪೂಜ್ಯ ಜ್ಞಾನ ಸಿಂಹಾಸನಾಧೀಶ್ವರ

**ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು**

**ಶ್ರೀ ಕ್ಷೇತ್ರ ವಾರಣಾಸಿ. ( ಕಾಶಿ)**

" ಶ್ರೀ ಗುರುಶಾಂತ ದರ್ಶನ " ಸಂಭಾವನಾ ಗ್ರಂಥದ ಉದ್ಘಾಟಕರು



ಮಾನ್ಯ ಶ್ರೀ C. N. ಪಾಟೀಲ, B. A., B. L.
( ಅರಣ್ಯ ಇಲಾಖೆಯ ಮಂತ್ರಿಗಳು, ಕರ್ನಾಟಕ ರಾಜ್ಯ )

ಉಪಾಧ್ಯಕ್ಷರು :



ಶ್ರೀ. ಸಾತಲಿಂಗಪ್ಪ ಸಂಗಪ್ಪ ಮೇತ್ರೆ
( ನಗರಾಧ್ಯಕ್ಷ ದುಧನಿ ಮತ್ತು ಸಭಾಪತಿ ಅಕ್ಕಲಕೋಟ ತಾಲೂಕ ಮಾರ್ಕೆಟ್ ಕಮಿಟಿ. )

ಉಪಾಧ್ಯಕ್ಷರು :



ಶ್ರೀ. ವಹೀದಪಾಶಾ ಪಾಟೀಲ, ತೋಳನೂರ.

( ಅಕ್ಕಲಕೋಟ ಮಾರ್ಕೆಟ್ ಕಮೀಟಿ ಸದಸ್ಯ ಮತ್ತು ಸೋಲಾಪೂರ ಜಿಲ್ಲಾ ಪರಿಷತ್ ಸದಸ್ಯ )

ಸಮಾರಂಭದ ಸದಸ್ಯರು :



ಶ್ರೀ. B. T. ಮಾನೆ
( ಮಹಾರಾಷ್ಟ್ರ ರಾಜ್ಯದ ಶಾಸನ ಸಭಾ ಸದಸ್ಯರು. )

# "ಶ್ರೀ ಗುರುಶಾಂತ ದರ್ಶನ"

ಅರವತ್ತರ ಹುಟ್ಟುಹಬ್ಬದ ಸಂಭಾವನಾ ಗ್ರಂಥದ

## ಕನ್ನಡ ವಿಭಾಗ

## ವಿಷಯ ಸೂಚಿ :

# ಸಂಪಾದಕೀಯ

ಪರಮಪೂಜ್ಯ 'ಬಾಲ ಶಿವಯೋಗಿ' ಶ್ರೀ. ಷ. ಬ್ರ. ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳವರ ಅರವತ್ತರ ಕಾಣಿಕೆಯೆಂದು ಈ 'ಸಂಭಾವನಾ ಗ್ರಂಥ' ವನ್ನು ಭಕ್ತಿಭಾವದಿಂದ ಅವರ ಮಹಾಪಾದಕ್ಕೆ ಸಮರ್ಪಿಸುವ ಸದವಕಾಶವನ್ನು ಒದಗಿಸಿಕೊಟ್ಟ ಪೂಜ್ಯಪಾದರ ಷಷ್ಟ್ಯಬ್ಧಿ ಸ್ವಾಗತ ಸಮಿತಿಯ ಸದಸ್ಯರಿಗೆ ಅನಂತ ವಂದನೆಗಳನ್ನು ಸಮರ್ಪಿಸುತ್ತೇನೆ.

ಈ ಸಂಭಾವನಾ ಗ್ರಂಥಕ್ಕಾಗಿ ಲೇಖನ ಸಂಗ್ರಹದ ಪುಣ್ಯಪ್ರದವಾದ ಕಾರ್ಯ ನನ್ನ ಪಾಲಿಗೆ ಬಂದುದು ನನ್ನ ಸುಕೃತವೆಂದು ಭಾವಿಸುತ್ತೇನೆ. "ಹರಸೇವೆ ಗುರುಪೂಜೆ ವರಪುಣ್ಯವಿಲ್ಲದೆ ಬರಿದುಪದೆ ಮನುಜಾ" ಎಂಬಂತೆ ಸದ್ಗುರುವಿನ ಈ ಮಹಾಕಾರ್ಯದಲ್ಲಿ ನನ್ನದೂ ಅಳಿಲು ಸೇವೆ ಸಲ್ಲಿಸುವ ಯೋಗ ತಂದು ಕೊಟ್ಟಂತಹ 'ಷಷ್ಟ್ಯಬ್ಧಿ ಸ್ವಾಗತ ಸಮಿತಿ' ಯ ಸದಸ್ಯರಿಗೆ ಪುನಃ ವಂದಿಸುತ್ತೇನೆ.

ನಾನು ಕಾಗದ ಬರೆದಾಕ್ಷಣವೇ ತಮ್ಮ ಅಮೂಲ್ಯವಾದ ಶುಭಸಂದೇಶಗಳನ್ನು ಕಳುಹಿದ ಶ್ರೀಮದ್ರಂಭಾಪುರಿ, ಉಭಯ ಜಗದ್ಗುರುಗಳಿಗೂ, ಕೇದಾರ, ಶ್ರೀಶೈಲ, ಕಾಶಿ, ಜಗದ್ಗುರುಗಳಿಗೂ ನಾನು ಶಿರಸಾಷ್ಟಾಂಗ ವಂದನೆಗಳನ್ನು ಸಲ್ಲಿಸುತ್ತೇನೆ. ಭಾರತದ ಉಪರಾಷ್ಟ್ರಪತಿ, ಮಾನ್ಯ ಬ. ದಾ. ಜತ್ತಿಯವರು, ಮಹಾರಾಷ್ಟ್ರದ ಮಂತ್ರಿಗಳಾದ ಮಾನ್ಯ ರತ್ನಪ್ಪಾ ಅಣ್ಣಾ ಕುಂಭಾರರವರು, ಕರ್ನಾಟಕ ರಾಜ್ಯದ ಮುಖ್ಯ ಮಂತ್ರಿಗಳಾದ ಮಾನ್ಯ ಡಿ. ದೇವರಾಜ ಅರಸ, ಅರಣ್ಯ ಇಲಾಖೆಯ ಸಚಿವರಾದ ಮಾನ್ಯ ಸಿ. ಎನ್. ಪಾಟೀಲರಿಗೂ ಅನಂತ ವಂದನೆಗಳನ್ನು ಸಲ್ಲಿಸುತ್ತೇನೆ.

ನಮ್ಮ 'ಸಂಭಾವನಾ ಗ್ರಂಥ' ಕ್ಕೆ ವಿದ್ವಜ್ಜನರು ಪೂಜ್ಯ ಶ್ರೀಗಳವರು, ಅನುಭವಿಗಳು ತಮ್ಮ ಲೇಖನವನ್ನು ಸಕಾಲಕ್ಕೆ ಕಳಿಸಿಕೊಟ್ಟ ಪ್ರಯುಕ್ತ ಅವರೆಲ್ಲರಿಗೂ ಅನಂತ ಧನ್ಯವಾದಗಳನ್ನರ್ಪಿಸುವೆನು.

ನನ್ನ ಕಾರ್ಯದಲ್ಲಿ ಸಹಾಯ ಸಹಕಾರ ಸಲ್ಲಿಸಿದ ಶ್ರೀಮಾನ್ M. R. ಭಾವಿಕಟ್ಟಿ, B. A., B. Ed. ಶ್ರೀ. ಶಿವಲಿಂಗಯ್ಯ ಬೆಲ್ಲದ, M. A., B. Ed. ಶ್ರೀ. ಅನಂತರಾವ ಮಾಡ್ಯಾಳಕರ್, B. A., B. Ed. ಮತ್ತು ಶ್ರೀ. S. M. ಸ್ವಾಮಿ, B. Sc. B. Ed. ಅಕ್ಕಲಕೋಟೆ ಇವರೆಲ್ಲರಿಗೂ ನಾನು ಋಣಿಯಾಗಿರುವೆನು.

ಸಮಯಾಭಾವವಿದ್ದಾಗ್ಯೂ ಕೂಡ ಈ ಗುರುತರವಾದ ಕಾರ್ಯವನ್ನು ಅಚ್ಚುಕಟ್ಟಾಗಿ ಮುದ್ರಿಸಿ ಮಾಡಿಕೊಟ್ಟ ಪ್ರತಿಭಾ ಪ್ರಿಂಟಿಂಗ್ ಪ್ರೆಸ್ಸಿನ ಒಡೆಯರಿಗೂ ಹಾಗೂ ಅವರ ಮುದ್ರಣಾಲಯದ ಸಿಬ್ಬಂದಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ನನ್ನ ಈ ಕೆಲಸದಲ್ಲಿ ಸಹಕರಿಸಿದ ಸಮಸ್ತರಿಗೂ ಆ ಪರಮಗುರು ಶುಭಮಂಗಲವನ್ನುಂಟು ಮಾಡಲಿ ಎಂದು ಹಾರೈಸುತ್ತೇನೆ.

ಶ್ರೀ । । ಪಾದ ಸೇವಕ,
ಪಿ. ಆಯ್. ಪಟೇಲ, B. A., B. Ed.
ಹಿರೇಜೇವರಗಿ.



**VICE - PRESIDENT**
**INDIA**
NEW DELHI.

# ಶುಭ ಸಂದೇಶ.

ಪರಮಪೂಜ್ಯ ಅಕ್ಕಲಕೋಟ ಬೃಹನ್ಮಠಾಧ್ಯಕ್ಷರಾದ ಶ್ರೀ ಷ॥ ಬ್ರ॥ ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳ ಷಷ್ಟ್ಯಬ್ಧಿಯನ್ನು ಸೂಕ್ತ ರೀತಿಯಲ್ಲಿ ಆಚರಿಸಲು ತೀರ್ಮಾನಿಸಿರುವುದು ಸಂತೋಷ ಸಮಾಚಾರ. ಪೂಜ್ಯ ಸ್ವಾಮಿಯವರ ತಪಸ್ಸಾ-ಧನೆಯೂ, ಅವರು ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸಿರುವ ಸೇವೆಯೂ ಸರ್ವವಿದಿತವಾಗಿವೆ. ಇಂತಹ ಮಹಾತ್ಮರನ್ನು ಕುರಿತು ಹಲವು ಲೇಖನಗಳನ್ನು ಸಂಗ್ರಹಿಸಿ ಗ್ರಂಥರೂಪ ದಲ್ಲಿ ಪ್ರಕಟಿಸಬೇಕೆಂದಿರುವುದು ಒಳ್ಳೆಯ ನಿಷ್ಕರ್ಷೆ.

ಕಾರ್ಯಕಾರಿ ಸಮಿತಿಯ ಯೋಜನೆಯು ಸೂಕ್ತವಾಗಿ ನಡೆಯಲೆಂದೂ, ಷಷ್ಟ್ಯಬ್ಧಿ ಸಮಾರಂಭವು ಯಶಸ್ವಿಯಾಗಿ ಜರುಗಲೆಂದೂ, ಪೂಜ್ಯ ಸ್ವಾಮಿಯವರ ಕೃಪಾಕಟಾಕ್ಷವು ಚಿರಕಾಲ ಭಕ್ತರಿಗೆ ಲಭಿಸಲೆಂದೂ ಹಾರೈಸುತ್ತೇನೆ.

೨೮-೭-೧೯೭೫. — ಬ. ದಾ. ಜತ್ತಿ.

मा. श्री काशीराया बसप्पा पाटील.
अध्यक्ष, स्वागत समिती आणि
सभापती अक्कलकोट तालूका पंचायत समिती,
मु. पो. अक्कलकोट. जि. सोलापूर.

सादर वि. वि.

आपले ता. १७-७-७५, क्रमांक ४८ चे पत्र मिळाले. परमपूज्य बालशिवयोगी श्री प. ब्र. गुरुशांत शिवाचार्य बृहनमठाध्यक्ष, अक्कलकोट, दुधनी आणि हिरेजेवर्गी महास्वामी यांचे षष्ठ्याब्धीचा समारंभ मोठ्या प्रमाणात आपण त्यांचे भक्तमंडळी साजरा करणार आहोत हे समजून मला समाधान व आनंद वाटला. आपण आपुलकीने हे मला कळविल्याबद्दल आणि त्यांच्या षष्ठ्याब्धी समारंभाच्या निमित्याने प्रकाशित करण्याच्या स्मरणिकेमध्ये माझ्या श्रध्देच्या विचार लेखाची अपेक्षा आपण व्यक्त केली आहे. त्या बद्दल मी आपले अंत:करणपूर्वक आभार मानतो.

समाज जीवन अनेक दृष्टीने जडत घडत जाते. माणसाचा स्वभाव हा सुखासिन असल्यामुळे त्याची ओढ भौतिक प्रगतीकडे स्वाभाविकच अधिक असतं. आणि केवळ भौतिक प्रगती करण्याकडे समाजाचे प्रयत्न असले तर समाजामध्ये समतोलपणा राहात नाही. विविध विकृत्या निर्माण होतात. आणि समाज जीवन अस्थिर होते. मानवी जीवन हे केवळ भौतिक प्रगतीनें आनंदी होणार नाही. तर त्याला अध्यात्मिक प्रभावनेची डोळस कार्यशील आणि सकस अशी जोड द्यावी लागते. त्या दृष्टीने धार्मिक प्रभावनेचे कार्य, सांस्कृतीक संस्कार योग्यरीतीने करण्याचे कार्य हे समाज जीवनाच्या दृष्टीने अतीशय महत्वाचे असते. धार्मिक ज्ञानाची साधना करून व्यक्तीगत जीवनामध्ये मोक्ष मिळविण्याचा प्रयत्न कांही मंडळीच्या कडून होत असतो. असा प्रयत्न करणारी मंडळी उच्चपदाला पोहंचतात आणि त्यांचे सर्वसाधारण मार्गदर्शन समाजाला होत राहाते. पण समाजातील सर्वच माणसे अशा धार्मिक प्रगतीला पोहोंचू शकत नाही- सामूहिक समाज जीवनाला अध्यात्मिक प्रभावनेची आवश्यक तेवढी दीक्षा मात्र देण्याची आवश्यकता असते.

या दृष्टीने ज्या प्रमाणे भौतिक प्रगती करण्यामध्ये उदयोगधंदयानां महत्व आहे, उदयोगधंदयाची आवश्यकता असते. त्याचप्रमाणे अध्यात्मिक प्रभावना निर्माण करण्यासाठी संत महात्म्याची आणि धार्मिक उपदेशाची व तत्वज्ञानाची आवश्यकता असतें. केवळ स्वत:चा आनंद आणि मोक्ष साधणाऱ्या संत महात्म्यानीं अधिक व्यापक दृष्टी ठेवून समाजाला सामुहिक रितीने धार्मिक प्रभावनेची दिक्षा देण्याचे प्रयत्न करण्याचे गरज असते. श्री गुरुशांत शिवाचार्य महास्वामीचे कार्य स्वत:चा मोक्ष साधणे आणि स्वत:बरोबर सामाजिक सामुहिक जीवन अध्यात्मिक दृष्टीनें संपन्न करण्यामध्ये व्यतित होत आहे आणि म्हणून त्यांचे कार्याला विशेष महत्व आहे.

सध्या शास्त्रीय संशोधन पराकोटीला पोहोंचले आहे. शास्त्रीय संशोधनामुळे भौतिक प्रगतीचे कांही नवे अविष्कार घडून आले आहेत. शास्त्रीय संशोधनामध्ये तीक्ष्ण व संहारक अस्त्रांची निर्मिती होत आहे. माणसा माणसामध्ये अविश्वास निर्माण होत आहे आणि त्या मुळे शास्त्रीय संशोधनानें निर्माण झालेली संहारक अस्त्रांचा दुरुपयोग होण्याची शक्यता आहे. मानवी समाज असा एका भयंकर संकटापर्यंत येऊन पोहोंचला आहे. शास्त्रीय संशोधन हे जसे संहारक कार्य करुशकते तसेच शास्त्रीय संशोधनाचा उपयोग मानवी जीवन संपन्न करण्याकडे होऊ शकतो. मात्र त्यासाठी शास्त्रीय संशोधन करणारी जी माणसे आहेत त्यांचे विचार आणि मनोभावनां हे मानवी जीवनाकडे तितक्याच आपुलकीने, कळकळीने आणि सहकार्याने पाहाण्याची

असली पाहीजे. या पूर्वी धार्मिक प्रभावनेंची जितकी आवश्यकता नव्हती त्यापेक्षा शतपटीने आज अध्यात्मिक व धार्मीक डोळस प्रभावनेची आवश्यकता निर्माण झालेली आहे. मानवी जीवनाला हा अध्यात्मिक डोळस पणा येऊशकला नाही तर मानवी जीवन हे दुःखमय होण्याची शक्यता आहे. या पार्श्वभूमिवर पाहाता श्री गुरुशांत शिवाचार्य महास्वामीचे जीवन कार्य अतिशय महत्वाचे वाटते. त्यांच्या जीवन कार्याची छाया आपल्या विभागात चांगल्या तऱ्हेने पसरलेली आहे. आणि तो अनुभव आपणासारखे कार्यकर्ते निरनिराळ्या सामाजिक, सार्वजनिक संस्थाकडून चांगल्या तऱ्हेनें घेत आहोत हेही अतिशय चांगले आणि योग्य असेच आहे.

श्री स्वामीजींच्या जीवनाला ६० वर्षे पूर्ण होत आहेत. ६० वर्षाच्या त्यांच्या तपश्चर्येतून निर्माण झालेले त्यांचे स्वयंसिद्ध ज्ञान समाजाला या पुढे अधीक चांगल्या तऱ्हेनें उपयोगी पडत राहील. असा मला विश्वास वाटतो. स्वामीजींच्या जीवनातील या मंगल क्षणी मी त्यां अंतःकरणपूर्वक अभिष्ट चिंतितो, त्यानां उदंड आयुष्य अपेक्षितो आणि त्याच्या कर्तुत्व शक्तीशाली अध्यात्मिक प्रभावनेचे कार्य अखंडपणें चालत राहो अशा शुभेच्छा व्यक्त करतो. कळावे ही विनंती.

आपला नम्र,
**रत्नप्पा कुंभार**
अन्न व नागरी पुरवठा मंत्री, महाराष्ट्रशासन,
सचिवालय, मुंबई ४०० ०३२

दिनांक २२ जुलै १९७५



॥ ॐ नमः पंचजगद्‌गुरुभ्यः ॥

माननीय अध्यक्ष,
परम पूज्य गुरुवर्य महास्वामीजी यांचे
षष्ठ्याब्धी स्वागत समिती,
अक्कलकोट.

सप्रेम जयहिंद :- परम पूज्य बालशिवयोगी श्री ष. ब्र. गुरुशांत शिवाचार्य बृहन्मठाध्यक्ष अक्कलकोट, दुधनी आणि हिरेजेवरगी महास्वामी यांचे षष्ठ्याब्धी आवाहन पत्रिका मिळाली. सविस्तार प्रकटन वाचून आनंद वाटला. आभारी आहे.

"परम पूज्य श्री महा स्वामीजी हे एक शांतवृत्तीचे, निर्मल चरित्राचे, भिष्मब्रह्मचारी, सुस्वभावी, सत्पुरुष आहेत. तसेच ते तपोनिष्ठ असून शिक्षणप्रेमी आहे. त्यांनी वीरशैव धर्म प्रचार व प्रसार तसाच शैक्षणिक प्रसार करीत आहे. पूज्य स्वामीजी हे दयाळू प्रेमळ व सर्वांशी मनमिळावू वृत्तीने राहून त्यांनी आतांपर्यंत अमूल्य अशी समाजसेवा धर्मनिष्ठेने केली आहे, आपण पूज्य महास्वामीजीनां साठ वर्षे पूर्ण झालेबद्दल जो हा षष्ठ्याब्धी कार्यक्रम आयोजित केला आहे. खरोखरच हे आपले कर्तव्य स्तुत्यप्रद आहे.

पूज्य महास्वामीजीना श्री ईश्वर दीर्घायुष्य देवो व अशीच त्यांचे हातून समाजसेवेचे कार्य अखंड घडत राहो हीच ईशचरणी प्रार्थना.

सोलापूर.
२-१२-१९७५

आपला नम्र,
**गंगाधर ग. गजभार स्वामी**, बी. कॉम्.
चिटणीस : श्रीमद्वीरशैव वारद संस्कृत पाठशाला,
प. मंगळवार पेठ,
सोलापूर. २

ಡಿ. ದೇವರಾಜ ಅರಸ್
ಮುಖ್ಯ ಮಂತ್ರಿ.



'ವಿಧಾನ ಸೌಧ'
ಬೆಂಗಳೂರು ೧.
ದಿನಾಂಕ ೧೬ ಆಗಸ್ಟ ೧೯೭೫

# ಸಂದೇಶ.

ಪರಮಪೂಜ್ಯರಾದ ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳ ಷಷ್ಟ್ಯಬ್ಧಿ ಸಮಾರಂಭವನ್ನು ಆಚರಿಸಲು ಯೋಚಿಸಿರುವುದು ಬಹು ಸಂತೋಷದ ವಿಷಯ. ಶ್ರೀ ಶ್ರೀ ಸ್ವಾಮಿಗಳ ಜೀವನದ ಹಲವಾರು ಪ್ರಮುಖ ಘಟನೆಗಳನ್ನು ನಿರೂಪಿ-ಸುವ ಲೇಖನ, ಕವನ, ಕಾವ್ಯಗಳನ್ನು ಆ ಸಂದರ್ಭದಲ್ಲಿ ಸಂಪಾದಿಸಿ, ಮರಾಠಿಯಲ್ಲಿ ಪ್ರಕಟಿಸುತ್ತಿರುವುದು ಒಂದು ಸ್ತುತ್ಯ ಕಾರ್ಯ.

ನಿಮ್ಮ ಈ ಕಾರ್ಯ ಯಶಸ್ವಿಯಾಗಲೆಂದೂ, ನಿಮ್ಮ ಈ ಗ್ರಂಥ ಇಡೀ ಜನಸಮುದಾಯಕ್ಕೆ ಧಾರ್ಮಿಕ ಹಾಗೂ ಸಾಮಾಜಿಕ ಜೀವನದಲ್ಲಿ ಪುನಶ್ಚೇತನ ನೀಡುವಂತಹ ಕೈಪಿಡಿಯಾಗಲೆಂದು ನಾನಾದರೂ ಆಶಿಸುತ್ತೇನೆ.

— ಡಿ. ದೇವರಾಜ ಅರಸ್.

**C. N. PATIL,**
B. Sc., B. L.
Minister for Forests





PHONE NO. 72163
VIDHANA SOUDHA
BANGALORE-1

Date : 29-7-1975

# ಸಂದೇಶ.

ಪೂಜ್ಯ ಶ್ರೀ ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳು ಆಧ್ಯಾತ್ಮ ಕ್ಷೇತ್ರದಲ್ಲಿ ಉನ್ನತ ಸಾಧಕರೆಂದು ಹೆಸರು ಗಳಿಸಿದ್ದಾರಲ್ಲದೆ ಶಿಕ್ಷಣಪ್ರೇಮಿ ಗಳೆಂದು ಅಪಾರ ಮನ್ನಣೆ ಪಡೆದಿದ್ದಾರೆ. ಅವರ ಪ್ರೇರಣೆಯಿಂದ ಪ್ರಾರಂಭ ವಾಗಿರುವ ಹಲವು ವಿದ್ಯಾಸಂಸ್ಥೆಗಳು, ಅರಿವಿನ ಬೆಳಕನ್ನು ಮೂಡಿಸುವಲ್ಲಿ ಅವರಿಗಿರುವ ಉತ್ಸುಕತೆಗೆ ದ್ಯೋತಕವಾಗಿದೆ.

ಪೂಜ್ಯ ಸ್ವಾಮಿಗಳ ಷಷ್ಟ್ಯಬ್ಧ ಸಮಾರಂಭವನ್ನು ಸೂಕ್ತರೀತಿಯಲ್ಲಿ ಆಚರಿಸುವುದು ಅತ್ಯಂತ ಉಚಿತ. ಸಮಾರಂಭ ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.

— ಸಿ. ಎನ್. ಪಾಟೀಲ
ಅರಣ್ಯ ಸಚಿವರು.

|| ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

**ಧರ್ಮಕ್ಕಾಗಿ ಏಳಿರಿ ! ಧರ್ಮಕ್ಕಾಗಿ ಬಾಳಿರಿ ! ಧರ್ಮಕ್ಕಾಗಿ ಆಳಿರಿ ! ಧರ್ಮಕ್ಕಾಗಿ ತಾಳಿರಿ !**


**ಶ್ರೀ ಮುಕ್ತಿಮಂದಿರ ಧರ್ಮಕ್ಷೇತ್ರ**
ಪೋಸ್ಟ : ಹರ್ಲಾಪೂರ.
ಜಿಲ್ಲಾ : ಧಾರವಾಡ.
ಫೋನ ನಂ. 22





**ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಸಂಸ್ಥಾನಮಠ**
ಪೋಸ್ಟ : ಬಾಳೆಹೊನ್ನೂರು
ಫೋನ ನಂ. 24


ಗೆ. ನಂ. ೩೦೪೭

ತಾ. ೨೨–೭–೧೯೭೫.

ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ! ಮಾನವ ಧರ್ಮಕ್ಕೆ ಜಯವಾಗಲಿ ! ನಾಡು ಧರ್ಮಸಾಮ್ರಾಜ್ಯವಾಗಲಿ ! ಭಕ್ತಿಯುತ ಬೀಡಾಗಲಿ ! ಶಾಂತಿ ಸದನವಾಗಲಿ ! ನೀತಿಯ ನಲೆವನೆಯಾಗಲಿ ! ಶೌರ್ಯ, ಧೈರ್ಯ, ಔದಾರ್ಯ ಗಾಂಭೀರ್ಯಗಳಾಗರವಾಗಲಿ ! ಸೌಜನ್ಯ ಸಮಭಾವನೆ, ಸದ್ಗುಣಗಳ ರಕ್ಷಣಾವಲಯವಾಗಲಿ ! ಸಂಯಮ ಕರ್ಮಾನುಷ್ಠಾನಗಳ ಕ್ಷೇತ್ರವಾಗಲಿ !

ಪ್ರಪಂಚಕ್ಕೆ ಆದರ್ಶವಾಗಲಿ ! ಧರ್ಮವೇ ಜೀವನವು, ಧರ್ಮಕ್ಕೆ ಅಳಿವಿಲ್ಲ, ಧರ್ಮವನ್ನು ಬಿಟ್ಟರೆ ವಿಶ್ವಕ್ಕೆ ಉಳಿವಿಲ್ಲ ! ವಿಜ್ಞಾನ, ನಾಗರಿಕತೆ, ಪ್ರಬಲ ರಾಜಕೀಯಗಳ ಸಬಲ ಸಂಘರ್ಷದಲ್ಲಿ ಎಂದೂ ಎಲ್ಲಿಯೂ ಧರ್ಮದ ಕೊಲೆಯಾಗದಿರಲಿ ! ಭೀತಿ ಇಲ್ಲದ ಶಾಸನ, ನೀತಿ ಇಲ್ಲದ ಶಿಕ್ಷಣ, ಮಿತಿ ಇಲ್ಲದ ಜೀವನ, ಸೀಮಾತೀತ ಸ್ವಾತಂತ್ರ್ಯಗಳು, ರಾಷ್ಟ್ರವಿಘಾತಕಗಳು, ಶಾಸ್ತ್ರನಿಷ್ಠೆ, ಸತ್ಕರ್ಮಾನುಷ್ಠಾನ ಗುರುದೇವತಾ ಭಕ್ತಿಗಳು ಸುಖ–ಶಾಂತಿ ಕಾಮುಕನಾದ ಜೀವಾತ್ಮನಿಗೆ ಆರಲಾರದ ದಾರಿ ದೀಪಗಳು !

ಶ್ರೀಮದ್ವೇದವೇದಾಂತ ಸಿದ್ಧಾಂತ ಪುರಾಣಾಗಮೇತಿಹಾಸ ಸಕಲಶಾಸ್ತ್ರ ಸುಪ್ರಸಿದ್ಧಷ್ಟಾವರಣ ಪಂಚಾಚಾರ ಷಟಸ್ಥಲಾದಿ ಸರ್ವಾಂಗ ಸಂಪೂರ್ಣ ಶ್ರೀಮದ್ವೀರಶೈವ ಮಹಾಮತಸ್ಥಾಪನಾಚಾರ್ಯವರ್ಯ ಶ್ರೀ ಜಗದ್ಗುರು ರೇಣುಕ ಭಗವತ್ಪಾದ ಮಹಾಚಾರ್ಯ ಪರಂಪರಾಗತ ಭದ್ರತರ ಭದ್ರಾತೀತ ಭಾಸಮಾನ ಮಲಯಾಚಲ ಮಧ್ಯ ವಿದ್ಯೋತಮಾನ ಸಾಕ್ಷಾದ್ಭೂಕೈಲಾಸ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ

**ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಗಂಗಾಧರ ಮಹಾರಾಜ ಶಿವಯೋಗಿ ದೇಶಿಕೇಂದ್ರ ಭಗವತ್ಪಾದ ಶಿವಾಚಾರ್ಯ ಮಹಾಸ್ವಾಮಿನಾಂ ದಿವ್ಯಕೃಪಾಸನ್ನಿಧಾನೇನ :—**

ಪರಮ ಸದ್ಗುರುಪದ ನಖಚಂದ್ರ ರುಜಿರುಂದ್ರ ಚಂದ್ರಿಕಾಚರಚಂಚ್ಚಕೋರಾಯಮಾಣ ಕೇವಲಾಸ್ಮದೀಯ ಕಾರುಣ್ಯಾಮೃತ ಸರಸೀಮರಾಳೋಪಮಾನರಾದ :

ಶ್ರೀಮಾನ್ ಧರ್ಮಪ್ರಿಯ ಪಿ. ಆಯ್. ಪಾಟೀಲರು, ಗುಲಬರ್ಗಾ ಇವರಿಗೆ

“ ಸಕಲ ಸನ್ಮಂಗಳಾನಿ ಭವಂತು ” ಇತಿ ಸಪ್ರೇಮ ಶಿವಸ್ಮರಣಪೂರ್ವಕ ಕೃತೈಕಾಲಿಕಾನಂತ ಶಿವಾಶೀರ್ವಾದಗಳು ಶ್ರೀ ಮಹಾ ಸನ್ನಿಧಿಯ ಲೋಕ ಕಲ್ಯಾಣಾರ್ಥವಾಗಿ ಶ್ರೀ ಶಿವಲಿಂಗ ತಪೋನುಷ್ಠಾನ ಸ್ವಾಧ್ಯಾಯಪ್ರವಚನ ಪ್ರಭೃತಿ ಶಿವಮಹಾವ್ರತಗಳನ್ನಾಚರಿಸುತ್ತ ಶ್ರೀ ಶಿವಾನಂದಾರೋಗ್ಯ ಭಾಗ್ಯದೊಡನೆ ಸುಖ ಪರಿಣಾಮಿಯಾಗಿರೋಣವಾಗಿದೆ. ಶ್ರೀ ಪರಮಾತ್ಮನು ನಿಮ್ಮೆಲ್ಲರಿಗೆ ಸದಾಯುರಾರೋಗ್ಯ ಪ್ರಮುಖ ಸೌಭಾಗ್ಯ ಪರಂಪರೆಯನ್ನೀಯಲಿ.

ನೀವು ಬಿನ್ನವಿಸಿದ ಪತ್ರವು ತಲುಪಿ ನಮ್ಮೆಲ್ಲರ ಆರೋಗ್ಯ ಆನಂದಗಳಿಗೆ ಅರಿಕೆಯಾಗಿ ಸಂತೋಷವಾಯಿತು.

ಜೇವರಗಿ ಶ್ರೀಗಳವರ ೭೦ ನೇ ವರ್ಷದ ಶಾಂತಿ ಸಮಾರಂಭದ ಸುಸಂದರ್ಭದಲ್ಲಿ ಅವರ ಜೀವನ ಚರಿತ್ರವನ್ನು ಪ್ರಕಟಿಸುವದು ಅತ್ಯಾವಶ್ಯಕವಾಗಿದೆ. ಪವಿತ್ರ ಚರಿತ್ರಗಳಿಂದ ಜನಮನದಲ್ಲಿ ಪವಿತ್ರ ಭಾವನೆಗಳುದಯಿಸುವವು.

**ಸಮಸ್ತ ಸನ್ಮಂಗಳಾನಿ ಭವಂತು**

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಧರ್ಮಕ್ಕಾಗಿ ಏಳಿರಿ ! ಧರ್ಮಕ್ಕಾಗಿ ಬಾಳಿರಿ ! ಧರ್ಮಕ್ಕಾಗಿ ಆಳಿರಿ ! ಧರ್ಮಕ್ಕಾಗಿ ತಾಳಿರಿ !



ತಾ. ೨೨-೭-೧೯೭೩.

ಗೆ. ನಂ. ಖಾಸ

ಶ್ರೀಮದ್ವೇದವೇದಾಂತ ಸಿದ್ಧಾಂತ ಪುರಾಣಾಗಮೇತಿಹಾಸ ಸಕಲಶಾಸ್ತ್ರ ಸುಪ್ರಸಿದ್ಧಷ್ಟಾವರಣ ಪಂಚಾಚಾರ ಷಟಸ್ಥಲಾದಿ ಸರ್ವಾಂಗ ಸಂಪೂರ್ಣ ಶ್ರೀಮದ್ವೀರಶೈವ ಮಹಾಮತಸ್ಥಾಪನಾಚಾರ್ಯವರ್ಯ ಶ್ರೀ ಜಗದ್ಗುರು ರೇಣುಕ ಭಗವತ್ಪಾದ ಮಹಾಚಾರ್ಯ ಪರಂಪರಾಗತ ಭದ್ರತರ ಭದ್ರಾತೀತ ಭಾಸಮಾನ ಮಲಯಾಚಲ ಮಧ್ಯ

ವಿದ್ಯೋತಮಾನ ಸಾಕ್ಷಾದ್ಭೂಕೈಲಾಸ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ

ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರ ರುದ್ರಮುನಿದೇವರಾಜ ದೇಶಿಕೇಂದ್ರ

ಮಹಾಸ್ವಾಮಿನಾಂ ದಿವ್ಯಕೃಪಾಸನ್ನಿಧಾನೇನ :—

ಪರಮ ಸದ್ಗುರುಪದ ನಖಚಂದ್ರ ರುಜಿರುಂದ್ರ ಚಂದ್ರಿಕಾಚರಚಂಚ್ಚಕೋರಾಯಮಾಣ

ಕೇವಲಾಸ್ಮದೀಯ ಕಾರುಣ್ಯಾಮೃತ ಸರಸೀಮರಾಳೋಪಮಾನರಾದ :

ಶ್ರೀಮಾನ್ ಧರ್ಮಪ್ರಿಯ ಪಿ. ಆಯ್. ಪಾಟೀಲರು, ಗುಲಬರ್ಗಾ ಇವರಿಗೆ

"ಸಕಲ ಸನ್ಮಂಗಳಾನಿ ಭವಂತು" ಇತಿ ಸಪ್ರೇಮ ಶಿವಸ್ಮರಣಪೂರ್ವಕ ಕೃತೈಕಾಲಿಕಾನಂತ ಶಿವಾಶೀರ್ವಾದಗಳು. ಶ್ರೀ ಮಹಾ ಸನ್ನಿಧಿಯ ಲೋಕ ಕಲ್ಯಾಣಾರ್ಥವಾಗಿ ಶ್ರೀ ಶಿವಲಿಂಗ ತಪೋನುಷ್ಠಾನ ಸ್ವಾಧ್ಯಾಯಪ್ರವಚನ ಪ್ರಭೃತಿ ಶಿವಮಹಾವ್ರತಗಳನ್ನಾಚರಿಸುತ್ತ ಶ್ರೀ ಶಿವಾನಂದಾರೋಗ್ಯ ಭಾಗ್ಯದೊಡನೆ ಸುಖ ಪರಿಣಾಮಿಯಾಗಿರೋಣವಾಗಿದೆ. ಶ್ರೀ ಪರಮಾತ್ಮನು ನಿಮ್ಮೆಲ್ಲರಿಗೆ ಸದಾಯುರಾರೋಗ್ಯ ಪ್ರಮುಖ ಸೌಭಾಗ್ಯ ಪರಂಪರೆಯನ್ನೀಯಲಿ. ತತಃ

ನೀವು ಬಿನ್ನವಿಸಿಕೊಂಡ, ಬಾಲಶಿವಯೋಗಿ ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯ ಬೃಹನ್ಮಠಾಧ್ಯಕ್ಷ ಅಕ್ಕಲಕೋಟ, ದುಧನಿ, ಹಿರೇಜೇವರಗಿ ಸ್ವಾಮಿಗಳವರ ಷಷ್ಟ್ಯಬ್ಧಿ ಆಹ್ವಾನ ಪತ್ರಿಕೆ ಮತ್ತು ಪತ್ರ ಶ್ರೀ ( ) ಸನ್ನಿಧಿಯವರಿಗೆ ತಲುಪಿ ತುಂಬಾ ಸಂತೋಷವಾಯಿತು. ಸ್ವಾಮಿಗಳವರು ಶಿಕ್ಷಣಪ್ರೇಮಿಗಳು ಮತ್ತು ಸರಳ ಹೃದಯಿಗಳಾಗಿದ್ದಾರೆ. ಅವರಲ್ಲಿ ಇದ್ದ "ಪಂಚ ಪೀಠಾಚಾರ್ಯರ" ಬಗ್ಗೆ ಭಕ್ತಿ, ನಿಷ್ಠೆ ಮತ್ತು ಗೌರವವೂ ಅಸಾಮಾನ್ಯವಾದುದು. ಅವರ ಷಷ್ಟ್ಯಬ್ಧಿಯ ಈ ಶುಭಸಮಾರಂಭದ ನಿಮಿತ್ಯ ನೀವು ಅವರ ವಿವಿಧ ಕಾರ್ಯಗಳನ್ನು ಕುರಿತು ಪಂಡಿತರಿಂದ ಬರೆಯಲ್ಪಟ್ಟ ಲೇಖನಗಳನ್ನು ಸಂಗ್ರಹಿಸಿ ಗ್ರಂಥವನ್ನು ಹೊರತರುತ್ತಿರುವ ವಿಷಯ ಗಮನಾರ್ಹವಾಗಿದೆ.

ಶ್ರೀ ಭಗವತ್ಪಾದ ರೇಣುಕಾಚಾರ್ಯರು ನಿಮ್ಮ ಈ ಆದರ್ಶ ಕಾರ್ಯದಲ್ಲಿ ಎಲ್ಲ ಸೌಲಭ್ಯಗಳನ್ನು ಒದಗಿಸಿ ನಿಮ್ಮ ಎಲ್ಲ ಕಾರ್ಯಕರ್ತರುಗಳಿಗೆ ಶ್ರೇಯಸ್ಸನ್ನು ದಯಪಾಲಿಸಲಿ.

ಇತ್ಯನಂತ ಶಿವಾಶಿಷಃ

॥ ಶ್ರೀ ಜಗದ್ಗುರು ಏಕೋರಾಮಾರಾಧ್ಯಃ ಪ್ರಸೀದಂತು ॥



ಶ್ರೀಮದ್ವೇದಾಗಮೋಪನಿಷಚ್ಛಾಸ್ತ್ರ ಪುರಾಣೇತಿಹಾಸ ಪ್ರಸಿದ್ಧ ಸನಾತನವಿಮಲ
ವೀರಶೈವ ಮಹಾಮತಸ್ಥಾಪನಾಚಾರ್ಯವರ್ಯ ಶ್ರೀಮದ್ರಾಮನಾಥ ಲಿಂಗಗರ್ಭಾವಿರ್ಭೂತ ಸಮಸ್ತ
ಪವಿತ್ರಕ್ಷೇತ್ರ ಮಸ್ತಕಮಣಿಭೂತ ಸಾಕ್ಷಾತ್ಕೈಲಾಸ ವಿರಾಜಮಾನ
ಶ್ರೀಮತ್ಕೇದಾರಮಹಾಕ್ಷೇತ್ರ ವಿದ್ಯೋತಮಾನ
ವೈರಾಗ್ಯಸಿಂಹಾಸನಾಧೀಶ್ವರ ರಾಜಾಧಿರಾಜಸಂಪೂಜಿತ " ರಾವಲ್ "ಇತಿಪದಪ್ರತಿಷ್ಠಿತ ಜಗದ್ಗುರು

**೧೦೦೮ ಶ್ರೀ ಶ್ರೀ ಶ್ರೀ ಶಾಂತಲಿಂಗ ಶಿವಾಚಾರ್ಯ ಮಹಾಸ್ವಾಮಿನಾಂ**

ದಿವ್ಯಸನ್ನಿಧಾನೇನ

ಶ್ರೀಗುರುಚರಣನಖಚಂದ್ರಸಾಂದ್ರರುಚಿರುಂದ್ರಚಂದ್ರಿಕಾಚಂಚಚ್ಚಕೋರಾಯಮಾಣರಾದ

ಶ್ರೀಯುತ ಪಿ. ಆಯ್. ಪಾಟೀಲ, ಗುಲಬರ್ಗಾ ಇವರಿಗೆ

ಮಂಗಲಾಶೀರ್ವಾದಪೂರ್ವಕ ಅಪ್ಪಣೆ ಕೊಡಿಸುವದೇನಂದರೆ :—

ಸನ್ನಿಧಿಯು ಪೀಠದಲ್ಲಿ ಇಲ್ಲದಮೂಲಕ ನಿಮ್ಮ ಪತ್ರವು ತಡಮಾಡಿ ತಲುಪಿ ಎಲ್ಲ ವಿಷಯವು ತಿಳಿದು ಸನ್ನಿಧಿಗೆ ತುಂಬಾ ಸಂತೋಷವಾಯಿತು.

ಶ್ರೀ ಷ. ಬ್ರ. ಬಾಲಶಿವಯೋಗಿ ಗುರುಶಾಂತ ಶಿವಾಚಾರ್ಯ ಸ್ವಾಮಿಗಳವರು ಬೃಹನ್ಮಠ, ಹಿರೇಜೇವರಗಿ ಇವರ " ಷಷ್ಟ್ಯಬ್ಧಿ " ಸಮಾರಂಭವನ್ನು ಮಾಘ ಶುದ್ಧದಲ್ಲಿ ಜರುಗಿಸಲು ನಿರ್ಧರಿಸಿದ್ದು ಸ್ತುತ್ಯವಾಗಿರುತ್ತದೆ. ಈ ಸುಸಮಯದಲ್ಲಿಯೇ ಶ್ರೀ ಪಂ. ಶಾಂತಶರ್ಮಾ, M. A. ಇವರ ಉತ್ತರಾಧಿಕಾರವನ್ನು ಇಟ್ಟುಕೊಂಡದ್ದು ಸಂತೋಷ.

ಈ ಯಾವತ್ತು ಮಂಗಲ ಕಾರ್ಯಕ್ರಮಗಳು ಸಾಂಗಮಂಗಲಮಯವಾಗಿ ಜರುಗಲೆಂದು ಹೃತ್ಪೂರ್ವಕವಾಗಿ ಹರಸಲಾಗುವದು. ಈ ಯಾವತ್ತು ಕಾರ್ಯಕ್ರಮಗಳು ಸಾಂಗಮಂಗಲಮಯವಾಗಿ ಜರುಗಿದುದಕ್ಕೂ ನಿಮ್ಮೆಲ್ಲರ ಆರೋಗ್ಯಭಾಗ್ಯಕ್ಕೂ ಅರಿಕೆಮಾಡಿಕೊಳ್ಳಬೇಕು.

ಸಮಸ್ತ ಸನ್ಮಂಗಳಾನಿಭವಂತು

ಇತ್ಯಾಶ್ರೀ.

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



ವೀರಶೈವ ಮತಸ್ಥಾಪನಾಚಾರ್ಯ ಶ್ರೀ ವಿಶ್ವಾರಾಧ್ಯ ಜ್ಞಾನಸಿಂಹಾಸನಾಧೀಶ್ವರ

ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು

ಜಂಗಮವಾಡಿಮಠ ಶ್ರೀಕ್ಷೇತ್ರ ಕಾಶಿ ವಾರಾಣಾಸಿ. (U. P.)

ಇವರ ಮಹಾಸನ್ನಿಧಾನದ

# ಆಶೀರ್ವಚನವು.

ವಾರಾಣಾಸಿ.

ದಿ. ೨೪-೯-೧೯೭೪.

ಷಟ್‌ಸ್ಥಳ ಬ್ರಹ್ಮಿಗಳಾದ, ಬಾಲಶಿವಯೋಗಿ ಶ್ರೀ ಗುರುಶಾಂತ ಶಿವಾಚಾರ್ಯ ಸ್ವಾಮಿಗಳು ಹಿರೇಜೇವರಗಿ ಇವರ ೬೦ ನೇ ವರ್ಷದ (ಷಷ್ಟ್ಯಬ್ಧಿ) ವರ್ಧಂತಿ ಸಮಾರಂಭ ವನ್ನು ಹಿರೇಜೇವರಗಿ, ದುಧನಿ, ಅಕ್ಕಲಕೋಟ ಮೊದಲಾದ ಸುತ್ತಮುತ್ತಲಿನ ಸದ್ಭಕ್ತರು ಇಟ್ಟು ಕೊಂಡಿರುವ ವಿಷಯವು ಶೃತವಾಗಿ ಮಹದಾನಂದವಾಯಿತು.

ಹಿರೇಜೇವರಗಿಯ ಶ್ರೀ ಬಾಲಶಿವಯೋಗಿಗಳು ಮೊದಲಿನಿಂದಲೂ ಈವರೆಗೂ ಸದಾಚಾರ ನಿರತರಾಗಿ, ಪೂಜಾನಿಷ್ಠರಾಗಿ, ತಪಸ್ವಿಗಳಾಗಿ, ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ. ಕ್ಷೇತ್ರಗಳಲ್ಲಿ ಸಮಾಜಾಭಿವೃದ್ಧಿ ಕಾರ್ಯಗಳನ್ನು ಮಾಡುತ್ತ ಜನಮನಂಗಳಲ್ಲಿ ಆದರಣೀಯರಾಗಿದ್ದಾರೆ.

ಯಾವ ಫಲಾಪೇಕ್ಷೆ ಇಲ್ಲದಲೇ ಸಮಾಜವೇ ತಮ್ಮ ಜೀವನ, ಧರ್ಮವೇ ತಮ್ಮ ಪ್ರಾಣ–ವೆಂದು ಅರಿತು ಅಹರ್ನಿಶ ಪ್ರಯತ್ನಿಸುತ್ತಿರುವದು ಶ್ರೀ ಸ್ವಾಮಿಗಳ ಆದರ್ಶ ಜೀವನವು.

ತಮ್ಮ ಮಠಗಳಲ್ಲಿ ಪ್ರತಿವರ್ಷ ಪುರಾಣ ಪ್ರವಚನಾದಿಗಳನ್ನು ನಡೆಯಿಸಿ ಸಾಮಾನ್ಯ ಜನತೆ ಯನ್ನು ಆಧ್ಯಾತ್ಮಿಕ ಮಾರ್ಗದತ್ತ ಒಯ್ಯುತ್ತಿರುವದು ಸರ್ವಶೃತವಾಗಿದೆ. ಇಷ್ಟೇ ಅಲ್ಲ, ಸಮಾಜವು ಸುಶಿಕ್ಷಿತವಾಗಿ ರಾಷ್ಟ್ರೈಕ್ಯತೆಯನ್ನು ಹೊಂದಲೆಂದು ಹಿರೇಜೇವರಗಿ ಮತ್ತು ದುಧನಿಗಳಲ್ಲಿ ಹೈಸ್ಕೂಲು ಗಳನ್ನು ಪ್ರಾರಂಭಿಸಿ ಇತರರಿಗೂ ಮಾರ್ಗದರ್ಶನವನ್ನು ಮಾಡಿದ್ದಾರೆ.

ಶ್ರೀ ಸ್ವಾಮಿಗಳು ಪ್ರಾರಂಭಿಸಿದ ಧಾರ್ಮಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಕಾರ್ಯ ಗಳನ್ನು ಪೂರ್ಣರೂಪಕ್ಕೆ ತಂದುಕೊಳ್ಳುವದು ಸಮಾಜದ ಆದ್ಯ ಕರ್ತವ್ಯವಾಗಿದೆ.

ಈ ಮುಂದಾದರೂ ಇದೇ ರೀತಿಯ ಆದರ್ಶಕಾರ್ಯಗಳು ಷ॥ ಬ್ರ॥ ಬಾಲಶಿವಯೋಗಿ ಶ್ರೀ ಗುರುಶಾಂತ ಶಿವಾಚಾರ್ಯ ಸ್ವಾಮಿಗಳವರಿಂದ ನಡೆದು ಮಾನವ ಸಮಾಜಕ್ಕೆ ಆದರ್ಶಪ್ರಾಯ ಗಳಾಗುವಂತೆ ಶ್ರೀ ಜಗದ್ಗುರು ಪಂಚಾಚಾರ್ಯರು ಅನುಗ್ರಹಿಸಲೆಂದು ಹರಸಿ ಆಶೀರ್ವದಿಸಲಾಗಿದೆ.

ಶಿವಮಸ್ತು ಭೂಯಾತ್

ನಂ. 10127 ॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥ ದಿ. 27-7-75



ಶ್ರೀಮದ್ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ

ಶ್ರೀ ೧೧೦೮ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ

ಶಿವಾಚಾರ್ಯ ಮಹಾಸ್ವಾಮಿಗಳವರು

ಶ್ರೀ ಜಗದ್ಗುರು ಶ್ರೀಶೈಲ ಸೂರ್ಯಸಿಂಹಾಸನ ಮಠ, ಶ್ರೀಶೈಲ (ಜಿ. ಕರ್ನೂಲ)

# ಶುಭ ಸಂದೇಶ.

ಹಿರೇಜೇವರಗಿ ಹಿರೇಮಠದ ಪಟ್ಟಾಧ್ಯಕ್ಷರೂ ಬಾಲಶಿವಯೋಗಿಗಳೂ ಆದ ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯರ ೬೦ ನೇ ವರ್ಷದ ಶಾಂತಿ ಮಹೋತ್ಸವವು ನೆರವೇರುವದು ತಿಳಿದು ನಮಗೆ ಅತ್ಯಂತ ಸಂತೋಷವೆನಿಸಿದೆ.

ಶ್ರೀಗಳವರು ಶಾಂತಮೂರ್ತಿಗಳೂ, ದಯಾಳುಗಳೂ ಯಾರನ್ನೂ ಎಂದೂ ನೋಯಿಸದೆ ಆಶೀರ್ವಾದ ಮಾಡುವ ಸದ್ಗುಣಿಗಳೂ ಆಗಿದ್ದಾರೆ.

ಶ್ರೀ ಜಗದ್ಗುರು ಪಂಚಪೀಠಗಳೆಂದರೆ ಇವರಿಗೆ ಪಂಚಪ್ರಾಣ. ಬಡವಿದ್ಯಾರ್ಥಿಗಳಿಗೆ ಇವರು ನೀಡುತ್ತಿರುವ ಆಶೀರ್ವಾದ ಅಪಾರ. ವಿದ್ಯಾಕ್ಷೇತ್ರದಲ್ಲಿ ಇವರ ಅಪಾರಪ್ರೇಮ ವರ್ಣನಾತೀತ. ನಿಗರ್ವ ಸ್ವಭಾವದಲ್ಲಿ ಇವರನ್ನು ಸರಿಗಟ್ಟುವ ವ್ಯಕ್ತಿ ಇನ್ನೂ ಪ್ರಪಂಚದಲ್ಲಿ ಯಾರೂ ಹುಟ್ಟಿಲ್ಲ. ಶಿವಪೂಜಾನಿಷ್ಠೆ, ತಲ್ಲೀನತೆ, ತಪೋನುಷ್ಠಾನ ಇವು ಇವರ ಜನ್ಮದ ಜೀವಾಳ.

ಶ್ರೀಶೈಲ ಜಗದ್ಗುರು ಪಂಡಿತಾರಾಧ್ಯ ಶಾಖೆಯವರಾದ ಸದರಿ ಶ್ರೀಗಳವರು ತಮ್ಮ ಪೀಠದ ಸೇವೆಯನ್ನು ತ್ರಿಕರಣಪೂರ್ವಕ ಸಲ್ಲಿಸಿ ಆದಿ ಜಗದ್ಗುರು ಪಂಡಿತಾರಾಧ್ಯರ ಪೂರ್ಣ ಕೃಪೆಗೆ ಪಾತ್ರರಾಗಿ ತಮ್ಮ ಉತ್ತರಾಧಿಕಾರಕ್ಕೆ ಯೋಗ್ಯ ವಿದ್ವಾಂಸ 'ವಟು' ವನ್ನು ಈಗಾಗಲೇ ಸಿದ್ಧಪಡಿಸಿದ್ದಾರೆ.

ಇಹಲೋಕ ವಾಸಕ್ಕಿಂತಲೂ ಪರಮಾತ್ಮನ ಪಾರಮಾರ್ಥಿಕ ಲೋಕವು ಇವರಿಗೆ ಬಹಳ ಪ್ರಿಯಕರವಾದುದೆಂಬುದಕ್ಕೆ ಇವರು ೬೦ ವರ್ಷ ತುಂಬುವುದಕ್ಕಿಂತ ಮುಂಚೆಯೇ ೧೦ ವರ್ಷಗಳ ಮೊದಲೇ ತಮ್ಮ ಸಮಾಧಿಮಂದಿರವನ್ನು ಸಿದ್ಧಮಾಡಿಕೊಂಡುದು ಪ್ರತ್ಯಕ್ಷ ಪ್ರಮಾಣವಾಗಿದೆ. ಆಗ ಈ ಮಂದಿರ ರಚನೆಯಾದಾಗ ಶಿಷ್ಯರಿಗೆ ಈ ವಿಚಾರ ತಿಳಿದುಬಂದು ಅನೇಕ ಶಿಷ್ಯರು ಕಣ್ಣೀರು ಹಾಕಿದರು. ಆಗ "ಶ್ರೀ" ಗಳವರು ಒಂದೇ ಮಾತನ್ನು ಶಿಷ್ಯರಿಗೆ ಉಪದೇಶ ಮಾಡಿದರು. "ಮಣ್ಣಿನ ಘಟ ಎಂದಿಗಾದರೂ ಮಣ್ಣಿಗೆ ಸೇರುತ್ತದೆ. ಜೀವಜ್ಯೋತಿ ಪರಂಜ್ಯೋತಿಯಲ್ಲಿ ಸೇರುತ್ತದೆ." ತಮ್ಮಂದಿರಾ! ಇದಕ್ಕೇಕೆ ದುಃಖ, ಸಂತೋಷದಿಂದ ನೀವು ಧರ್ಮವನ್ನು ಆಚರಣೆ ಮಾಡಿರಿ. ಎಂದು ಅವರನ್ನು ಶಾಂತಿಮಾಡಿದ ದೃಶ್ಯ ಇಂದಿಗೂ ನಮ್ಮ ಕಣ್ಮುಂದೆ ಕಟ್ಟಿದಂತಿದೆ.

ಪರಮ ತಪೋನಿಧಿಗಳಾದ ಶ್ರೀಗಳು ಒಂದುಕಡೆ ಕನ್ನಡಿಗರನ್ನೂ ಒಂದುಕಡೆ ಮರಾಠಿಗರನ್ನು ಒಂದೇ ದೃಷ್ಟಿಯಿಂದ, ಕರುಣೆಯಿಂದ, ಸಮತೆಯಿಂದ, ಸಮಾಧಾನದಿಂದ ಆಶೀರ್ವದಿಸುತ್ತಿದ್ದಾರೆ. ಶ್ರೀ ಜಗದ್ಗುರು ಪಂಡಿತಾರಾಧ್ಯರು ದಯಾಘನರಾದ ಶ್ರೀ ಮಲ್ಲಿಕಾರ್ಜುನ, ಭ್ರಮರಾಂಬೆಯರು ಶ್ರೀಗಳವರಿಗೆ ನೂರುವರ್ಷ ಪೂರ್ಣ ಆಯುಷ್ಯವನ್ನೂ ತಪೋನುಷ್ಠಾನ ಸಾಮರ್ಥ್ಯವನ್ನು ಕೊಟ್ಟು ಕಾಪಾಡಲೆಂದು ಆಶೀರ್ವದಿಸುತ್ತೇವೆ.

ಇತ್ಯಾಶಿಷಃ

ಶ್ರೀ ಬಾಲಶಿವಯೋಗಿ

# ಶ್ರೀ ಷ. ಬ್ರ. ಗುರುಶಾಂತಮೂರ್ತಿ ಶಿವಾಚಾರ್ಯ

ಹಿರೇಜೇವರಗಿ

## ಇವರ ಷಷ್ಟ್ಯಬ್ಧಿ ಸಮಾರಂಭ ವೈಭವದಿಂದ ನಡೆಯಲಿ.

++++++++

ಶ್ರೀ ಷ|| ಬ್ರ|| ಗುರುಶಾಂತಮೂರ್ತಿ ಶಿವಾಚಾರ್ಯ ಇವರು ಬಾಲ್ಯತನದಿಂದಲೇ ಸ್ಥಿರಮನಸ್ಸಿನವರಾಗಿ ಜ್ಞಾನ ವೈರಾಗ್ಯವೆನಿಸಿ "ಶಿವ ಸೋಹಂ ಜ್ಞಾನದ ಚಿಂತನೆಯನ್ನು ಮಾಡುತ್ತ ಜಪತಪ ಅನುಷ್ಠಾನ ಆಚರಿಸುತ್ತ ಕ್ರಿಯಾಚಾರವೆನಿಸಿ" ಜನತೆಯನ್ನು ಉದ್ಧರಿಸುತ್ತ ದ್ವಿವಿಭಕ್ತರಾಗಿರುವ ಕರ್ನಾಟಕ ಮತ್ತು ಮಹಾರಾಷ್ಟ್ರ ದೇಶದ ಜನತೆಗೆ ಒಳ್ಳೇ ಮಾರ್ಗದರ್ಶಕರಾಗಿದ್ದಾರೆ. ಅವರಿಂದ ಜ್ಞಾನವನ್ನು ಪಡೆದುಕೊಂಡು ಸಾವಿರಾರು ಜನರು ಕೃತಾರ್ಥರಾಗಿದ್ದಾರೆ ಮತ್ತು ಆಗುತ್ತಾ ಇದ್ದಾರೆ. ಶ್ರೀ ಸ್ವಾಮೀಜಿಯವರು ಯಾವ ಕಾಲದಲ್ಲಿಯೂ ಮತ್ತು ಯಾವ ಸ್ಥಳಕ್ಕೆ ಹೋದರೂಕೂಡಾ ಯಾವ ಪ್ರಕಾರದಿಂದಲು ಭೇದಭಾವವೆಣಿಸದೆ ಕೂಸಿಗಿಂತಲೂ ಕೂಸಾಗಿ, ಹಿರಿಯರಲ್ಲಿ ಹಿರಿಯರೆನಿಸಿ ಜ್ಞಾನಿಗಳಲ್ಲಿ ಜ್ಞಾನವಂತರೆನಿಸಿ ದೃಢಭಕ್ತಿವುಳ್ಳವರಿಗೆ ಅಪರೂಪ, ಅಮೃತರೂಪವಾಗಿ ಭೇಟಿಕೊಟ್ಟು ಅಮೃತಮಯ ಮಾತನಾಡಿ ಸಂತೈಸುವರು. ತಮ್ಮ ಕಾರುಣ್ಯ ಕಟಾಕ್ಷದಿಂದ ಸದ್ಭಕ್ತ ಶಿಷ್ಯ ವೃಂದವನ್ನು ಕಾಪಾಡುತ್ತ ಅಹಂಕಾರವನ್ನು ದೂರೀಕರಿಸುತ್ತ ಮಮತೆಯಿಂದ "ಸೋಹಂ ಜ್ಞಾನ"ವನ್ನು ನೆನೆಸುತ್ತ ಪಂಚಾಚಾರ್ಯ ಪೀಠಗಳಿಗೆ ಅಭಿಮಾನಿಯಾಗಿ ಪಂಚಬ್ರಹ್ಮ ಮಂತ್ರವನ್ನು ಜಪಿಸುತ್ತ ಶಾಂತ ಚಿತ್ತದಿಂದ ಇರುತ್ತಿರುವವರೇ ಶ್ರೀ ಷ|| ಬ್ರ|| ಗುರುಶಾಂತಮೂರ್ತಿಯವರೆಂದು ನಾವು ಅನ್ಯೋನ್ಯಭಾವದಿಂದ ಕೊಂಡಾಡಬೇಕಾಗಿದೆ.

ಮಾನವನ ಷಷ್ಟ್ಯಬ್ಧಿ ಪೂಜೆಯ ಮರ್ಮವು ವೈಜ್ಞಾನಿಕರೂಪದಲ್ಲಿ ನಿಗೂಢವಾಗಿ ಇರುತ್ತದೆ. ಅದು ಏನಂದರೆ : ಅತಿ ಸಂಕ್ಷಿಪ್ತರೂಪದಲ್ಲಿ ತಿಳಿಸುತ್ತೇನೆ. ಮಾನವನು ತಾಯಿಯ ಗರ್ಭದಿಂದ ಭವಕ್ಕೆ ಜನನ ರೂಪದಲ್ಲಿ ಬಂದದಿನ ಮೊದಲಿನ ಉಸಿರಾಟಕ್ಕೆ ಚಲ-ವಿಚಲವಾಗುತ್ತಿರುವ "ಬ್ರಹ್ಮರಂಧ್ರ" ಸ್ಥಾನದ ಮೇಲೆ ಇರುತ್ತಿರುವ ಮೆದಳು ಬೇರೆ ಬೇರೆ ರೂಪಾಂತರ ಹೊಂದಿ "ಬ್ರಹ್ಮರಂಧ್ರ" ಮಾರ್ಗವಾಗಿ ಸುಷುಮ್ನಾ ರಜ್ಜು ಮುಖಾಂತರ ಮೂಲಾಧಾರ ಚಕ್ರದ ಪೀಠವನ್ನು ಒಳಸಿ ಅದು ಪಾದದ ಅಂಗುಷ್ಠದವರೆಗೆ ಪ್ರವಹಣ ರೂಪದಲ್ಲಿ ಬರಬೇಕಾದರೆ ಅರವತ್ತು ವರುಷಗಳು ಹಿಡಿಯುತ್ತವೆ. ಈ ಅವಧಿಯ ನಿಯಮಕ್ಕೆ "ನರಾಯಣ"ವೆಂದು ಕರೆಯುತ್ತಾರೆ ಇಲ್ಲವೆ ಷಷ್ಟ್ಯಬ್ಧಿ ಎಂದು ಸಂಬೋಧಿಸುತ್ತಾರೆ.

ಮೇಲೆ ತಿಳಿಸಿರುವ ನಿಯಮಕ್ಕೆ ಅನುಸಾರವಾಗಿ ಸೂರ್ಯ ಗೋಲಚಕ್ರ "ಪ್ರಭವಾದಿ" ಅರವತ್ತು ಸಂವತ್ಸರಗಳು ತಿರುಗಬೇಕಾದರೆ ಅರವತ್ತು ವರ್ಷಗಳು ಹಿಡಿಯುತ್ತವೆ. ಇದು ನರಾಯಣ ತತ್ವಕ್ಕೆ ಹೋಲುತ್ತಾ ಇರುವದರಿಂದ (ನರ=ಮಾನವ) ಅಂದರೆ ಸಾಮ್ಯತಾ ತೋರುತ್ತಿರುವದರಿಂದ ಸೂರ್ಯ ಗೋಲಚಕ್ರಕ್ಕೆ ಸೂರ್ಯನಾರಾಯಣವೆಂದು ಹೆಸರು ಬಂದಿದೆ, ಅದಕ್ಕೆ ಇವತ್ತಿಗೆ ಸೂರ್ಯನಾರಾಯಣವೆಂದು ಕರೆಯುತ್ತಿರುತ್ತಾರೆ.

ಈ ವಿಷಯವನ್ನು ಭಾರತದಲ್ಲಿ ಇರುತ್ತಿರುವ ಪ್ರಮುಖ ಯೋಗಿವರ್ಯರಿಗೆ ಪರಿಚಯವಿನಃ ಬೇರೆ ಯಾರಿಗೂ ಇರುವದಿಲ್ಲ.

ಶ್ರೀ ಷ|| ಬ್ರ|| ಗುರುಶಾಂತಮೂರ್ತಿ ಶಿವಾಚಾರ್ಯ ಇವರ ಪುಣ್ಯ ಪ್ರಕೃತಿಯ ನರಾಯಣ ಅಂದರೆ ಅರವತ್ತು ವರ್ಷದ ಒಂದು ಚಕ್ರ ಮುಗಿದು ಎರಡನೆಯದರಲ್ಲಿ ಪದಾರ್ಪಣವಾಗಿದೆ. ಆದ್ದರಿಂದ ಷಷ್ಟ್ಯಬ್ದಿ ಪೂರ್ತಿ ಶಾಂತಿ ಸಮಾರಂಭ ನಡೆಯಬೇಕಾಗಿದೆ. ಅದರ ಸಲುವಾಗಿ ಅಕ್ಕಲಕೋಟ, ದುಧನಿ, ಹಿರೇಜೇವರಗಿ, ಮೈಂದರಗಿ, ಹಂಜಗಿ ಮೊದಲಾದ ಗ್ರಾಮಗಳಲ್ಲಿ ಇರುತ್ತಿರುವ ಸದ್ಭಕ್ತ ಶಿಷ್ಯವೃಂದದವರು ಸ್ವಾಮಿತಪೋಬಲವನ್ನು ಸ್ಮರಿಸಿ ಒಳ್ಳೇ ವೈಭವದಿಂದ ಕಾರ್ಯಾಚರಣೆಯನ್ನು ಆಚರಿಸುವಿರೆಂದು ಹಾರೈಸುವೆ.

— ಸ್ವಾಮಿ ಹಿರೇಮಠ

ಖಗೋಳ ವಿಜ್ಞಾನಿ, ಪಡನೂರು, ಮು|| ಮೈಸೂರು.

(ಪಂಚಾಚಾರ್ಯ ಪ್ರಭಾದಿಂದ

## ಸ್ವಾಗತ ಸಮಿತಿಯ ಸದಸ್ಯರು.



ಎಡದಿಂದ ಬಲಕ್ಕೆ
ಕುಳಿತವರು : ಶಿವಶಂಕರ ಲಿಂಬಿತೋಟಿ. ಹನುಮಂತರಾವ ದೇಸಾಯಿ. ಥಾನಪ್ಪ ಥೋತ್ರೆ ಸಾತಲಿಂಗಪ್ಪ ಮೇತ್ರೆ. ಶಿಟ್ಟೆಪ್ಪ ಚಾಂದೋಡೆ.
ನಿಂತವರು : ಸಿದ್ರಾಮಪ್ಪ ಮಂಠಾಳಿ. ಮಲ್ಲಿಕಾರ್ಜುನ ಜಕಾಪೂರೆ. ಸಾತಯ್ಯ ಸ್ವಾಮಿ.



ಕೋಶಾಧ್ಯಕ್ಷ :
ಶ್ರೀ ಧಾನಪ್ಪ ಸಂಗಪ್ಪ ಧೋತ್ರೆ
ಅಕ್ಕಲಕೋಟ.

ಕಾರ್ಯದರ್ಶಿಗಳು :-



ಶ್ರೀ ಶಿವಶಂಕರ ಲಿಂಬಿತೋಟೆ,
ಅಕ್ಕಲಕೋಟ.



ಶ್ರೀ ನಾಗಯ್ಯ ಹಿರೇಮಠ
ಅಕ್ಕಲಕೋಟ.



ಶ್ರೀ ಪಿ. ಆಯ್. ಪಟೇಲ
ಹಿರೇಜೇವರಗಿ.



ಸಭಾಸದ :
ಶ್ರೀ ಸಿದ್ರಾಮಪ್ಪ ಕಲ್ಲಪ್ಪ ಮಂಠಾಳೆ
ಅಕ್ಕಲಕೋಟ.







ಶ್ರೀ. M. C. ಅಡವಿತೋಟೆ, ಅಕ್ಕಲಕೋಟ.

( ಕಾರ್ಯದರ್ಶಿ )

|| ಶ್ರೀ ಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

ಶ್ರೀ ಷ. ಬ್ರ. ಪರಮಪೂಜ್ಯ ಬಾಲಶಿವಯೋಗಿ ಗುರುಶಾಂತ ಶಿವಾಚಾರ್ಯರು
ಬೃಹನ್ಮಠ ಅಕ್ಕಲಕೋಟ, ದುಧನಿ ಮತ್ತು ಹಿರೇಜೇವರಗಿ ವಿರಾಜಮಾನ ಮಹಾಸ್ವಾಮಿಗಳವರ
ಷಷ್ಟ್ಯಬ್ಧಿ ಸಮಾರಂಭದಲ್ಲಿ ಸಮರ್ಪಿಸಿರುವ

# ನವರತ್ನಮಾಲಾ

( ಭಾಮಿನಿ ಷಟ್ಪದಿ )

ಶಿವನ ಪ್ರೇರಣೆಯಿಂದಲಲ್ಲದೆ ।
ಭುವಿಯೊಳಗೆ ಗುರುಪಟ್ಟ ದೊರೆಯದು ।
ತವೆ ದುಧನಿ ಜೇವರಗಿ ಅಕ್ಕಲಕೋಟ ಪುರಗಳಲೀ ॥
ಅವಿರತಂ ಹಿರೆಮಠಗಳೊಪ್ಪಿವೆ ।
ಅವಕೆ ಅಧಿಪರು ಬಂದು ನಿಗ್ರಹಿ ।
ಸವಿನಯರು ಸನ್ಮಾನ್ಯ ಶ್ರೀ ಗುರುಶಾಂತಯೋಗಿಗಳೂ
॥ ೧ ॥

ರುದ್ದೆವಾಡಿಗಿ ಹಿರೆಮಠದ ಗುರು ।
ಸಿದ್ಧ ಸ್ವಾಮಿಯ ಪತ್ನಿ ದಾನಮ ।
ರಿದ್ದರತಿ ಧಾರ್ಮಿಕರು ಇವರಿಗೆ ಚಲುವಮಗನುದಿಸೇ ॥
ಬುದ್ಧಿವಂತರು ಶಿಶುವನೀಕ್ಷಿಸಿ ।
ಸದ್ದಯಾನಿಧಿ ಶಿವನಕಲೆ ಇದು ।
ಉದ್ಧರಿಪನಜ್ಞರನುಯನುತಿರೆ ಬಾಲ್ಯವನು ಕಳೆದೊ
॥ ೨ ॥

ಮುಂದೆ ಶಾಲೆಗೆ ನಡೆದು ಕಲಿಯಲು ।
ಬಂದುದಾತಗೆ ಸಕಲ ವಿದ್ಯೆಯು ।
ಅಂದು ಅಕ್ಕಲಕೋಟ ದುಧನೀ ಮುಖ್ಯ ಮಠಗಳಿಗೇ ॥
ಬಂದುರದ ಗುರುಪಟ್ಟಗಟ್ಟಲಿ ।
ಕೆಂದು ಕೇಳಲು ಪುತ್ರವರ್ಗವ ।
ದೆಂದು ಒಪ್ಪುತ ಕೊಟ್ಟರಾತನ ತಾಯಿ ತಂದೆಗಳೂ
॥ ೩ ॥

ಸಿರಿಗಿರಿಯ ಶ್ರೀ ಸೂರ್ಯಪೀಠಕೆ ।
ನಿರುತ ಸಲುವಾ ಜೇವರಗಿಮಠದೊಳ್ ।
ಪರಮ ಕ್ರಿಶ್ಚನ್‌ಶಕದ ಹತ್ತೊಂಭತ್ತುಮೂರ್ಮೂರೊಳ್
ಪುರಜನರು ಗುರು ಚರರ ಭಕ್ತರ ।
ನೆರಹಿ ಪಟ್ಟವಗಟ್ಟ ವಿಭವದಿ ।
ಗುರುಶಾಂತ ಶಿವಯೋಗಿ ನಾಮವನಿತ್ತು ನಮಿಸಿದರೂ
॥ ೪ ॥

ಗುರುವು ಪಟ್ಟಾಧ್ಯಕ್ಷ ನಾನೆಂ ।
ದ್ಧರುಷದಿಂ ಮೈಮರೆದು ಕೂಡದೆ ।
ನಿರುತ ಮೂರುಂ ಕಾಲದೊಳು ಶಿವಲಿಂಗದೇವನನೂ ।
ಪರಿಪರಿಯ ವಿಧದಿಂದಲರ್ಚಿಸಿ ।
ಹರಮನುವ ಜಪಿಸುತ್ತ ಹರುಷದಿ ।
ಪರಮ ಪಾದೋದಕ ಪ್ರಸಾದವ ಸೇವಿಸುತ್ತಿಹರೂ
॥ ೫ ॥

ನೆರಹಿಭಕ್ತರ ವೀರಶೈವದ ।
ಪರಮ ಅಷ್ಟಾವರಣ ಮಹಿಮೆಯ ।
ನರುಹಿ ಈತನು ಬರಿದೆ ಕೆಡಿಸಲುಬೇಡಿರೈ ಬಹುಜೋಕೆ
ಸರಸಪೀಯೋಷೋಪ ವಾಕ್ಯವ ।
ಕರಮುಗಿದು ಕೇಳುತ್ತ ಇಂತಹ ।
ಗುರುಗಳಿರ್ದೊಡೆ ಲೋಕಪಾವನವೆಂದು ನುತಿಸುವರೂ
॥ ೬ ॥

ಕಾಳಿ ಶೈಲದಿ ಬಿಲ್ವ ಬನದಲಿ ।
ಮೇಲು ಅರಸರ ದಿವ್ಯ ತೋಟದಿ ।
ಶೀಲ ಸದ್ವ್ರತದುಗ್ರತಪವನು ಗೈದ ಶಿವಯೋಗಿ ॥
ಬಾಲಕರಿಗತ್ಯುಚ್ಚ ಶಿಕ್ಷಣ ।
ದಾಲಯಂಗಳ ನೆಲಸಿ ನಡೆಸಿಹ ।
ರಾಲಸಿತ ದುಧನಿಯಲಿ ಜೇವರಿಗೆಂಬ ಗ್ರಾಮದಲೀ
॥ ೭ ॥

ಇವರ ಶಾಂತಿಗೆ ಸುಗುಣ ಸದ್ವ್ರತ ।
ಶಿವಕಲೆಗೆ ವಿದ್ಯಾಭಿಮಾನಕೆ ।
ತವೆಮೆಚ್ಚಿ ಸದ್ಭಕ್ತರುಂ ಷಷ್ಟ್ಯಬ್ಧದುತ್ಸವವಾ ॥
ಜವದಿ ಅಕ್ಕಲಕೋಟ ನಗರದಿ ।
ಸುವಿವೇಕದಿಂ ಗೈದೊಡಿಲ್ಲಿಗೆ ।
ಭುವಿಯೊಳೊಪ್ಪುವ ಗುರುಗಳುಂಪಂಡಿತರು ನೆರೆದಹರು
॥ ೮ ॥

ವೇದ ಘೋಷವು ನಿಗಮ ಸಂಘವ ।
ನೋದುತಿಹವಿಭು ಥಾಳಿ ಪರಿ ಪರಿ ।
ನಾದಗಳು ಉಲಿಯುತ್ತಲಿರುತಿರೆ ಗುರುಶಾಂತದೇವಂಗೆ
ಆದರದಿ ಮಂಗಲವ ಪಾಡುತ ।
ಮೋದದಿಂ ನವರತ್ನಮಾಲೆಯ ।
ಶ್ರೀ ದಯಾನಿಧಿಯೆಂದು ಅರ್ಪಿಪೆನಧಿಕ ಸಂಭ್ರಮ ॥ ೯ ॥

ರಚಯಿತೃ: ಕಲಬುರ್ಗಿ ಚನವಾಪುರಿ ಹಿರೇಮಠದ ಶ್ರೀಗಳು.

# ಮಹಾಸ್ವಾಮಿಗಳ ಆದರ್ಶ ಜೀವನ.



" Man is a representative of God to serve all that lives and thus to express God's dignity and love. Let Service be your sole joy and you will need no other enjoyment in life."

(by : M. K. Gandhi)

ಪರಮ ಪೂಜ್ಯ ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳ ಆದರ್ಶ ಜೀವನದ ಹಿನ್ನೆಲೆಯಿಂದಲೇ ಇಪ್ಪತ್ತನೆಯ ಶತಮಾನದ ಗುರು ವರ್ಗದ ಕ್ರಾಂತಿಯು ಭಾರತೀಯ ಇತಿಹಾಸದಲ್ಲಿಯೇ ಮಾನವಕುಲಕೋಟಿಯ ಉದ್ಧಾರಕ್ಕಾಗಿ ನಡೆದ ಕ್ರಾಂತಿಗಳಲ್ಲಿ ಹೆಸರಾದದ್ದೆಂದು ಹೇಳಬಹುದು. ಉಜ್ಜ-ಯನೀ ಜಗದ್ಗುರುಗಳಾಗಿದ್ದ ಶ್ರೀ ಸಿದ್ಧಲಿಂಗ ಶಿವಾ–ಚಾರ್ಯ ಮಹಾಸ್ವಾಮಿಗಳವರಿಂದ ಪ್ರಾರಂಭಿಸಿದ ಈ ಕ್ರಾಂತಿಯಲ್ಲಿ ಶ್ರೀ ಗುರುಶಾಂತ ಶಿವಾಚಾರ್ಯರೊಬ್ಬರೇ ಹೈದ್ರಾಬಾದ ಕರ್ನಾಟಕದ ಪ್ರತಿನಿಧಿಗಳಾಗಿದ್ದರು. ಈ ಕ್ರಾಂತಿಯ ಅನ್ಯಮುಖಂಡರಾಗಿದ್ದ ಪಂಡಿತ ಕಾಶೀನಾಥ ಶಾಸ್ತ್ರಿಗಳು. ಹುಟಗಿ ಬೃಹನ್ಮಠದ ಶ್ರೀ ವೀರತಪಸ್ವಿ ಚನ್ನವೀರ ಶಿವಾಚಾರ್ಯ ಮಹಾ ಸ್ವಾಮಿಗಳು ಮೊದಲಾದವರ ಶ್ರೇಣಿಯಲ್ಲಿಯೇ ಶ್ರೀ ಗುರುಶಾಂತ ಶಿವಾಚಾರ್ಯರ ಹೆಸರು ಬರುತ್ತದೆ. ಗುರುವರ್ಗದ ಕ್ರಾಂತಿಗಾಗಿ ನಿರಂತರ ಪರಿಶ್ರಮಪಟ್ಟವ ರಲ್ಲಿ ಇವರೊಬ್ಬರು ಆಗಿದ್ದಾರೆ. ಈ ಶತಮಾನದಲ್ಲಿ ನಡೆದ ಗುರುವರ್ಗದ ಕ್ರಾಂತಿಯು ಮುಂದುವರಿಯ ಬೇಕಾದರೆ ಆದರಲ್ಲಿ ಹಲವಾರು ಪ್ರಾಂತದ ಜನರೆಲ್ಲರೂ ಬಂದುಸೇರಿ ಆ ಕ್ರಾಂತಿಯ ಪ್ರವಾಹವನ್ನು ದೊಡ್ಡ–ಸಾಗರವನ್ನಾಗಿ ಮಾಡಿದರು. ಈ ದೊಡ್ಡಸಾಗರ ಮಾಡುವದಕ್ಕೆ ಗುರುಶಾಂತ ಶಿವಾಚಾರ್ಯರೊಬ್ಬರು ಒಂದು ದೊಡ್ಡ ನದಿಯಾಗಿದ್ದಾರೆಂದು ಹೇಳಬಹುದು.

ಸ್ವಾಮಿಗಳ ಜೀವನದ ಬಗ್ಗೆ ಹೇಳಬೇಕಾದರೆ– ಸರಳರೀತಿಯಲ್ಲಿ ಬಾಳಿ ಉಚ್ಚಮಟ್ಟದ ಧ್ಯೇಯ ಸಾಧಿ ಸುವದೇ ಅವರ ಗುರಿಯಾಗಿದೆ. ಜ್ಞಾನ, ಕ್ರಿಯೆ, ಭಕ್ತಿ ವೈರಾಗ್ಯಗಳ ಸಂಗಮವಾಗಿ ಮಾನವನ ಮೂಲ ಭೂತ ಹಕ್ಕುಗಳ ಸಂರಕ್ಷಣೆ ಮತ್ತು ಬೆಳವಣಿಗೆಗೆ ಹೋರಾಟ ಮಾಡಿದವರು ಇವರಾಗಿದ್ದಾರೆ. ನಿಜವಾದ ವೈರಾಗ್ಯವನ್ನು ನೋಡಬೇಕೆನ್ನುವವರಿಂದು ಸ್ವಾಮಿಗಳ ದರ್ಶನಪಡೆದು ನೋಡಬಹುದು. ಇತರರಂತೆ ಇವರು ಭಕ್ತರಿಗೆ ಕೈಯೊಡ್ಡಿ ಬೇಡುವವರಲ್ಲ. ಯಾಚಕರ ಸ್ಥಾನ ದಲ್ಲಿದ್ದು ಇವರು ಅಯಾಚಕರಾಗಿದ್ದಾರೆ. ರಾಷ್ಟ್ರದ ಹಿತದ ದೃಷ್ಟಿಯಿಂದ, ಸಂಪತ್ತಿಯ ಅಭಿವೃದ್ಧಿಗೆ ಒಕ್ಕಲತನ ಅವಶ್ಯಕವೆಂಬುದನ್ನು ತಿಳಿದು ಅದಕ್ಕಾಗಿ ಪರಿಶ್ರಮಿಸುವವರು ಇವರಾಗಿದ್ದಾರೆ. ಸ್ವಾಮಿತ್ವದ ಸ್ಥಾನದಲ್ಲಿದ್ದು ಸಾಧಾರಣ ಒಕ್ಕಲಿಗನಂತೆ ಜೀವನ ಸಾಗಿಸುವ ಸ್ವಾಮಿಗಳಿವರಿದ್ದಾರೆ.

ಸಮಾಜದ ಸೇವೆ ಮಾಡುವ ವ್ಯಕ್ತಿಗೆ ಇರಬೇಕಾದ ಅಸಾಧಾರಣ ಜ್ಞಾನ ಸ್ವಾಮಿಗಳಲ್ಲಿದೆ. ಸ್ವಾಮಿಗಳು ಹಿರೇಜೇವರಗಿ ಮತ್ತು ದುಧನಿ ಗ್ರಾಮಗಳಲ್ಲಿ ನಡೆಸಿದ ವಿದ್ಯಾಮಂದಿರಗಳೇ ಇವರ ಸಮಾಜ ಸೇವೆಯ ಆದರ್ಶ ಕನ್ನಡಿಗಳಾಗಿವೆ. ಇಂದು ಈ ಸಂಸ್ಥೆಗಳಲ್ಲಿ ಸಾವಿರಾರು ಜನ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಲಿದ್ದಾರೆ. ಈ ಸಂಸ್ಥೆಗಳನ್ನು ಕಟ್ಟುವಾಗ ಸ್ವಾಮಿಗಳು ತೋರಿದ ಜಾಣ್ಮೆ, ತಾಳಿದ ತಾಳ್ಮೆ ಎಲ್ಲ ಸಮಾಜ ಸೇವಕರಿಗೆ ಅನುಕರಣೀಯಗಳಾಗಿವೆ. ಇವರಲ್ಲಿ ವಿಶ್ವಪ್ರೇಮ ಪ್ರಾಣಿದಯೆಗಳು ಎದ್ದು ಕಾಣುತ್ತಲಿವೆ. ಯಾವ ಕೀರ್ತಿವಾರ್ತೆಯ ಬೆನ್ನುಹತ್ತಿ ಸಮಾಜ ಸುಧಾರಣೆಯ ಕಾರ್ಯವನ್ನು ಇವರು ಕೈಕೊಂಡವರಲ್ಲ. ಸಮಾಜ ಸೇವೆಯ ನೆಪದಿಂದ ವೀರಶೈವ ಧರ್ಮಪ್ರಸಾರ ಕಾರ್ಯದಲ್ಲಿ ತೊಡಗಿದವರಾಗಿದ್ದಾರೆ. ಜನಸಾಮಾನ್ಯರ ನಡುವೆ ಹೋಗಿ ಅವರ ಸುಖ ದುಃಖಗಳನ್ನು ತಿಳಿದು

ಕೊಂಡು ಸಾಂತ್ವನೆಕೊಡುವ ತಂದೆಗಳಾಗಿದ್ದಾರೆ. ನಿಷ್ಕಾಮಕರ್ಮ, ಶುದ್ಧಾಚಾರ, ಶೀಲಸಂಪನ್ನತೆಗಳನ್ನು ಭಕ್ತರಿಗೆ ತಿಳಿಸಿಕೊಡುವುದೇ ಇವರ ಮುಖ್ಯ ಕಾರ್ಯ ವಾಗಿದೆ.

ಸ್ವಾಮಿಗಳು ದೈವೀಪುರುಷರಾಗಿದ್ದರೂ ಮಾನವನ ಗರ್ಭದಲ್ಲಿ ಜನಿಸಿ ಮಾನವನು ಹೇಗೆ ದೇವನಾಗಬಲ್ಲನೆಂಬುದನ್ನು ತೋರಿಸುವ ವ್ಯಕ್ತಿಗಳಾಗಿದ್ದಾರೆ. ಅಂತೆಯೇ ಸ್ವಾಮಿಗಳು ಎಲ್ಲರ ಮನವನ್ನು ಸೆಳೆಯುತ್ತಾರೆ. ಎಲ್ಲರ ಆದರಕ್ಕೆ ಪ್ರೀತಿಗೆ ಪಾತ್ರರಾಗಿದ್ದಾರೆ. ಸ್ವಾಮಿಗಳ ಜೀವನವು ಅತಿಮಾನವ ಯೋಗಿಗಳ ಜೀವನವಾಗಿದ್ದರೂ ಮಾನವರ ಮನಸ್ಸಿನ ಮಥನದ ಪರಿಣಾಮವಾಗಿ ದಿವ್ಯಜ್ಯೋತಿ ಸ್ವರೂಪಿಗಳಾಗಿದ್ದಾರೆ. ಗುರುಗಳಾದವರು ಹೇಗಿರಬೇಕೆಂಬ ಉದಾಹರಣೆಯನ್ನು ನೋಡಬೇಕಾದರೆ ಗುರುಶಾಂತ ಸ್ವಾಮಿಗಳನ್ನು ಕಾಣಬಹುದು. ಇವರು ಗುರುಗಳೂ ಹೌದು, ಶಾಂತ ಮೂರ್ತಿಗಳೂ ಹೌದು. ಅಂತೆಯೇ ಗುರುಶಾಂತ ಸ್ವಾಮಿಗಳೆಂಬ ಹೆಸರೂ ಸಾರ್ಥಕವಾಗಿದೆ. ಸ್ವಾಮಿಗಳು ಜನಗಳಿಗೆ ತಮ್ಮ ಭಾಷಣಗಳಿಂದ ಉಪದೇಶ ಮಾಡುವದಿಲ್ಲ, ಇವರ ದಿವ್ಯಜೀವನವನ್ನೂ ಒಂದು ದಿನ ನೋಡಿದರೆ ಸಾಕು, ನೂರಾರು ದಿನಗಳವರೆಗೆ ಉಪದೇಶ ಪಡೆದರೂ ದೊರೆಯದಂತಹ ನೀತಿ ಒಂದು ದಿನದಲ್ಲಿ ದೊರೆಯುತ್ತದೆ. ಈ ಜಗೆಯ ಆದರ್ಶ ಜೀವನ ಇವರಲ್ಲಿದೆ.

ಸ್ವಾಮಿಗಳ ಆದರ್ಶ ಜೀವನದ ಬಗ್ಗೆ ೬೦ ವರ್ಷಗಳಲ್ಲಿ ನಡೆದ ಘಟನೆಗಳನ್ನು ಬರೆದರೆ ಒಂದು ದೊಡ್ಡ ಪುರಾಣ ಅಥವಾ ಚರಿತ್ರೆಗ್ರಂಥ ಆಗಬಹುದು. ನಾನಿಲ್ಲಿ ಅವರ ಜೀವನದ ಯಾವ ಘಟನೆಯನ್ನೂ ವರ್ಣಿಸಿಲ್ಲ. ಇವರೊಬ್ಬರು ಗಾಂಧಿ, ವಿನೋಬಾ ಮಹಾಪುರುಷರ ಶ್ರೇಣಿಯಲ್ಲಿ ಹೋಲಿಸುವ ಮಹಾತ್ಮರಾಗಿದ್ದಾರೆಂದು ಹೇಳಬಹುದು. ಒಟ್ಟಿನ ಮೇಲೆ ಮಹಾಸ್ವಾಮಿಗಳು ಆದರ್ಶ ಮಹಾಪುರುಷರು, ದೀನಚಿಂತಾಮಣಿಗಳು, ಜ್ಞಾನನಿಧಿಗಳು, ಸಮಾಜೋದ್ಧಾರಕ ಧರ್ಮದ ಪ್ರತಿಪಾದಕರಲ್ಲಿ ಮುಂದಾಳುಗಳು, ಶಾಂತಿಯ ದೂತರೂ ಆಗಿದ್ದಾರೆ. ಬಾಲತಪಸ್ವಿಗಳೂ, ವೀರವೈರಾಗ್ಯಮೂರ್ತಿಗಳೂ ಬಡವರ ಹಿತಚಿಂತಕರೂ ದಯಾ ದಾಕ್ಷಿಣ್ಯರೂ ಆಗಿದ್ದಾರೆ. ಈಗ ಸಮಾಜದವರು ಸ್ವಾಮಿಗಳ ಷಷ್ಠ್ಯಬ್ಧಿಯನ್ನೂ ಆಚರಿಸುತ್ತಲಿದ್ದಾರೆ. ಭಗವಂತನು ಇವರ ಶತಾಬ್ಧಿಯನ್ನೂ ಆಚರಿಸುವ ಸುಯೋಗವು ಸಮಾಜಕ್ಕೆ ಕೊಡಲೆಂದು ಬೇಡಿಕೊಳ್ಳುತ್ತೇನೆ.

— ಡಾ|| ನೀಲಕಂಠ ಶಿವಾಚಾರ್ಯ, M.A. Ph.D.
'ವೇದಾಂತ, ನ್ಯಾಯ, ಸರ್ವದರ್ಶನಾಗಮಾಚಾರ್ಯ'
ಶ್ರೀ ಶಾಂತೇಶ್ವರ ಬೃಹನ್ಮಠ, ಸಾವಳಗಿ.
ಮು|| ವಾರಣಾಸಿ.

"ದೈಹಿಕವಾದ ಮತ್ತು ಮಾನಸಿಕವಾದ ಆತ್ಯಂತಿಕ ಶಾಂತಿ ಲಭಿಸಬೇಕಾದರೆ ದೈವಶಕ್ತಿಯನ್ನು ಕುರಿತು ಸಂಪೂರ್ಣವಾದ ಸರ್ವಾರ್ಪಣಭಕ್ತಿ ಅತ್ಯಂತ ಆವಶ್ಯಕ. ಏಕೆಂದರೆ ನೀನು ನಿನ್ನತನವೆಲ್ಲವನ್ನೂ ಕಳೆದುಕೊಂಡಾಗ ನಿನ್ನ ಸರ್ವಸ್ವವನ್ನು ದೇಹ, ಇಂದ್ರಿಯಗಳು, ಭಾವನೆಗಳು, ಆಲೋಚನೆಗಳು ಎಲ್ಲವನ್ನೂ ದೈವಶಕ್ತಿಗೆ ಅರ್ಪಿಸಿ ದೂರ ನಿಂತಾಗ,– ಆ ದೈವ ಶಕ್ತಿಯೇ ಅವುಗಳೆಲ್ಲದರ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ. ನಿನಗೆ ಅವೆಲ್ಲವುಗಳ ತೊಂದರೆಯಿಂದ ಮುಕ್ತಿ ಲಭಿಸುತ್ತದೆ.

— (ಲಿಂಗತತ್ವದರ್ಪಣದಿಂದ)

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ನಾ ತಿಳಿದ ಗುಪ್ತಯೋಗಿ

## ಶ್ರೀ ಷ॥ ಬ್ರ॥ ಗುರುಶಾಂತಲಿಂಗ ಶಿವಾಚಾರ್ಯರು, ಹಿರೇ-ಜೇವರಗಿ.

...............

ಧರ್ಮದ ಬೀಡಾದ ಶಾಂತಿಯ ನೆಲೆಯಾದ ಈ ಪುಣ್ಯಮಯ ಭಾರತ ನಾಡಿನಲ್ಲಿ ಈ ಕಲಿಯ ಪ್ರಭಾವವೋ ಅಥವಾ ನಮ್ಮ ವಿನಾಶಕಾಲವೋ ಯಾಕೋ ನಮ್ಮಲ್ಲಿ ಅನ್ಯಾಯ, ಅತ್ಯಾಚಾರ, ಅಧರ್ಮಗಳು ತಾಂಡವವಾಡಹತ್ತಿವೆ. ಮುಖ್ಯವಾಗಿ ಧರ್ಮಸ್ಥಾನಗಳಲ್ಲಿಯೇ ಧರ್ಮದ ಮುಸುಕಿನಲ್ಲಿ ಎಷ್ಟೋ ನಡೆಯಬಾರದ ಕಾರ್ಯಗಳು ನಡೆಯುತ್ತ ಲಿವೆ. ಸುತ್ತಲೂ ಡಂಭಾಚಾರ, ಮಾತಿನಲ್ಲಿ ಮಹಾ ತತ್ವಗಳು ಕೃತಿಯಲ್ಲಿ ಮಾತ್ರ ಕುಕರ್ಮಗಳು. ಇಂಥ ಜನರ ಪ್ರಬಲವಾದ ಪ್ರವಾಹದಲ್ಲಿ ಒಳ್ಳೆಯ ಜನ ಕಾಣದಂತಾಗಿದೆ. ಕಂಡರೂ ಅತ್ತ ಹೊರಳದಾಗಿವೆ ನಮ್ಮ ಕಣ್ಣುಗಳು. ಮಹಾಭಕ್ತ ಬಸವಣ್ಣನ ಹೇಳಿಕೆ ಯಂತೆ "ಕೋಟಿಗೊಬ್ಬ ಶರಣ, ಕುಲಕ್ಕೊಬ್ಬ ಭಕ್ತ" ಎಂಬಂತೆ ಕೈಬೆರಳಿಗೆಣಿಸುವಷ್ಟು ಒಳ್ಳೆಯ ಜನ ಸಿಗು ತ್ತಾರೆ. ಈ ಬೆರಳಿನ ಎಣಿಕೆಯಲ್ಲಿ ಈ ನಮ್ಮ ಹಿರೇ-ಜೇವರಗಿಯ ಜೀವಾಳಾದ ಶ್ರೀ ಷ॥ ಬ್ರ॥ ಗುರು ಶಾಂತಲಿಂಗ ಶಿವಾಚಾರ್ಯರು ಒಬ್ಬರು. ಇವರದು ನಿರಾಡಂಬರ ಸಾದಾ ಸರಳಜೀವನ. ಎಲ್ಲವೂ ಸಾದಾ, ಉಡುಗೆತೊಡುಗೆ, ಊಟೋಪಚಾರ, ನಡೆನುಡಿ, ಪೂಜಾ ಕ್ರಿಯಾದಿಗಳು ಸಹ ನಿರಾಡಂಬರ. ನೋಡಿ ದವರಿಗೆ ಸಾಮಾನ್ಯ ವ್ಯಕ್ತಿಯಂತೆ ಕಾಣುತ್ತಾರೆಯೇ ವಿನಃ ಇವರಲ್ಲಿರುವ ಅಂತಃಶಕ್ತಿಯು ಈ ಚರ್ಮ-ಚಕ್ಷುಗಳಿಂದ ನೋಡಿದರೆ ಗೋಚರವಾಗದು.

ಇವರ ಲಿಂಗಾನುಷ್ಠಾನವೂ ಗುಪ್ತವಾದದ್ದೇ. ಇವರದು ನಿರಾಡಂಬರ ಪೂಜೆಯೆಂದು ಮೊದಲೇ ಹೇಳಿದೆ. ಸರ್ವವೂ ಲಿಂಗರೂಪವಾಗಿ ಕಾಣುವವರಿಗೆ ಸರ್ವ ಸತ್ಕಾರ್ಯಗಳು (ಅರ್ಥಾತ್ ಸಮಾಜಸೇವಾ ಕಾರ್ಯಗಳು) ಲಿಂಗಪೂಜೆಯಂದೇ ಭಾವಿಸಿರುವವ ರಿಗೆ ಈ ಬಾಹ್ಯಕರ್ಮಾದಿಗಳಿಂದೇನು ಪ್ರಯೋಜನ? ಸದಾ ಲಿಂಗಪೂಜೆಯಲ್ಲಿ ನಿರತರಾದವರಿಗೆ ಪ್ರತ್ಯೇಕ ಲಿಂಗಪೂಜೆ ಇನ್ನೆಲ್ಲಿಯದು? ಅದಕ್ಕೆಂದೇ ಇವರು ಗುಪ್ತಯೋಗಿಯೆಂದೆನಿಸಿದ್ದು ನನಗೆ. ಯಾವಾಗಲೂ ಲಿಂಗದ ನಡೆಯಲ್ಲಿ ನಡೆಯುವವರಿಗೆ ಮಹಾತ್ಮರು ಹೇಳಿದ ಒಂದು ಮಾತನ್ನು ಇಲ್ಲಿ ಉದಾಹರಿಸಬಹುದು. ಅದು ಏನಂದರೆ :—

ಲಿಂಗದ ನಡೆಯಂತೆ ನಡೆವನಲ್ಲದೆ ಲೋಕದ ನಡೆಯಂತೆ ನಡೆಯ. ಲಿಂಗದ ನುಡಿಯಂತೆ ನುಡಿವ ನಲ್ಲದೆ ಲೋಕದ ನುಡಿಯಂತೆ ನುಡಿಯ. ಲಿಂಗದ ಮಚ್ಚಿನಲ್ಲಿ ಸುಳಿವನಲ್ಲದೆ ಲೋಕದ ಮಚ್ಚಿನಲ್ಲಿ ಸುಳಿಯ. ಲಿಂಗದ ವ್ಯವಹಾರದಲ್ಲಿರುತಿಹನಲ್ಲದೆ ಲೋಕದ ವ್ಯವಹಾರದಲ್ಲಿರನು. ನೋಡಾ ನಿಮ್ಮ ಶರಣ. ಇಂತಪ್ಪ ಲಿಂಗಾಂಗ ಸಂಗ ಸಮರಸವನರಿದ ಶಿವಶರಣನ ಶಿವನೆನಬೇಕಲ್ಲದೆ ಲೋಕದವರೆಂದು ನುಡಿವ ಸೂತಕದೇಹಿಗಳಿಗೆ ಪಾತಕ ತಪ್ಪದಯ್ಯ ಅಖಂಡೇಶ್ವರಾ.

ಎಂಬ ಷಣ್ಮುಖ ಸ್ವಾಮಿಯ ನುರಿತ ನುಡಿಯನ್ನು ಮೆಲಕು ಹಾಕಿದರೆ ಈ ನಮ್ಮ ಶ್ರೀ ಗುರುಶಾಂತಲಿಂಗ ಶಿವಾಚಾರ್ಯರ ಜೀವನದಲ್ಲಿ ಅಡಕವಾಗಿರುವ ಅಂತಃ ಶಕ್ತಿಯ ದಿವ್ಯದರ್ಶನವು ನಮ್ಮೆಲ್ಲರಿಗೆ ಗೋಚರಿಸು ವದು. ಜನಮೆಚ್ಚಲೆಂದು ನಡೆಯುವವರಲ್ಲ ನಮ್ಮ ಗುರುಶಾಂತಲಿಂಗರು. ತಮ್ಮ ಮನಮೆಚ್ಚಿ ನಡೆದು ಆ ನಡೆಯಲ್ಲಿ ಜನರೂ ನಡೆದು ಪುನೀತರಾಗಬೇಕೆಂದು

ನಡೆದು ತೋರಿಸುವ ಗುರುಪುಂಗರಿವರು. ನಾವೆಲ್ಲರೂ ಇವರ ನಡೆನುಡಿಯನ್ನು ಪರೀಕ್ಷೆ ಮಾಡುವ ಪರಿಪಾಟಕ್ಕೆ ಹೋಗದೆ ಇವರ ನಡೆ ನುಡಿಯನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಂಡು ಹೋದರೆ ನಮ್ಮೆಲ್ಲರ ಜೀವನ ಪಾವನವಾಗುತ್ತದೆ. ಶ್ರೀ ಶಾಂತಲಿಂಗರ ಶಿವಯೋಗಾನುಷ್ಠಾನದ ಸಾಧನೆಯ ಜೊತೆಗೆ ಲೌಕಿಕ ಸಾಧನೆಯೂ ನಡೆದಿದೆ ಇದಕ್ಕೆ ಅವರ ಎರಡು ಮಾಧ್ಯಮಿಕ ಶಾಲೆಗಳು ಹಾಗೂ ಪ್ರಸಾದನಿಲಯಗಳೇ ಸಾಕ್ಷಿ.

ಶ್ರೀಗಳವರ ಅಪಾರ ಪರಿಚಯ ನನಗಿರದಿದ್ದರೂ ಅಲ್ಪ ಒಡನಾಟದಲ್ಲಿಯೇ ಅವರ ಬಗ್ಗೆ ಅಪಾರ ಅನುಭವವನ್ನು ತಂದುಕೊಟ್ಟಿದೆ ಅವರ ಮಾತೃವಾತ್ಸಲ್ಯದ ಹೃದಯ. ಇವರ ನಗೆನುಡಿಯಲ್ಲಿಯೇ ತತ್ವದ ತಿರುಳು ತುಂಬಿದೆ. ಮಿತಭಾಷೆಯಲ್ಲಿಯೇ ಅತೀಂದ್ರಿಯಾನುಭವ ಅಡಕವಾಗಿದೆ. ಅವರು ತಮ್ಮ ಸರಳ ಶಾಂತ ಸ್ವಭಾವದಿಂದ ಪ್ರತಿಯೊಬ್ಬನನ್ನೂ ಸ್ವಲ್ಪೇ ಅವಧಿಯಲ್ಲಿ ತಮ್ಮವರನ್ನಾಗಿ ಮಾಡಿಕೊಂಡು ಬಿಡುತ್ತಾರೆ. ಅವರು ಆವಾಗ ಜೀವರಗಿಯವರಾಗದೆ ಜೀವದವರಾಗುತ್ತಾರೆ. ಇದು ಕೇವಲ ವರ್ಣನೆಯ ಮಾತಲ್ಲ, ಕಂಡುಂಡ ಅನುಭವ. ಗುರುಗಳಿಗಿರಬೇಕಾದ ಶಾಂತಿ ಕ್ಷಮಾಗುಣಗಳು ಇವರಲ್ಲಿ ಜನಿಸಿದಾಗಲೇ ಮೂಡಿ ಬಂದಿವೆಯೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. "ಶಮೆಯಿಂದ ಮುಕ್ತಿಸಾಧನ ಪೆರತುಂಟೆ" ಎಂಬ ನಿಜಗುಣರ ನಿಜೋಕ್ತಿಯಂತೆ ಇವರ ಜೀವನವೇ ಶಾಂತಿಮಯವಾಗಿದೆ, ಅಂಕಿತನಾಮ ಸಾರ್ಥಕವಾಗಿದೆ. ನಿಜಗುಣರ ಇನ್ನೊಂದು ಹೇಳಿಕೆಯಂತೆ "ವಿಮಲ ಮಾನಸದಿಂದಧಿಕ ಶುಭತೀರ್ಥಮನ್ಯಮುಂಟೆ" ಎಂಬಂತೆ ಇವರ ಒಳಹೊರಗೊಂದಾದ ನಿರ್ಮಲ ಮನಸ್ಸು ಕ್ಷಣಾರ್ಧದಲ್ಲಿ ತೀರ್ಥಸ್ನಾನದಲ್ಲಿ ಮಿಂದು ಪುನೀತರಾದ ಪುಣ್ಯಪುರುಷರ ಸಾಲಿನಲ್ಲಿ ಸೇರಿಸುತ್ತದೆ.

ಇಂತಹ ಪುಣ್ಯಪುರುಷರು ಅರವತ್ತರಲ್ಲಿ ಪಾದಾರ್ಪಣ ಮಾಡಿದ ದ್ಯೋತಕವಾಗಿ ಇವರ ಅರವತ್ತರ ಹುಟ್ಟು ಹಬ್ಬವನ್ನು ಮಾಡುತ್ತಿರುವದು ನಿಜವಾಗಿಯೂ ಸ್ತುತ್ಯವಾದದ್ದು, ಶ್ಲಾಘನೀಯವಾದದ್ದು. ಇದು ೬೦ ನೇ ವಯಸ್ಸಿನ ಹಬ್ಬವಲ್ಲ, ಜ್ಞಾನ ಜನಿಸಿದ ಹಬ್ಬ ಎಂದು ನಾನು ಕರೆಯುತ್ತೇನೆ. ಯಾಕಂದರೆ- ಅರಿವು ಅಂದರೆ ತಿಳವಳಿಕೆ, ಜ್ಞಾನ, ಎಂದು ಅರ್ಥವಾಗುತ್ತದೆ. ಜ್ಞಾನವೇ ಸಾಕಾರ ರೂಪವಾಗಿ ಬಂದ ಗುರುಮೂರ್ತಿಯ ಹುಟ್ಟುಹಬ್ಬ. ಇದರ ಅಂಗವಾಗಿ ಈ ಷಷ್ಟ್ಯಬ್ಧಿ ಸಮಾರಂಭದ ಸಮಿತಿಯವರು ನಮಗೆ ಈ ಸಮಾರಂಭಕ್ಕೆ ಸಂಬಂಧವಾಗುವಂತೆ ಒಂದು ಧಾರ್ಮಿಕ ಲೇಖನವನ್ನು ಬರೆದು ಕಳಿಸಿಕೊಡಬೇಕೆಂದು ಕೇಳಿಕೊಂಡಿದ್ದಾರೆ. ಆದರೆ ನಾನು ಕಲಿತವನೂ ಅಲ್ಲ, ಸಾಹಿತಿಯೂ ಅಲ್ಲ. ಭಾಷಣಕಾರನೂ ಅಲ್ಲ, ಆದರೂ ಈ ಮಹಾತ್ಮರ ಸೇವೆಮಾಡುವ ಸುಯೋಗವನ್ನು ತಂದು ಕೊಟ್ಟಿದ್ದಕ್ಕಾಗಿ ಮಹಾತ್ಮರ ಮಾತುಗಳನ್ನೇ ಉಪಯೋಗಿಸಿ ನನಗೆ ತಿಳಿದ ನಾಲ್ಕು ಶಬ್ದಗಳನ್ನು ಬರೆದು ಕಳಿಸಿದ್ದಾಗಿದೆ. ಇದು ಗುರುವಿನ ಅರವತ್ತರ ಅರುವಿನ ಹುಟ್ಟುಹಬ್ಬವಾದದ್ದರಿಂದ ಗುರುವಿಗೆ ಸಲ್ಲಬೇಕಾದದ್ದು ಮುಖ್ಯವಾಗಿ ನಮ್ಮ ನಿರ್ಮಲ ಭಕ್ತಿ. ಈ ಭಕ್ತಿಯ ವಿಷಯವಾಗಿಯೇ ಒಂದೆರಡು ಮಾತುಗಳನ್ನು ಬರೆದು ನನ್ನ ಭಕ್ತಿಸೇವೆಯನ್ನು ಸಲ್ಲಿಸುವೆ.

## — ವಿಷಯ ಭಕ್ತಿ —

ಪರಶಿವನನ್ನು ಅನನ್ಯಭಕ್ತಿಯಿಂದ ಸೇವೆ ಮಾಡಿದ್ದಾದರೆ ಮನುಷ್ಯನೂ ಸಹ ದೇವತ್ವವನ್ನು ಪಡೆಯುವದರಲ್ಲಿ ಸಂದೇಹವಿಲ್ಲ. ಎಲ್ಲ ಮಾರ್ಗಕ್ಕಿಂತ ಭಕ್ತಿಮಾರ್ಗ ಹಿರಿದಾದದ್ದೂ ಮತ್ತು ಎಲ್ಲ ಪಂಥದವರಿಗೂ ಒಪ್ಪುವಂತಹದು. ಸುಲಭವಾದುದು ಆಗಿದೆ. ಭಕ್ತಿಯೋಗದಿಂದಲೇ ಶಿವನು ದೊರಕುವನೆಂದು ಮುಂಡೂಕೋಪನಿಷತ್ತು ಘಂಟಾಘೋಷವಾಗಿ ಸಾರಿದೆ.—

ಹೇಗೆಂದರೆ —

ನಾಯಮಾತ್ಮಾ ಪ್ರವಚನೇನ ಲಭ್ಯೋ ।
ನ ಮೇಧಯಾ ನ ಬಹುನಾ ಶ್ರುತೇನ ।
ಯ ಮೇವೈಷ ವೃಣುತೇ ತೇನಲಭ್ಯ ।
ಸ್ತಸ್ಯೈಷ ಆತ್ಮಾ ವಿವೃಣತೇ ತನುಸ್ವಾಮ್ ।

ವೇದಶಾಸ್ತ್ರಗಳನ್ನೆಲ್ಲ ಇತಿಹಾಸ ಪುರಾಣಗಳನ್ನೆಲ್ಲ ಮುಗುಚಿ ಹಾಕಿದರೂ ತಲೆಯಲ್ಲಿ ತುಂಬಿಕೊಂಡು ಎಷ್ಟು ಹೇಳಿ ಕೇಳಿದರೂ ಪರಮಾತ್ಮನು ಸಿಗುವದಿಲ್ಲ. ಯಾವನು ನಿಜವಾಗಿ ಶಿವನ ಸಾಕ್ಷಾತ್ಕಾರನ್ನು ಹೊಂದ-ಲೇಬೇಕೆಂದು ಉತ್ಕಟ ಇಚ್ಛೆಯುಳ್ಳವನಾಗುವನೋ ಆತನು ಶಿವನಕಡೆ ತನ್ನ ಪ್ರೇಮ (ಭಕ್ತಿ) ಪ್ರವಾಹ ವನ್ನು ಹರಿಸಬೇಕಾಗುತ್ತದೆ. ಪ್ರೇಮುಕ್ಕೆ ಮಾತ್ರ ದೇವ ನೊಲಿವನು. ಅಂತೆಯೇ ಪ್ರೇಮವೇ ದೇವರೆಂದು ಅಂದಿದ್ದಾರೆ.

ಪರಮಾತ್ಮನು ಎಲ್ಲ ಕಡೆಗೆ ತುಂಬಿದ್ದರೂ ನಮ್ಮ ಕಣ್ಣಿಗೆ ಅಜ್ಞಾನದ ಪರದೆ ಮುಸುಕಿ ದೇವರನ್ನು ಕಾಣ ದಂತಾಗಿ ಮಾಡಿದೆ. ಪ್ರೇಮ ಪ್ರವಾಹವು ಶಿವನತ್ತ ಹರಿಯಿತೆಂದರೆ ಶಿವನು ಸಂತುಷ್ಟನಾಗಿ ಅಜ್ಞಾನದ ಪರದೆಯನ್ನು ಹರಿದು ಸುಜ್ಞಾನವನ್ನು ಬೀರಿ ತಾನು ಕಾಣುವಂತೆ ಮಾಡುತ್ತಾನೆ. ಆಮೇಲೆ ಈಗ ನಮಗೆ ಪ್ರಪಂಚದ ಸಮಸ್ತ ವಸ್ತುಗಳು ಕಾಣುವಂತೆ ದೇವರೂ ಎಲ್ಲೆಲ್ಲಿಯೂ ಕಾಣುತ್ತಾನೆ. ಆಗ ಮನುಷ್ಯನ ಹುಟ್ಟು ಸಾರ್ಥಕವಾಗುತ್ತದೆ.

ಭಕ್ತಿಯು ಸಕಲರ ಸ್ವಭಾವಕ್ಕೆ ಏಕೆ ಹಿಡಿಸು-ತ್ತದೆ ಅಂದರೆ ಅದು ಪ್ರೇಮಸ್ವರೂಪವಾಗಿರುವದರಿಂದ. ಲೋಕದಲ್ಲಿ ಪ್ರೇಮರಹಿತ ಪ್ರಾಣಿಗಳೇ ಇಲ್ಲ. ಪ್ರೇಮ ವಿಲ್ಲದಿರೆ ಬದುಕೂ ಕಠಿಣವಾಗುತ್ತದೆ. ಕ್ಷುದ್ರಪ್ರಾಣಿ ಗಳಲ್ಲಿ ಸಹಿತ ಪ್ರೇಮವಿರುವದನ್ನು ನಾವು ನೋಡು ತ್ತೇವೆ. ಅಂದಬಳಿಕ ಮನುಷ್ಯನಲ್ಲಿರದೆ? ಇದೇ ಪ್ರೇಮವನ್ನೇ ನಾವು ದೇವರಕಡೆಗೆ ಹೊರಳಿಸಿಬಿಟ್ಟರೆ ಭಕ್ತಿಯಾಗಿ ಪರಿಣಮಿಸುತ್ತದೆ. ಪ್ರೇಮವು ಪರಮಾತ್ಮ ಸ್ವರೂಪವಾದದ್ದರಿಂದ ಸಕಲಜೀವರಿಗೆ ಸ್ವಾಭಾವಿಕ ವಾದದ್ದರಿಂದ ಭಕ್ತಿಮಾರ್ಗವು ಸಾಧಕರಿಗೆ ಸರಳ ವಾಗಿಯೂ ಸುಖಕರವಾಗಿಯೂ ಆಗಿದೆ. ವೈದಿಕ ಕರ್ಮಾದಿಗಳ ಪಥದಿಂದ ಪಾರಾಗಬೇಕಾದರೆ ಅದರಲ್ಲಿ ಅಡಿಗಡಿಗೆ ಜಾರುವ ಸಂಭವವುಂಟು. ಒಂದುವೇಳೆ ಜಾರದಂತೆ ಎಚ್ಚರವಹಿಸಿ ಮಾಡಬೇಕೆಂದರೆ ಬಾಹ್ಯ-ಸೌಕರ್ಯಗಳು ಬಹಳವಾಗಿ ಬೇಕಾಗುತ್ತವೆ. ಆರ್ಥಿಕ ಅನುಕೂಲತೆ ಸುತ್ತುಮುತ್ತಲಿನ ಪರಿಸರದ ಅನುಕೂಲತೆ ಸರಿಯಾದ ವಾತಾವರಣ ಇವೆಲ್ಲ ಅನುಕೂಲತೆಗಳು ಸಕಲ ಸಾಧಕರಿಗೂ ದೊರಕುವದು ದುರ್ಲಭ. ಇನ್ನು ರಾಜಯೋಗವನ್ನು ಅವಲಂಬಿಸಿದರೆ ಮೊದಲು ಮನವನ್ನು ಹಿಡಿತದಲ್ಲಿಡಬೇಕಾಗುತ್ತದೆ, ಅದನ್ನು ಹಿಡಿಯುವವೆಂದರೆ ಗಾಳಿಯನ್ನು ಹಿಡಿಯಹೋದಂತೆ ಅದಕ್ಕೆಂದೇ ಅನುಭವಿಗಳು ಹೀಗೆ ಅಂದಿದ್ದಾರೆ —

ಸಪ್ತ ಸಮುದ್ರಗಳನು ಪಾನ ಮಾಡಲುಬಹುದು ।
ಧರೆಯನೆಲ್ಲವನು ಜಿನದಂತೆ ಸುರುಳಲುಬಹುದು ।
ಹುಲಿಯ ಮೀಸೆಯನು ಹಿಡಿದು ಉಯ್ಯಾಲೆಯನಾಡ-
ಬಹುದು ।
ಆದರೆ ಒಂದರೆನಿಮಿಷ ನಿನ್ನಲ್ಲಿ ಮನವ ನಿಲಿಸಲಾಗದು
ದೇವಾ । ಎಂದು ನೊಂದು ಬೆಂದು ಉಸುರಿದ್ದಾರೆ.

ಇನ್ನು ಜ್ಞಾನಯೋಗವನ್ನವಲಂಬಿಸಿದರೆ ಅದು ಮನಸ್ಸು ಶುದ್ಧವಾದನಂತರದ ಮಾತು. ಚಿತ್ತಶುದ್ಧ ವಾಗದಿದ್ದರೂ ಹೇಗಾದರೂ ಮಾಡಿ ಕಷ್ಟಪಟ್ಟು ಶಾಸ್ತ್ರಜ್ಞಾನವನ್ನು ಪಡೆಯಬಹುದು. ಆದರೆ ಅದು ಚಿತ್ತದಲ್ಲಿ ಆಳವಡುವದಿಲ್ಲ. ಕೇವಲ ಆಳವಡುವಷ್ಟೇ ಅಲ್ಲ ಅಧಿಕಾರವಿಲ್ಲದೆ ಅರಿತ ಜ್ಞಾನವು ಮನುಷ್ಯನನ್ನು ಉಭಯಭ್ರಷ್ಟನನ್ನಾಗಿ ಮಾಡುವದು. ಯಾಕಂದರೆ ಮನದ ಮಲಿನತೆ ಹೋಗದೆ ಶುದ್ಧವಾಗದೇ ಇದ್ದರೆ ಅದು ಮನಸ್ಸಿನ ಶಾಂತಿಗೆ ಕಾರಣವಾಗುವದಿಲ್ಲ.

ಮತ್ತು ಉಳಿದ ಸಾಧನೆಗಳನ್ನು ಕೀಳೆಂದೂ ಅವು-
ಗಳಲ್ಲಿ ಸತ್ವವಿಲ್ಲವೆಂದೂ ತೋರಿಸುವ ಸಂಭವವಿರು
ವದರಿಂದ ಸಾಧಕನು ಯಾವ ಮಾರ್ಗವೂ ಸಿಗದೆ
ಸಿಕ್ಕಾಪಟ್ಟೆ ಅತ್ತ ಇತ್ತ ಹೊರಳಾಡುವ ಸಂಭವವಿರು
ತ್ತದೆ. ಆದ್ದರಿಂದ ಕಣ್ಣುಮುಚ್ಚಿ ಓಡಿದರೂ ಬೀಳ
ದಂಥ ಭಕ್ತಿಪಥವನ್ನು ನಿಜಭಕ್ತನು ಎಂದೂ ಬಿಡನು.
ಮತ್ತು ಮೇಲಾಗಿ ಭಕ್ತಿಯೋಗವನ್ನು ಬಿಟ್ಟು ಇನ್ನು
ಳಿದ ಯೋಗಗಳನ್ನು ಸಿದ್ಧಿಮಾಡಿಕೊಳ್ಳಲಿಕ್ಕೆ ದೀರ್ಘಾ
ವಧಿ ಕಾಲ ಗತಿಸಬೇಕಾತ್ತದೆ. ಎಷ್ಟೋ ಅಭ್ಯಾಸ
ಮಾಡಬೇಕಾಗುತ್ತದೆ. ಆದರೆ ಭಕ್ತಿಯೋಗ ಹಾಗಲ್ಲ.

ಉದಾಹರಣೆ —

ವಿಭೀಷಣನು ಶ್ರೀ ರಾಮಚಂದ್ರನ ವಿರೋಧಿ-
ಯಾದ ರಾವಣನ ತಮ್ಮನಾದರೂ ಆತನ ಪ್ರೇಮದ
ಕರೆಗೆ ಓಗೊಟ್ಟು ಆತನಿಗೆ ತನ್ನ ದಿವ್ಯದರ್ಶನವ-
ನ್ನೀಯುತ್ತಾನೆ. ಆದರೆ ಶ್ರೀ ರಾಮನ ದೂತರು
ತಮ್ಮ ಪ್ರಭುವಿಗೆ ವಿಭೀಷಣನು ವೈರಿಯ ಕಡೆಯವ,
ಆತನಲ್ಲಿಗೆ ಹೋಗುವದು ಬೇಡವೆಂದು ಹೇಳಿದರೆ
ರಾಮನು ಏನನ್ನುತ್ತಾನೆ ಗೊತ್ತೆ ? ಒಮ್ಮೆ ಮನಸ್ಸಿ
ನಿಂದ ಶರಣೆಂದರೆ ಸಾಕು ಅವರಿಗೆ ಅಭಯವನ್ನೀ-
ಯುತ್ತೇನೆ. ಅದೇ ನನ್ನ ನಿಯಮ ಹಾಗೂ ಕರ್ತವ್ಯ.
ಪ್ರತ್ಯಕ್ಷ ರಾವಣನೇ ಶರಣುಬಂದರೂ ಅವನಿಗೆ
ಆಶ್ರಯವಿತ್ತು ಅಯೋಧ್ಯೆಯ ಪಟ್ಟಾಧಿಕಾರ ಮಾಡು
ತ್ತೇನೆಂದು ರಾಮ ಹೇಳಿದ್ದಾನೆ. ಪ್ರೇಮದ ಕರೆ
ಹೇಗಿದೆ ನೋಡಿ !

ಶರಣೆಂಬ ಶಬ್ದದಲ್ಲಿ ಅಷ್ಟು ತೀವ್ರಗತಿಯ ಶಕ್ತಿ
ಇದೇ ನೋಡಿ ! ಭಕ್ತಿಭಾಂಡಾರಿ ಬಸವಣ್ಣನು ಮಾದರ
ಹರಳಯ್ಯನಿಗೆ ಒಂದು ಶರಣು ಹೆಚ್ಚು ಉಪಯೋಗಿ
ಸಿದ್ದಕ್ಕೆ ಹರಳಯ್ಯನಲ್ಲಿ ಎಂಥ ಪರಿಣಾಮವನ್ನುಂಟು
ಮಾಡಿತು ಎಂಬುದನ್ನು ನೋಡಬಹುದಲ್ಲವೆ ? ಹೀಗೆ
ಶರಣೆಂಬ ಶಬ್ದ ಹೃದಯದಿಂದ ಹೊರಬೀಳಬೇಕಾದರೆ
ಆ ಹೃದಯಕ್ಕೆ ಎಷ್ಟೋ ಜನ್ಮಗಳ ಉತ್ತಮ
ಸಂಸ್ಕಾರವಾಗಬೇಕಾಗುತ್ತದೆ.

ಭಕ್ತಿಮಾರ್ಗವು ಭಕ್ತನನ್ನು ಬಾಗಿ ನಡೆಸು-
ತ್ತದೆ. ಅದು ಅಹಂಕಾರಕ್ಕೆ ಆಸ್ಪದ ಕೊಡದು.

"ಎತ್ತಪ್ಪೆ ಶರಣಂಗೆ ತೊತ್ತಪ್ಪೆ ಶರಣಂಗೆ
ಭೃತ್ಯನಾಗಿ ಸದ್ಭಕ್ತರ ಮನೆಯ ಬಾಗಿಲ ಕಾಯ್ದಿಪ್ಪ
ಸೊಣಗನಪ್ಪೆ. ಕರ್ತಾರಾ ನಿನಗೆ ಕರವೆತ್ತಿ ಪೊಡೆ-
ಮಡುವ ಭಕ್ತರಮನೆಯ ಹಿತ್ತಲ ಬೇಲಿಯಾಗಿಪ್ಪೆನೈ
ರಾಮನಾಥಾ" ಎಂದು ಪ್ರಪ್ರಥಮ ವಚನಕಾರನಾದ
ದೇವರದಾಸಿಮಯ್ಯನು ಹೃದಯಂಗಮವಾಗಿ ಹೇಳಿ-
ದ್ದಾನೆ. ಈ ಮಾತಿನಲ್ಲಿ ಎಲ್ಲಿಯಾದರೂ ಅಹಂಕಾರದ
ಸುಳಿವು ಸುಳಿದಿದೆಯೇ ನೋಡಿ ! ಭಕ್ತಿಮಾರ್ಗದಲ್ಲಿ
ನಮ್ರತೆ ಇದೆ. ಅಲ್ಲಿ ನಾನೆಂಬುದಕ್ಕೆ ಇಂಬಿಲ್ಲ. ಅಲ್ಲಿ
ಎಲ್ಲವೂ ಪರಮಾತ್ಮನ ಪಾದಕ್ಕೆ ಅರ್ಪಣ.

ಭಕ್ತಿಯುಳ್ಳ ಭಕ್ತನು ಬಡವನಾಗಲಿ ಸಿರಿವಂತ
ನಾಗಲಿ, ಪಂಡಿತನಿರಲಿ ಪಾಮರನಿರಲಿ ಯಾವದೇ
ಮತದವನಿರಲಿ ಅವನು ಪರಮಾತ್ಮನಿಗೆ ಪ್ರಿಯನು.
ಅಂತಹ ಭಕ್ತನು ಏನೇ ಅರ್ಪಿಸಿದರೂ ಶಿವನು ಪ್ರೀತಿ
ಯಿಂದ ಸ್ವೀಕರಿಸುತ್ತಾನೆ.

"ಪತ್ರಂ ಪುಷ್ಪಂ ಫಲಂ ತೋಯಂ ಯೋಮೆ ಭಕ್ತ
ಪ್ರಯಚ್ಛತಿ ।
ತದಹಂ ಭಕ್ತ್ಯು ಪ್ರಹೃತಂ ಶ್ನಾಮಿ ಪ್ರಯತಾತ್ಮನಃ ॥

ಎಂದು ಗೀತೆಯಮುಖಾಂತರ ಶ್ರೀ ಕೃಷ್ಣನು ಜಗತ್ತಿಗೆ
ಹೇಳಿದ್ದಾನೆ. ಪರಮಾತ್ಮನಿಗೆ ಪರಿಶುದ್ಧ ಮನಸ್ಸಿನಿಂದ
ಒಂದು ದಳ ಪತ್ರಿಯನ್ನಾಗಲೀ ಒಂದು ಹೂವನ್ನಾಗಲಿ
ಹಣ್ಣನ್ನಾಗಲೀ ಕಡೆಗೆ ಒಂದು ಬಿಂದಿಗೆ ನೀರನ್ನಾಗಲಿ
ಕೊಟ್ಟದ್ದಾದರೆ ಅಷ್ಟರಿಂದಲೇ ಸಂತುಷ್ಟನಾಗುತ್ತಾನೆ.
ಒಮ್ಮೆ ದಾಯಾದಿಗಳಾದ ಪಾಂಡವ ಕೌರವರನ್ನು
ಒಂದುಗೂಡಿಸುವದಕ್ಕಾಗಿ ಶ್ರೀಕೃಷ್ಣನು ಹಸ್ತಿನಾವತಿಗೆ
ಆಗಮಿಸಿದಾಗ ಶೂದ್ರನಾದ ವಿದುರನು ಒಂದು ಗಿಂಡಿ
ಹಾಲನ್ನು ಪ್ರೀತಿಯಿಂದ ಕೊಟ್ಟದ್ದನ್ನು ಕುಡಿದು

ಆನಂದಪಡಲಿಲ್ಲವೇ ? ಶ್ರೀರಾಮನು ಶಬರಿಯ ಎಂಜಲ ವನ್ನು ತಿನ್ನಲಿಲ್ಲವೇ ? ಇಲ್ಲಿ ಅವರಲ್ಲಿರತಕ್ಕ ಭಕ್ತಿ ಪ್ರೀತಿ ದೊಡ್ಡದಾಯಿತೇ. ವಿನಃ ಅವರ ಬಲತನ ಕುಲ ಗೋತ್ರಗಳು ದೊಡ್ಡದಾಗಲಿಲ್ಲ. ಆದ್ದರಿಂದ ಭಗವಂತ ನಿಗೆ ಕೊಡಬೇಕಾದ ವಸ್ತು ಭಕ್ತಿಯಿಂದ ಕೂಡಿದ್ದಾಗಿರ ಬೇಕು. ಆ ವಸ್ತು ಏನೇ ಇರಲಿ, ಎಷ್ಟೇ ಇರಲಿ ಅದಕ್ಕೆ ಮಹತ್ವವಿಲ್ಲ.

ಇನ್ನು ಭಕ್ತಿಯಲ್ಲಿ ಸಕಾಮ–ನಿಷ್ಕಾಮಗಳೆಂದೆ-ರಡು ಭಾಗಮಾಡಬಹುದು. ಸಕಾಮದಲ್ಲಿ ಬೇಡಿಕೆ ಇದೆ ನಿಷ್ಕಾಮದಲ್ಲಿ ಇಲ್ಲ. ನಿಷ್ಕಾಮವು ಸರ್ವಾರ್ಪಣಭಾವ ದಿಂದೊಡಗೂಡಿದ್ದು. ಅಲ್ಲಿ ಎಲ್ಲ ಕರ್ಮವೂ ಶಿವಾರ್ಪಿತ. ಎಲ್ಲಿ ಬೇಡಿಕೆ ಇದೆಯೋ ಅಲ್ಲಿ ಸುಖ–ದುಃಖಗಳ ಮಿಶ್ರಣವಿದೆ. ನಾವು ಬೇಡಿಕೆಗೆ ಬಾಯಿಬಿಡದೇ ಸರ್ವ ವನ್ನೂ ನೋಡುವ. ನೀಡುವ ಸ್ವಾಮಿಯ ಮೇಲೆ ಭಾರ ಹಾಕಿ ನಾವು ನಮ್ಮ ಕರ್ತವ್ಯವನ್ನು ಭಕ್ತಿಯಿಂದ ಸೇವಾ ಬುದ್ಧಿಯನ್ನಿಟ್ಟುಕೊಂಡು ಮಾಡುತ್ತಾ ಹೋದರೆ ನಮಗೇನು ಬೇಕೆಂಬುದನ್ನು ಸರ್ವಜ್ಞಾನಿಯೂ ಸರ್ವ ಶಕ್ತನೂ ಆದ ಶಿವನರಿಯನೇ ? ಸಾಧಕನಿಗೆ ಎಡರು ತೊಡರುಗಳು ಬರುವವು ಸ್ವಾಭಾವಿಕ. ಅವುಗಳು ಶಿವನು ತಂದೊಡ್ಡಿದ ಪರೀಕ್ಷೆಯೆಂದರಿದು ಆ ಪರೀಕ್ಷೆ ಯಲ್ಲಿ ಪಾಸಾಗಲು ಎಚ್ಚರದಿಂದ ನಮ್ಮ ಕರ್ತವ್ಯದಲ್ಲಿ ಚ್ಯುತರಾಗದೇ ಅಂಜದೇ ಅಳುಕದೇ ಮುಂದರಿಯ ಬೇಕು. ಆವಾಗ ನಮ್ಮ ಸಾಧನ ಸಿದ್ಧಿಯಾಗಿ ಶಿವನೊ–ಲುಮೆ ಸಿಗುವದು. ಪಾಂಡುರಂಗನು ಗೋರಾಕುಂಬಾರ ನನ್ನು ಪರೀಕ್ಷಿಸಲಿಲ್ಲವೇ ? ಶಿವನು ಹರಿಶ್ಚಂದ್ರನ ಸತ್ಯ ವನ್ನು ಜಗತ್ತಿಗೆ ತೋರಿಸಿಕೊಡಲು ಎಷ್ಟು ತೊಂದರೆ ಗಳನ್ನು ತಂದೊಡ್ಡಿದನೆಂಬುದು ಸರ್ವರಿಗೂ ವೇದ್ಯವಾದ ವಿಷಯ. ನೆಲ್ಲೂರ ನಂಬೆಕ್ಕನನ್ನೂ ಪತಿವ್ರತಾ ಶಿರೋ-ಮಣಿ ಅನಸೂಯಾ ತಾಯಿಯನ್ನೂ ಎಷ್ಟೋ ಸಾಧು ಸಂತರನ್ನೂ ನಾನಾವಿಧ ಕಷ್ಟಕ್ಕೆ ಗುರಿಮಾಡಿದರೂ ಅವರು ಅಂಜಿದರೇ ? ಅಳುಕಿದರೇ ? ತಮ್ಮ ಕರ್ತವ್ಯ ಕರ್ಮದಲ್ಲಿ ಚ್ಯುತರಾದರೇ ? ಇದೆಲ್ಲ ಏತರಬಲ. ನಿಷ್ಕಾಮ ಭಕ್ತಿಯ ಬಲವಲ್ಲವೇ ? ಈ ಭಕ್ತಿಯಲ್ಲಿ ಪರಮಾತ್ಮನ ಹಂಗೂ ಇಲ್ಲ. "ನೀನ್ಯಾಕೊ ನಿನ್ನ ಹಂಗ್ಯಾಕೊ ನಾಮದ ಬಲವಂದಿದ್ದರೆ ಸಾಕೊ" ಎಂದು ದಾಸಶ್ರೇಷ್ಠರಾದ ಪುರಂದರದಾಸರು ನಿರ್ಭಯದಿಂದ ಅಂದಿದ್ದಾರೆ.

ಈ ಲೌಕಿಕ ವಿಷಯಗಳಲ್ಲಿ ಸಿಲುಕಿಕೊಂಡ ಮನವು ಈ ಭಕ್ತಿಯ ಆಳವನ್ನು ತಿಳಿಯದು. ಒಂದು ತುಚ್ಛವಾದ ವಸ್ತುವನ್ನು ಕಳೆದುಕೊಂಡರೆ ಕಣ್ಣೀರಿ–ಡುವಷ್ಟು ನಾವುಗಳು ಪರಶಿವನ ಕೃಪೆಗೆ ಪಾತ್ರರಾಗ-ಲಿಲ್ಲವಲ್ಲ. ಅವನ ಪಾದಕಮಲಗಳನ್ನು ನೋಡಿ ಆನಂದಿ ಸಲಿಲ್ಲವಲ್ಲ ಎಂದು ಒಂದು ತೊಟ್ಟಾದರೂ ನೀರು ನಮ್ಮ ಕಣ್ಣಿಂದ ಬೀಳುವದಿಲ್ಲ, ಪರಶಿವನಿಗಾಗಿ ಕಣ್ಣೀರಿ-ಟ್ಟವರು ಎಲ್ಲಿರುವರೋ ಆ ಸ್ಥಾನವೇ ಪುಣ್ಯಕ್ಷೇತ್ರ. ಪರಮಾತ್ಮನ ನಾಮಸ್ಮರಣೆ ಕೇಳಿದ ಕೂಡಲೇ ಎಲ್ಲಿಯ ವರೆಗೆ ಕಣ್ಣೀರು ಬರುವದಿಲ್ಲವೋ ಅಲ್ಲಿಯವರೆಗೆ ನಮಗೆ ದೇವರು ಕಾಣನು. ಹೇಗೆ ತಾಯಿಯ ನೆನಪಿಗಾಗಿ ಮಗುವು ಅತಿಯಾಗಿ ಅಳುತ್ತಲೇ ತಾಯಿಯು ಇದ್ದಲ್ಲಿಂದ ಬಂದು ಆ ಮಗುವನ್ನು ಸಂತೈಸುವಂತೆ ಪರಮಾತ್ಮನಿಗಾಗಿ ಹಲುಬಿ ಹಂಬಲಸಿ ಮೊರೆಇಟ್ಟರೆ ಅವನು ನಮ್ಮ ಹತ್ತಿರ ಬಾರದಿರುವನೇ ? ಈ ಸ್ಥಿತಿ ಬರಬೇಕಾದರೆ ನಮಗೆ ಪರಮಾತ್ಮನ ವಿರಹವ್ಯಥೆ ಆಗಬೇಕು ಅಂದಾಗ ಮಾತ್ರ ಸಾಧ್ಯ.

ಚಿಲಿಮಿಲಿಯೆಂದೊದರುವ ಗಿಳಿಗಳಿರಾ ನೀವು ಕಾಣಿರೇ, ಕೊಳನ ತಡೆಯಲ್ಲಾಡುವ ಹಂಸಗಳಿರಾ ನೀವು ಕಾಣಿರೇ, ಸ್ವರವೆತ್ತಿಪಾಡುವ ಕೋಗಿಲೆಗಳಿರಾ ನೀವು ಕಾಣಿರೇ, ಗಿರಿ ಗಂಹರದೊಳಗಾಡುವ ನವಿಲು–ಗಳಿರಾ ನೀವು ಕಾಣಿರೇ, ಚನ್ನಮಲ್ಲಿಕಾರ್ಜುನನ ಬಲ್ಲರೆ ನೀವು ಹೇಳಿರೇ.

ಎಂದು ವೈರಾಗ್ಯನಿಧಿ ಅಕ್ಕಮಹಾದೇವಿಯು ಆರ್ತನಾದ ದಿಂದ ಮೊರೆಇಟ್ಟಿದ್ದಾಳೆ. ಇದಕ್ಕೆ ಪರಮಾತ್ಮನ ಮೇಲಿದ್ದ ಅತಿಯಾದ ಭಕ್ತಿಯೇ ..ಕಾರಣವಲ್ಲದೇ ಮತ್ತೇನು ?

ಭಕ್ತಿಯು ಒಳಗೆ ಒಲಿಯಿತೆಂದರೆ ಅದರ ಚಿನ್ಹ ಗಳು ಹೊರಗೆ ತೋರಹತ್ತುತ್ತವೆ. ಅದರಲ್ಲಿ ಮೈಮರೆತು ಬಾಹ್ಯಪ್ರಜ್ಞೆಯನ್ನೇ ಕಳಕೊಂಡವರ ಕತೆಗಳನ್ನು ಎಷ್ಟೋ ಕೇಳುತ್ತೇವೆ.

ಉದಾಹರಣೆಗೆ ಒಂದನ್ನು ವಿವರಿಸಬಹುದಿಲ್ಲಿ :—

ಉತ್ತರಹಿಂದುಸ್ತಾನದಲ್ಲಿ ಒಬ್ಬ ವ್ಯಾಪಾರಿ ಇದ್ದ. ಅವನು ಕಾಳು ಅಳೆಸುತ್ತಿದ್ದ. ಹಿಂದಿಯಲ್ಲಿ " ತೇರಾ " ಎಂಬ ಶಬ್ದವಿದೆ. ತೇರಾ ಅಂದರೆ ಹದಿಮೂರು ಎಂದು ಆಗುತ್ತದೆ. ಮತ್ತೊಂದು ಅರ್ಥ ಅಂದರೆ ನಿನ್ನವನೆಂದು ಆಗುತ್ತದೆ. ಆ ಭಕ್ತಿಭಾವದ ವರ್ತಕನು ಒಮ್ಮೆ ಧಾನ್ಯ ವನ್ನು ಅಳೆಯುವಾಗ ಹನ್ನೆರಡರವರೆಗೆ ಸರಿಯಾಗಿ ಅಳೆದು ಹದಿಮೂರನೇದ್ದಕ್ಕೆ "ತೇರಾ" ಅನ್ನುತ್ತಲೇ ತನ್ನ ವ್ಯಾಪಾರದ ಅರಿವು ಹಾರಿಹೋಗಿ ನಾನು ನಿನ್ನವ ನೆಂದು ಪರಮಾತ್ಮನಿಗೆ ನಿವೇದಿಸಿಕೊಳ್ಳುವ ಭಾವವೇ ಮೈದುಂಬಿ ಮುಂದೆ ಪ್ರತಿಯೊಂದು ಅಳತೆಗೂ "ತೇರಾ" ಅನ್ನುತ್ತಲೇ ಇದ್ದನಂತೆ. ಹೀಗೆಯೇ ಪರಮಾತ್ಮನ ನಾಮಸ್ಮರಣೆಯಲ್ಲಿ ಮೈಮರೆತು ಮಣ್ಣಿನ ಕೆಸರಿನಲ್ಲಿ ತನ್ನ ಮಗನನ್ನೇ ತುಳಿಯಲಿಲ್ಲವೆ ! ಗೋರಾಕುಂಬಾರ. ಹೀಗೆ ಪರಮಾತ್ಮನ ನೆನಪಾದ ತಕ್ಷಣ ದೇಹಭಾವ ಅಳಿದಾಗ ಅದು ಭಕ್ತಿಯ ತೂರ್ಯಾವಸ್ಥೆ ಎನಿಸುತ್ತದೆ.

" ಮನ ಮನ ಬೆರಸಿದಲ್ಲಿ ತನು ಕರಗದಿದ್ದರೆ, ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿರ್ದರೆ, ಕಂಗಳ ಶೃಜಲಂಗಳು ಸುರಿಯದಿರ್ದಡೆ, ನುಡಿವಲ್ಲಿ ಗದ್ಗದಂಗಳು ಹೊರಹೊಮ್ಮದಿರ್ದೊಡೆ, ಕೂಡಲ ಸಂಗಮದೇವರ ಭಕ್ತಿಗೆ ಇದೇ ಚಿನ್ಹ, ಇವು ನನ್ನಲ್ಲಿಲ್ಲ ವಾಗಿ ಆನು ಡಾಂಭಿಕ ಕಾಣಿರೇ- "

ಎಂದು ಬಸವಣ್ಣನು ಸ್ವತಃ ಅನ್ನಬೇಕಾದರೆ ಅವನ ಹೃದಯ ಎಷ್ಟು ಹಣ್ಣಾಗಿರಬೇಕು, ನೋಡಿ! ಈ ಮಹಾತ್ಮನ ಅನುಯಾಯಿಗಳೆಂದು ಹೇಳಿಕೊಳ್ಳುವ ನಾವಿಂದು ಎಷ್ಟು ನಿರ್ದಯಹೃದಯಿಗಳಾಗಿದ್ದೇವೆ. ಬಾಯಿಯಲ್ಲಿ ಬಸವತತ್ವದ ಸುರಿಮಳೆ. ತಲೆಯಲ್ಲಿ ವಿಷಸಮಾನವಾದ ವಿಚಾರಗಳ ಝುರಿ. ಹೀಗಾದರೆ ಬಸವಣ್ಣ ಮೆಚ್ಚುವ ಬದಲು ಒಮ್ಮೆಯಾದರೂ ಇರಿ-ಯದೆ ಬಿಡ. ಭಕ್ತಿ ಹೇಳುವದಲ್ಲ, ಮಾಡುವದು. ಭಕ್ತಿಯು ನಾಲಿಗೆಯ ಕಾರ್ಯವಲ್ಲ, ಕೈಗಳ ಕಾರ್ಯ. ಭಕ್ತಿಯಿಲ್ಲದ ಬಾಳು ನಾಯಿಗೂ ಬಲು ಕೀಳು. ಭಕ್ತಿ ಇಲ್ಲದ ಹೃದಯ ಬರಡಾದ ವೃಕ್ಷವಿದ್ದಂತೆ ನಿಷ್ಪ್ರಯೋ-ಜಕವಾದದ್ದು. ಕಾರಣ ಸಕಲರೂ ಗುರುವಿನಲ್ಲಿ ಅಚಲ ವಾದ ಭಕ್ತಿವಿಶ್ವಾಸಗಳನ್ನಿಟ್ಟುಕೊಂಡು ಗುರುವಿನ ಆಜ್ಞೆಯಂತೆ ನಡೆದು ಗುರುಪುತ್ರರಾಗಿ ಮುಕ್ತಿಸಾಯು ಜ್ಯವನ್ನು ಹೊಂದುವ ಶಕ್ತಿಯನ್ನು ಸದ್ಬುದ್ಧಿಯನ್ನೂ ಸದ್ಗುರುವು ಸರ್ವರಿಗೂ ದಯಪಾಲಿಸಲೆಂದು ಪ್ರಾರ್ಥಿಸಿ ನನ್ನ ಅಲ್ಪ ವಿಷಯಕ್ಕೆ ವಿರಾಮವನ್ನೀಯುತ್ತೇನೆ.

ಈ ಭಕ್ತಿಯ ವಿಷಯವಾಗಿ ಎಷ್ಟು ಹೇಳಿದರೂ, ಬರೆದರೂ ಕಡಿಮೆಯೇ. ಸಪ್ತಸಾಗರಗಳೇ ಮಶಿಯಾಗಿ ಭೂಮಿಯೇ ಕಾಗದವಾಗಿ ಮೇರುಗಿರಿಯೇ ಲೇಖನಿ-ಯಾದರೂ ಇದರ ವರ್ಣನೆಯನ್ನು ಬರೆಯುವುದು ಮುಗಿಯದೆಂದ ಬಳಿಕ ಈ ನನ್ನ ಸಣ್ಣ ಪೆನ್ನು ಎಷ್ಟು ಬರೆದೀತು !

ಈ ಒಂದು ಶ್ರೀ ಗುರುವಿನ ಸೇವೆಮಾಡುವ ಸುಯೋಗವನ್ನು ತಂದುಕೊಟ್ಟ ಸಮಿತಿಗೆ ನನ್ನ ಅನಂತ ಧನ್ಯವಾದಗಳು.

— ಶ್ರೀ ಷ|| ಬ್ರ|| ಶಾಂತಲಿಂಗ ಶಿವಾಚಾರ್ಯರು
ಪಂಚಗೃಹ ಹಿರೇಮಠ, ಅಮ್ಮಿನಭಾವಿ.

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ವೀರಶೈವ ಧರ್ಮ ಮತ್ತು ಪ್ರಾಚೀನತೆ

ಲೇಖಕರು :
ಶ್ರೀಮದುಜ್ಜಯನೀ ಸದ್ಧರ್ಮ ಸಿಂಹಾಸನ ಜ್ಞಾನಗುರು ವಿದ್ಯಾಪೀಠದ ಸಂಚಾಲಕರಾದ
'ಶಿವಾದ್ವೈತ ವಿದ್ವಾನ' 'ಸಾಹಿತ್ಯರತ್ನ' ಶ್ರೀ ಪಟ್ಟಾಧ್ಯಕ್ಷ
ಶ್ರೀ. ಷ॥ ಬ್ರ॥ ಶಿವಪ್ರಕಾಶ ಶಿವಾಚಾರ್ಯ ಸ್ವಾಮಿಗಳು

ಭಾರತೀಯ ಸಂಸ್ಕೃತಿಯಲ್ಲಿ ವೇದಗಳಷ್ಟೇ ಆಗಮಗಳು ಪ್ರಮಾಣೀಭೂತವಾಗಿವೆ. ಇಪ್ಪತ್ತೆಂಟು ಸಂಖ್ಯೆಯುಳ್ಳ ಆಗಮಗಳಲ್ಲಿ ಮತ, ಕುಲ, ಧರ್ಮ, ಕರ್ಮ, ಶಿಲ್ಪ, ವ್ಯಾಪಾರ ಮುಂತಾದ ರಹಸ್ಯವೆಲ್ಲವೂ ಶಿವಾಗಮಗಳಿಂದಲೇ ಉಪದೇಶಿಸಲ್ಪಡುವವು. ವೀರಶೈವರಿಗಂತೂ ಶಿವಾಗಮಗಳು ಪರಮ ಪ್ರಮಾಣೀಭೂತಗಳಾಗಿವೆ. ವೀರಶೈವ ಮತವು ಚತುರ್ಯುಗಗಳಲ್ಲಿಯೂ ಇತ್ತೆಂಬುದಕ್ಕೆ ಆಗಮ ಉಪನಿಷತ್ತು ಪುರಾಣಗಳಿಂದ ಕಂಡುಕೊಳ್ಳಬಹುದು.

ಈ ಮತವು ಶಿವಾದ್ವೈತ, ಶಕ್ತಿವಿಶಿಷ್ಟಾದ್ವೈತ, ದ್ವೈತಾದ್ವೈತ, ಎಂಬ ಪರ್ಯಾಯನಾಮದಿಂದ ಪ್ರಸಿದ್ಧವಾಗಿದೆ.

"ಶಕ್ತಿರ್ವಿಕಾಸ ಭಾವೇನ ವಿಶ್ವಸೃಷ್ಟಿರ್ಭವೇತ್ಸದಾ
ತಸ್ಯಾಸ್ಸಂಕೋಚ ಭಾವೇನ ವಿಶ್ವಸ್ಯ ಪ್ರಲಯೋಭವೇತ್"
(ಸಿದ್ಧಾಂತ ಚಂದ್ರಿಕಾ)

ಶಿವಶಕ್ತಿಯ ವಿಕಾಸವೇ ಸೃಷ್ಟಿ. ಸಂಕೋಚವೇ ಪ್ರಳಯ. ಒಂದುವೇಳೆ ಪರಶಿವನಿಗೆ ವಿಶ್ವವನ್ನು ಸೃಜಿಸಿ ವಿನೋದಿಸಬೇಕೆಂಬ ಸಗುಣಾನಂದ ಲೀಲಾವಿಲಾಸದ ನೆನಹು ತೋರಿದಡೆ "ಇದಂ ಭೂತ್ವಾ" ಎಂದು ನೆನೆದಾಕ್ಷಣ ಅನಂತ ಬ್ರಹ್ಮಾಂಡ ತಂಡಗಳಂ ಪುಟ್ಟಿಸಿ ಅದರೊಳಗಿರುವ ದೇವದಾನ ಮಾನವಾದಿಗಳೇ ಭೃತ್ಯರಾಗಿ ತಾನೇ ಕರ್ತನಾಗಿ ಅವರಿಂದ ಪೂಜಾ ನಮಸ್ಕಾರ ಕೈಕೊಂಡು ಅವರವರ ಮನೋಭಿಷ್ಟಂಗಳಂ ಕೊಟ್ಟು ವಿನೋದಿಸಬಲ್ಲನು. ಒಂದುವೇಳೆ ಪರಶಿವಂಗೆ ಆ ಲೀಲೆಯು ಸಾಕಾದರೆ "ಹುತರ್ಭು" ಎಂದು ನೆನೆದಾಕ್ಷಣ ಅವನ್ನೆಲ್ಲ ತನ್ನಲ್ಲಿ ಒಳಗೊಂಡು ತಾನೆಂದಿನಂತೆ ನಿರಾಕಾರನಾಗಿರಬಲ್ಲನು.

"ಯಥಾ ಸುದಿಪ್ತಾತ್ ಪಾವಕಾತ ವಿಶ್ವಲಿಂಗಾಃ
ಸಹಸ್ರಶಃ ಪ್ರಭವಂತೇ ಸರೂಪಾಃ
ತಥಾ ಪರಾತ್ ವಿವಿದಾಃ ಸೌಮ್ಯಭಾವಾಃ
ಪ್ರಭವಂತೆ ತತ್ರ ಶೈವಾಪಿಯಂತಿ"

ಪ್ರಜ್ವಲಿಸುತ್ತಿರುವ ಲೀಲಾವಶನಾದ ಶಕ್ತಿವಿಶಿಷ್ಟ ಪರಶಿವನಿಂದ ಅನಂತಾನಂತ ಜೀವಾತ್ಮರು ಹುಟ್ಟಿ ಅಲ್ಲಿಯೇ ಲಯವಾಗುವರು. ಆಣವಾದಿ ಮಲತ್ರಯಗಳು ಜೀವಾತ್ಮನಿಗೆ ಆವರಿಸಿವೆ. ಈ ಕಾರಣದಿಂದ ಅರಿಷಡ್ವರ್ಗಗಳು ಪ್ರಾಪ್ತವಾಗಿವೆ. ಇವುಗಳ ನಿವಾರಣೆಗಾಗಿ ಶಿವದೀಕ್ಷೆಯನ್ನು ಭಕ್ತನಿಗೆ ಶ್ರೀ ಗುರುವು ಕರುಣಿಸುತ್ತಾನೆ. ವೇದಾ, ಕ್ರಿಯಾ, ಮನುದೀಕ್ಷೆಯಿಂದ ಪಾಶಮುಕ್ತನಾದ ಜೀವನನ್ನು ಉದ್ಧರಿಸುವುದಕ್ಕಾಗಿಯೇ ಭಕ್ತಿಯು ಅವನನ್ನು ಆಶ್ರಯಿಸುತ್ತದೆ.

ಆ ಭಕ್ತಿಯು ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸ ಎಂಬ ಆರು ಹಂತದಲ್ಲಿ ಭಕ್ತನನ್ನು ಉನ್ನತ ಸ್ಥಿತಿಯಲ್ಲಿ ಕೊಂಡೊಯ್ದು ಶಿವನಲ್ಲಿ ಸಮರಸಗೊಳಿಸುತ್ತದೆ.

## ಷಟ್‌ಸ್ಥಲ ಸೋಪಾನ :

೧. ಭಕ್ತಸ್ಥಲ :— ಇದು 'ಬೀಜವೃಕ್ಷ ನ್ಯಾಯಸ್ಥಲ' ಶಕ್ತಿಪಾತ (ಶಿವಕೃಪೆ) ದಿಂದ ಕೃತಾರ್ಥನಾಗಿ ಶಿವದೀಕ್ಷೆ ಪಡೆದ ಜೀವನಲ್ಲಿ ಭಕ್ತಿಯು ಶ್ರದ್ಧಾರೂಪವಾಗಿರುತ್ತದೆ. ಆಗ ಅವನಲ್ಲಿ ದೇಹಾಭಿಮಾನ

ನಷ್ಟವಾಗಿ ಅವನಿಗೆ ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ ಎಂಬ ಅಷ್ಟಾವರಣಗಳಲ್ಲಿ ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರ ಮುಂತಾದ ಪಂಚ ಆಚಾರಗಳಲ್ಲಿ ಶ್ರದ್ಧೆಯುಂಟಾಗಿ ಅವುಗಳನ್ನು ಅನುಷ್ಠಾನ ಮಾಡುತ್ತಾನೆ. ಈ ಅನುಷ್ಠಾನದಿಂದ ಜೀವಾತ್ಮನಲ್ಲಿ ಶಿವತ್ವ ಅಭಿವ್ಯಕ್ತವಾಗುತ್ತದೆ.

"ಸದಾಚಾರಃ ಶಿವೇ ಭಕ್ತಿಲಿಂಗೇ ಜಂಗಮ ಏಕಧೀಃ
ಲಾಂಛನೇ ಶರಣೇ ಭಕ್ತಿಃ ಭಕ್ತಸ್ಥಲ ಮನುತ್ತಮಂ ||

ಈ ಸ್ಥಲದ ಸ್ವರೂಪವಾಗಿದೆ.

೨. ಮಾಹೇಶ್ವರ ಸ್ಥಲ :— ಇದು "ಸಲಿಲ ಮುಕ್ತನ್ಯಾಯ ಸ್ಥಲ" ಕಡಲಲ್ಲಿರುವ ಮುತ್ತಿನ ಚಿಪ್ಪಿನಲ್ಲಿ ಬಿದ್ದಿರುವ ಸ್ವಾತಿ ಮಳೆ ನೀರು ಕಾಲಾಂತರದಲ್ಲಿ ಗಟ್ಟಿಗೊಂಡು ಮುತ್ತು ಆಗುವಂತೆ ಭಕ್ತನ ಈಶ್ವರಾಭಿಮುಖವಾದ ಶ್ರದ್ಧೆಯೇ ಚಿತ್ತ ಸ್ಥೈರ್ಯರೂಪದಿಂದ ಘನೀಭಾವ ಪಡೆದು ನಿಷ್ಠೆಯಾಗಿ ಪರಿಣಮಿಸುತ್ತದೆ. ಆದ್ದರಿಂದ ಈ ಸ್ಥಲದಲ್ಲಿರುವ ಭಕ್ತನಿಗೆ ನಿಷ್ಠಾಭಕ್ತಿ ಎಂದು ಹೆಸರು. ಆದ್ದರಿಂದ ಸಾಧಕನು ತನ್ನ ಆಚಾರ ವಿಚಾರ ಮತ್ತು ಅನುಷ್ಠಾನಗಳಲ್ಲಿ ದೃಢವ್ರತಿಯಾಗುತ್ತಾನೆ. ಅವನೇ ಶಿವವ್ರತಿ.

ಕೀವತೀ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ |
ಬ್ರಹ್ಮಾದಿ ಸ್ಥಾನ ವಿಮುಖೋ ಭಕ್ತೋ ಮಹೇಶ್ವರ ಸ್ಮೃತಃ||

೩. ಪ್ರಸಾದಿ ಸ್ಥಲ : ಇದು "ಅನಲಕಾಷ್ಠ ನ್ಯಾಯ ಸ್ಥಲ" ಇಲ್ಲಿಯ ಭಕ್ತಿಯು ಚಿತ್ತಶುದ್ಧಿಯ ಮೂಲಕ "ಅವಧಾನ ಭಕ್ತಿ" ಎನಿಸುತ್ತದೆ. ಕಾಷ್ಟಕ್ಕೆ ಸೋಂಕಿದ ಬೆಂಕಿಯು ಕಟ್ಟಿಗೆಯನ್ನು ಪೂರ್ಣ ಸುಟ್ಟು ಹೇಗೆ ಕಾಷ್ಟಗುಣಗಳನ್ನು ಕಳೆಯುತ್ತದೆಯೋ ಅದರಂತೆ ಈಶ್ವರಪ್ರೇಮವು ಅವಧಾನವೆನಿಸುತ್ತದೆ. ಸಾಧಕನ ತ್ರಿಕರಣಗಳನ್ನು ವ್ಯಾಪಿಸಿ ಅಲ್ಲಿಯ ಶಬ್ದ, ಸ್ಪರ್ಶ, ಮೊದಲಾದ ತನ್ಮಾತ್ರ ವಿಷಯಗಳೆನಿಸಿ ಸ್ರಕ್ ಚಂದನಾದಿ ವಿಷಯಗಳನ್ನು ಭಸ್ಮಗೊಳಿಸಿ ಅವನನ್ನು ಪ್ರಸಾದರೂಪವಾಗಿ ಪರಿವರ್ತಿಸುತ್ತದೆ. ಆಗ ಸಾಧಕನ ಚಿತ್ತ ಪ್ರಸನ್ನತೆ ಮೂಡಿಸುತ್ತದೆ. ಅಂಥಾ ಭಕ್ತನ ವ್ಯವಹಾರವೆಲ್ಲ ಶಿವರೂಪ. ಅವನ ಆಚಾರ ವಿಚಾರ ವೆಂದೆನಿಸಿ ಅವನು ಪ್ರಸಾದಕಾಯವೆನಿಸುತ್ತಾನೆ.

"ಮನಃ ಪ್ರಸಾದ ಸಿದ್ಧ್ಯರ್ಥಂ ನಿರ್ಮಲ ಜ್ಞಾನ ಕಾರಣಂ
ಶಿವಪ್ರಸಾದ ಸ್ವೀಕುರ್ವನ್ ಪ್ರಸಾದೀತ್ಯೇಹೇ ಕಥ್ಯತೇ ||

೪. ಪ್ರಾಣಲಿಂಗ ಸ್ಥಲ :— ಇಲ್ಲಿಯದು 'ಅನುಭವ ಭಕ್ತಿ' ಅವನ ಅನುಭವ ಭ್ರಮರವನೆನೆದು ಕೀಟವು ಭ್ರಮರವೇ ಆಗುವ ಪರಿ

"ಕೀಟೋ ಭ್ರಮರಯೋಗೇನ ಭ್ರಮರೋಭವತಿ ಧ್ರುವಂ |
ಶಿವಭಕ್ತಾಃ ಶಿವಯೋಗೇನ ಶಿವೋಭವತಿ ನಿಶ್ಚಿತಂ ||

ಎಂಬಂತೆ ಜೀವಭ್ರಮೆ ಅಳಿದ ಸಾಧಕನು ಶಿವಾನುಭವಿಯಾಗುತ್ತಾನೆ. ನಿರಂತರವೂ ಶಿವನ ಚಿಂತನದಲ್ಲಿರುವ ಸಾಧಕನು ಶಿವಧ್ಯಾನ ಪೂಜಾ ಜಪಾದಿಗಳಲ್ಲಿ ಶಿವನ ಅನುಭವ ಪಡೆಯುತ್ತಾನೆ.

"ಲಿಂಗಂ ಚಿದಾತ್ಮಕಂ ಬ್ರಹ್ಮೆತಚ್ಛಕ್ತಿಃ ಪ್ರಾಣರೂಪಿಣೀ
ತದ್ರೂಪ ಲಿಂಗ ವಿಜ್ಞಾನಿ ಪ್ರಾಣಲಿಂಗೇತಿಕಥ್ಯತೇ"

ಎಂಬುದು ಅವನ ಸ್ಥಿತಿ ಇದು "ಭ್ರಮರ ಕೀಟ ನ್ಯಾಯ ಸ್ಥಲ"

೫. ಶರಣಸ್ಥಲ :— "ಸತೀ ಪತಿ ನ್ಯಾಯ ಸ್ಥಲ" ಇಲ್ಲಿಯದು ಅನಂತಭಕ್ತಿ. ಶಿವನ ನಿತ್ಯತ್ವ ವಿಷಯದಲ್ಲಿ ಉಂಟಾದ ನಿಶ್ಚಿಂತೆಯಿಂದ ಅವನಿಗೆ ಆನಂದ. ಇಲ್ಲಿಯ ಸಾಧಕ ಶಿವಾನಂದಿ. ಈ ಸ್ಥಿತಿಯನ್ನು ಶೃತಿಯು "ಯಥಾ ಪ್ರಿಯ ಯಾನಂ ಪರಿಷ್ವಕ್ತಃ ನ ಕಿಂಚಿತ್ ವೇದನಾಂ ತರಂ" ಎಂಬುದಾಗಿರುತ್ತದೆ.

"ಸತಿಚಾಹಂ ಪತಿರ್ಲಿಂಗಂ ಹೃದಿಯುಕ್ತಃ ಸ್ವಯಂ ಪ್ರಭುಃ
ಪ್ರಾಪಂಚಿಕ ಸುಖಂ ನಾಸ್ತಿ ಶರಣಸ್ಥಲಮುತ್ತಮಂ ||

೬. ಐಕ್ಯ :— ಇದು "ಶಿಖಿಕರ್ಪೂರ ನ್ಯಾಯ ಸ್ಥಲ" ಇದು ಸಮರಸ ಭಕ್ತಿಭೂತವಸ್ತುಗಳೆನಿಸಿ ಶಿಖಿ ಮತ್ತು ಕರ್ಪೂರಗಳು ಸಂಯೋಗಮಾತ್ರದಿಂದ ಉರಿದು ಕಡೆಗೆ ಎರಡೂ ಇಲ್ಲವಾಗುವಂತೆ ಶರಣನೆನಿಸಿದ ಸಾಧಕನು ಸಮರಸ ಭಕ್ತಿಯ ಪ್ರಭಾವದಿಂದ ಕಿಂಚಿಜ್ಞಾತೃ ಕಿಂಚಿತ್ಕರ್ತೃತ್ವಾದಿ ಜೀವಗುಣವಳಿದು ಮುಕ್ತನಾಗಿ ಸರ್ವಜ್ಞತ್ವಾದಿ ಜೀವಗುಣವಳಿದು ನೀರಿನಲ್ಲಿ ನೀರು ಮತ್ತು ಬೆಂಕಿಯಲ್ಲಿ ಬೆಂಕಿ ಬೆರೆದಂತೆ ನದಿಗಳು ಸಮುದ್ರವನ್ನು ಸೇರಿ ತಾದಾತ್ಮ್ಯವನ್ನು ಪಡೆಯುವಂತೆ ಜೀವನು ಶಿವನಾಗುತ್ತಾನೆ.

" ಪ್ರಾಣಲಿಂಗಾದಿ ಯೋಗೇನ ಸುಖಾತಿಶಯ ಮೇಯುವಾನ್
ಶರಣಾಖ್ಯಃ ಶಿವೇನೈಕ್ಯ ಭಾವನಾದೈಕ್ಯವಾನ ಭವೇತ್ ॥

ಇದು ಸಮರಸಮುಕ್ತಿಯ ಸ್ವರೂಪ. ಲಿಂಗಾಂಗ ಸಾಮರಸ್ಯ ಮುಕ್ತಿಪಡೆಯುತ್ತಾನೆ.

ವೀರಶೈವ ಧರ್ಮದಲ್ಲಿ ಕರ್ಮಜ್ಞಾನ ಸಮುಚ್ಚ-ಯವೆನ್ನಬಹುದು.

" ಏಕೇನಾ ಜನ್ಮನಾಮುಕ್ತಿಃ ವೀರಾಣಾಂತು ಮಾಹೇಶ್ವರೀ"

ಎಂಬ ಆಗಮೋಕ್ತಿಯಂತೆ ಲಿಂಗಾಂಗಿ ಒಂದೇ ಜನ್ಮದಲ್ಲಿ ಮುಕ್ತಿಪಡೆಯುತ್ತಾನೆ.

( ತತ್ವಪ್ರಕಾಶ ಗ್ರಂಥಾಧಾರದಿಂದ )

## ವೀರಶೈವ ಸಿದ್ಧಾಂತ ಸ್ಥಾಪಕರು ಶ್ರೀ ಜಗದ್ಗುರು ಪಂಚಾಚಾರ್ಯರು.

ಈಶ್ವರ ನಿರ್ಮಿತ ಜಗತ್ತಿನಲ್ಲಿ ಈಶ್ವರಾಜ್ಞೆಯ ಮೇರೆಗೆ ಪಂಚ ಆಚಾರ್ಯರು ಲಿಂಗೋದ್ಭವರಾಗಿ ದೇಶವನ್ನು ಐದು ಭಾಗವನ್ನಾಗಿಮಾಡಿ ಐದು ಧರ್ಮ ಪೀಠಗಳನ್ನು ಸ್ಥಾಪಿಸಿದರು. ಅವುಗಳ ಮುಖಾಂತರ ಶಿಷ್ಯಕೋಟಿಗೆ ವೀರಶೈವ ಮತತತ್ವ ಆಚಾರ ವಿಚಾರಗಳನ್ನು ಬೋಧಿಸಿದರು.

ಈ ಪೂಜ್ಯಪಾದರು ಜಗತ್ತಿನಲ್ಲಿ ಅವತರಿಸಿ ವೀರಶೈವ ಸಿದ್ಧಾಂತವನ್ನು ಬೋಧಿಸಿದ್ದರಿಂದ ಮತ ಸ್ಥಾಪಕರೆಂದು ಶಿವಾಗಮಗಳೂ, ಪುರಾಣಗಳೂ, ವೇದಉಪನಿಷತ್ತುಗಳೂ ಸಾರುತ್ತವೆ. ಆದುದ್ದರಿಂದಲೇ ಈ ಪೀಠಾಧಿಪತಿಗಳಿಗೆ 'ಜಗದ್ಗುರು' ಎಂಬ ಬಿರುದು ನಾಲ್ಕು ಯುಗದಿಂದಲೂ ಬಂದಿರುವುದು. ಈ ವಿಚಾರ ಶಿವಾಗಮಗಳಿಂದ ತಿಳಿದುಬರುತ್ತದೆ. ಈ ಮಹಾ ಗುರುಗಳೇ ವೀರಶೈವ ಮತಕ್ಕೆ ಸರ್ವಭೌಮರು. ಅವರು ಸ್ಥಾಪಿಸಿದ ಪಂಚಪೀಠಗಳೇ ಸಾರ್ವಭೌಮ ಪೀಠಗಳು. ವೈರಾಗ್ಯಶೀಲರಾದ ಅನಾದಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು ತಮ್ಮ ಸಿದ್ಧೇಶ್ವರ ವಚನದಲ್ಲಿ—

ಆದಿಯಲ್ಲಿ ಶಿವತತ್ವದಲ್ಲಿ ರೇಣುಕನುದಯವಾಗ. ದಿದ್ದರೆ, ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿ-ಯೆಂತು, ಆ ಶಿವಲಿಂಗದಲ್ಲಿ ಹುಟ್ಟಿ ಶಿವಲಿಂಗದಲ್ಲಿಯೇ, ಲಯವಾದ ರೇವಣಸಿದ್ಧೇಶ್ವರನು ಅನಾದಿಮುಕ್ತನಲ್ಲ, ಆದಿಮುಕ್ತನೆಂದು ಆಡುವ ಅಜ್ಞಾನಿಗಳಿಗೆ ನಾಯಕ ನರಕತಪ್ಪದು."

ತಾತ್ಪರ್ಯ :— ಪರಮಪೂಜ್ಯರಾದ ಶ್ರೀ ರೇಣುಕಾ-ಚಾರ್ಯರು ಆದಿಯಲ್ಲಿ ಶಿವತತ್ವದಿಂದಲೇ ಉದ್ಭವಿ-ಸಿದ್ದು ಈ ಲೋಕದಲ್ಲಿ ಕೊಲ್ಲಿಪಾಕಿ ಸುಕ್ಷೇತ್ರದಲ್ಲಿ ಶ್ರೀ ಸೋಮನಾಥಲಿಂಗದಿಂದ ಉದ್ಭವಿಸಿ ಶ್ರೀ ರೇಣುಕರು ತಮ್ಮ ಲೀಲೆಯನ್ನು ಮುಗಿಸಿದ ನಂತರ ಮತ್ತೆ ಅದೇ ಸೋಮನಾಥಲಿಂಗದಲ್ಲಿ ಅಡಗಿದರು. ಶ್ರೀ ರೇವಣ ಸಿದ್ಧೇಶ್ವರರು ಅನಾದಿಮುಕ್ತನಲ್ಲಿ ಆದಿಮುಕ್ತನು ಎಂದು ಆಡಿಕೊಳ್ಳುವ ತಿಳಿಗೇಡಿಗಳಿಗೆ ಎಲ್ಲಕ್ಕೂ ಹೆಚ್ಚಿನ ನರಕ ತಪ್ಪಿದ್ದಲ್ಲ. ವೈರಾಗ್ಯ ಶಿಖಾಮಣಿ ಅಕ್ಕಮಹಾದೇವಿಯು ತಮ್ಮ ವಚನದಲ್ಲಿ —

" ಲಿಂಗದಿಂದ ಉದಯಿಸಿ ಲಿಂಗವಿಡಿದ ಪುರಾ-ತನರ ಇಂಗಿತವನೇನೆಂಬೆನಯ್ಯ ಅವರ ನುಡಿಯೇ ವೇದ, ಅವರ ನುಡಿಯೇ ಆಗಮ. ಅವರು ಲೋಕದ ಮಾನವರೆನ್ನಬಹುದೆ ಹುಟ್ಟುಗೆಟ್ಟೆನಯ್ಯ ಚನ್ನಮಲ್ಲಿಕಾರ್ಜುನ "

ತಾತ್ಪರ್ಯ :— ಶಿವತತ್ವ ( ಲಿಂಗ ) ದಿಂದ ಉದ್ಭವಿಸಿದ ಪುರಾತನ ( ಪಂಚಾಚಾರ್ಯರ ) ಮಹಿಮೆಯ ಗುಟ್ಟೆಸ್ನು ಏನು ಹೇಳಲಿ ! ಲಿಂಗದೊಳಗಿದ್ದ ಪುರಾತನರು ಉದ್ಭವಿಸಿದರು. ಮರಳಿ ಪುರಾತನರು ಲಿಂಗದೊಳಗೆ ಬೆರಸಿದರು ನೋಡಿರಯ್ಯ ಇಂತಪ್ಪ ಪುರಾತನರಿಗೆ ಶರಣೆಂದು ಅವರು ಆಡಿದುದೇ ವೇದವಾಗುವಷ್ಟು, ಅವರು ನಡೆದುದೇ ಆಗಮವಾಗುವಷ್ಟು ಉನ್ನತವಾದದ್ದು. ಇಂತಹ ಮಹಿಮಾಶಾಲಿಗಳಿಗೆ ಜನನಮರಣ ದ್ವಂದ್ವಕ್ಕೊಳಗಾಗಿ ಜನಿಸಿದ ಸಾಮಾನ್ಯ ಮಾನವರೆಂದು ಅನ್ನಬಹುದೆ ! ಶಿವತತ್ವದಲ್ಲಿಯೇ ಇದ್ದ ಈ ಮಹಿಮಾಶಾಲಿ ಪುರಾತನರಿಗೆ ( ಪಂಚಾಚಾರ್ಯರಿಗೆ ) ಶರಣುಹೋಗಿ ಹುಟ್ಟುಸಾವುಗಳೆಂಬ ಜಂಜಡವನ್ನು ಕಳೆದು ಮೋಕ್ಷವನ್ನು ಸಂಪಾದಿಸಿದೆನು.

" ಲಿಂಗಮುಖದಲುದಯನಾದ ಶರಣಂಗಲ್ಲದೇ ಅಯ್ಯಾ ಕೂಡಲಸಂಗನಶರಣರ ಭಕ್ತಿ ಭಂಡಾರವು ಎನಗೆಂತು ಸಾಧ್ಯವಪ್ಪುದು ಹೇಳೆನ್ನತಂದೆ "

( ಬಸವಣ್ಣನವರು )

" ನಮ್ಮ ಕೂಡಲ ಚನ್ನಸಂಗಯ್ಯನೆಂಬ ಮಹಾದಾನಿ, ಲಿಂಗದ ಇಚ್ಛಾವಾಸಿಯಾಗಿರ್ಪುದು ಆ ಮಹಾಲಿಂಗದಲುದ್ಭವಿಸಿದ ದಿವ್ಯಜ್ಞಾನಿಗಳಿಗಲ್ಲದೆ ಇತರರ್ಗೆ ಸಾಧ್ಯವೇ ?

( ಚನ್ನಬಸವಣ್ಣ )

ಈ ವಚನಗಳಲ್ಲದೆ ಸುಪ್ರಭೋದಾಗಮ, ಸ್ವಯಂಭೂವಾಗಮ, ವೀರಲೈಂಗೋಪನಿಷತ್ ಮೊದಲಾದ ಪ್ರಾಚೀನ ಗ್ರಂಥಗಳೂ ಪಂಚಾಚಾರ್ಯರು ಲಿಂಗೋದ್ಭವರೆಂದು ಸಾರಿಹೇಳುತ್ತವೆ. ಜಗತ್ತೆಲ್ಲವೂ ಲಿಂಗಮಯ, ಶಿವನ ಚೈತನ್ಯ. ಲಿಂಗದಲ್ಲಿ ತುಂಬಿಕೊಂಡಿದೆ ಎಂದು ಶಿವಾಗಮಗಳೂ ಶರಣರ ವಚನಗಳು ಉದ್ಘೋಷಿಸುತ್ತವೆ. ಇಂತಹ ಚೈತನ್ಯಮಯವಾದ ಲಿಂಗಗಳಿಂದ ಚೇತನರಾದ ಶಿವಸ್ವರೂಪಿ ಈ ಐವರು ಆಚಾರ್ಯರು ಲಿಂಗದಿಂದ ಅವತರಿಸಿದ್ದು ಆಶ್ಚರ್ಯವೇನಲ್ಲ.

## ಶ್ರೀ ಜಗದ್ಗುರು ಪಂಚಾಚಾರ್ಯರು ಉದ್ಭವಿಸಿದ ಐದು ಲಿಂಗಗಳು :—

ಚತುರ್ಯುಗಗಳಲ್ಲಿಯೂ ಶ್ರೀ ಜಗದಾಚಾರ್ಯರು ಲಿಂಗೋದ್ಭವರಾಗಿಯೇ ಅವತರಿಸಿದರು. ಇವರಲ್ಲಿ ಶ್ರೀ ಜಗದ್ಗುರು ರೇವಣಾರಾಧ್ಯರು ಕೊಲನುಪಾಕಿ ಸೋಮೇಶ್ವರ ಲಿಂಗದಿಂದಲೂ, ಶ್ರೀ ಜಗದ್ಗುರು ಮರುಳಾರಾಧ್ಯರು ವಟಕ್ಷೇತ್ರ ಸಿದ್ಧೇಶ್ವರ ಲಿಂಗದಿಂದ, ಶ್ರೀ ಜಗದ್ಗುರು ಪಂಡಿತಾರಾಧ್ಯರು ಶ್ರೀಶೈಲ ಮಲ್ಲಿಕಾರ್ಜುನ ಲಿಂಗದಿಂದ, ಶ್ರೀ ಜಗದ್ಗುರು ವಿಶ್ವಾರಾಧ್ಯರು ಕಾಶೀ ವಿಶ್ವೇಶ್ವರಲಿಂಗದಿಂದ, ಶ್ರೀ ಜಗದ್ಗುರು ಏಕೋರಾಮಾರಾಧ್ಯರು ಕೇದಾರ ರಾಮನಾಥ ಲಿಂಗದಲ್ಲಿ ಉದ್ಭವಿಸಿದ್ದಲ್ಲದೆ ಆಯಾಯ ಲಿಂಗದಲ್ಲಿಯೇ ಅಡಗಿದರು.

## ಪಂಚತತ್ವ ಹಾಗೂ ಪಂಚಪೀಠಗಳು.

ಭೂಮಿ, ಜಲ, ಅಗ್ನಿ, ವಾಯು, ಆಕಾಶ ಈ ಪಂಚತತ್ವಗಳಿಂದಲೇ ಮಾನವನನ್ನು ಈಶ್ವರನು ನಿರ್ಮಿಸಿದನು. ಮಾನವರ ಉದ್ಧಾರಕ್ಕಾಗಿ ಶ್ರೀ ಪಂಚಾಚಾರ್ಯರಿಗೆ ಪಂಚತತ್ವಗಳೇ ಪಂಚಪೀಠಗಳಾಗಿ ಪರಿಣಮಿಸಿದವು. ಈ ತತ್ವಗಳಲ್ಲಿ ಪೃಥ್ವೀತತ್ವವೇ ರಂಭಾಪುರಿ ಪೀಠವಾಗಿಯೂ, ಜಲತತ್ವವೇ ಉಜ್ಜಯನೀ ಸದ್ಧರ್ಮ ಪೀಠವಾಗಿಯೂ, ಅಗ್ನಿತತ್ವವೇ ಶ್ರೀಶೈಲ ಸೂರ್ಯಪೀಠವಾಗಿಯೂ, ವಾಯುತತ್ವವೇ ಕಾಶೀ ಜ್ಞಾನಪೀಠವಾಗಿಯೂ, ಆಕಾಶತತ್ವವೇ ಕೇದಾರ ವೈರಾಗ್ಯಪೀಠವಾಗಿಯೂ ಪರಿಣಮಿಸಿದೆ. ಆದುದರಿಂದ ಈ ಐದು ತತ್ವಗಳು ಪೀಠಾಚಾರ್ಯರಿಗೆ ಪಂಚಪೀಠಗಳೆನಿಸಿ ಇಂದಿನವರೆಗೂ ಐದು ಭಾಗದಲ್ಲಿ ಶೋಭಿಸುತ್ತಿವೆ. ಇವುಗಳಲ್ಲಿ ವೀರಪೀಠವು ರಂಭಾಪುರಿ

ಕ್ಷೇತ್ರದಲ್ಲೂ, ಸದ್ಧರ್ಮಪೀಠವು ಉಜ್ಜಯನೀಕ್ಷೇತ್ರದಲ್ಲೂ, ಸೂರ್ಯ ಸಿಂಹಾಸನ ಪೀಠವು ಶ್ರೀಶೈಲ ಕ್ಷೇತ್ರದಲ್ಲೂ, ಜ್ಞಾನಪೀಠವು ಕಾಶೀಕ್ಷೇತ್ರದಲ್ಲೂ ವೈರಾಗ್ಯಪೀಠವು ಕೇದಾರ ಕ್ಷೇತ್ರದಲ್ಲಿಯೂ ವಿರಾಜಮಾನಗಳಾಗಿವೆ.

ಐದು ಬಗೆಯ ವರ್ತನೆ :— ಶ್ರೀ ಜಗದ್ಗುರು ಪಂಚಾಚಾರ್ಯರು ಇಹಪರದಲ್ಲಿ ಮನುಷ್ಯನಿಗೆ ಸುಖ ಶಾಂತಿ ಕೊಡುವ ಐದುಬಗೆಯ ವರ್ತನೆಯನ್ನು ಅನುಗ್ರಹಿಸಿರುವರು. ಮಾನವನು ಈ ಐದು ಬಗೆಯ ವರ್ತನೆಗಳಿಂದಲೇ ತನ್ನ ಕಲ್ಯಾಣವನ್ನು ಸಾಧಿಸುತ್ತಾ ಬಂದಿರುವನು. ವೀರವೃತ್ತಿ, ಧಾರ್ಮಿಕ ವರ್ತನೆ, ಸಮದೃಷ್ಟಿ, ವಿವೇಚನೆ, ವೈರಾಗ್ಯ ಇವೇ ಈ ಐದುಬಗೆಯ ವರ್ತನೆಗಳು. ಇವು ಪೀಠಾಚಾರ್ಯರಿಂದ ದೊರೆಯುವ ದಿವ್ಯಪ್ರಸಾದಗಳೂ ಮತ್ತು ಮುಕ್ತಿ ಪಡೆಯುವ ಸಾಧನೆಗಳು.

ಸದ್ವರ್ತನೆಗೆ ವೀರವೃತ್ತಿಬೇಕು. ಆ ವೀರವೃತ್ತಿಯನ್ನು ರಂಭಾಪುರಿ ವೀರಪೀಠಾಧಿಪತಿಗಳಾದ ಶ್ರೀ ಜಗದ್ಗುರು ರೇಣುಕಾಚಾರ್ಯರಿಂದಲೂ ಆ ಸದ್ವರ್ತನೆ ನೆಲೆಗೊಳ್ಳಬೇಕಾದರೆ ಧರ್ಮವೃತ್ತಿಬೇಕು ಆ ಧಾರ್ಮಿಕ ವರ್ತನೆಯನ್ನು ಉಜ್ಜಯನೀ ಸದ್ಧರ್ಮ ಪೀಠಾಧಿಪತಿಗಳಾದ ಶ್ರೀ ಜಗದ್ಗುರು ಮರುಳಾರಾಧ್ಯರಿಂದಲೂ, ಇವೆರಡರ ಬಲದಿಂದ ಯಾವ ಭೇದಭಾವವಿಲ್ಲದೇ ಮಾನವನ ಕಲ್ಯಾಣಕ್ಕಾಗಿ ಸೂರ್ಯನಂತಹ ಸಮದೃಷ್ಟಿ ಬೇಕು. ಈ ಸಮದೃಷ್ಟಿಯನ್ನು ಶ್ರೀಶೈಲ ಸೂರ್ಯಸಿಂಹಾಸನಾಧಿಪತಿಗಳಾದ ಶ್ರೀ ಜಗದ್ಗುರು ಪಂಡಿತಾರಾಧ್ಯರಿಂದಲೂ ಈ ಮೂವರ ಬಲದಿಂದ ಪಾಪ, ಪುಣ್ಯ, ನ್ಯಾಯನ್ಯಾಯ ಯುಕ್ತಾಯುಕ್ತ ವಿವೇಚನೆಯುಳ್ಳವನಾಗಬೇಕು. ಈ ಜ್ಞಾನವನ್ನು ಜ್ಞಾನ ಪೀಠಾಧಿಪತಿಗಳಾದ ಜಗದ್ಗುರು ವಿಶ್ವಾರಾಧ್ಯರಿಂದಲೂ ಈ ನಾಲ್ಕರ ಬಲದಿಂದ ಕ್ಷಣಿಕ ಸುಖಭೋಗಕ್ಕೆ ಮಾರು ಹೋಗದೆ ಆತ್ಮಜ್ಞಾನದಿಂದ ಜಗತ್ತನ್ನು ಶಿವಮಯವಾದುದೆಂದು ತಿಳಿದು ಪರವಸ್ತುವಿನ ಕಡೆಗೆ ಏಕಾಗ್ರತೆಯಿಂದ ಮನಸ್ಸು ಹರಿಸಲು ವೈರಾಗ್ಯವೃತ್ತಿಯನ್ನು ಕೇದಾರ ವೈರಾಗ್ಯ ಸಿಂಹಾಸನಾಪೀಠಾಧಿಪತಿಗಳಾದ ಶ್ರೀ ಜಗದ್ಗುರು ಏಕೋರಾಮಾರಾಧ್ಯರಿಂದಲೂ ಪಡೆಯಬೇಕಾಗಿದೆ. ಈ ಐದು ಬಗೆಯ ವರ್ತನೆಗಳು ನಮ್ಮಲ್ಲಿ ಸದಾಕಾಲವು ಸ್ಥಿರವಾಗಿ ನೆಲೆಸಲೆಂಬ ಸದಾಶಯದಿಂದಲೇ ಪಂಚಪೀಠಾಧಿಪತಿಗಳನ್ನು ಜಗದ್ಗುರುಗಳೆಂದು ನಾವು ಆರಾಧಿಸುತ್ತಾ, ಗೌರವಿಸುತ್ತ, ಬಂದಿದ್ದೇವೆ.

ಸನಾತನ ವೀರಶೈವ ಧರ್ಮ ದರ್ಶನಗಳಲ್ಲಿ ಸಮನ್ವಯತೆ ಪಡೆದು ಮಾನವ ಉದ್ಧಾರಕ್ಕೆ ಮಾರ್ಗವಾಗಿದೆ. ಈ ವೀರಶೈವ ಸಿದ್ಧಾಂತವನ್ನು ಶ್ರೀ ಜಗದ್ಗುರು ಪಂಚಾಚಾರ್ಯರು ಭಾರತ ದೇಶದಲ್ಲಿ ಸಂಸ್ಥಾಪಿಸಿರುವುದು ನಮ್ಮ ಪುಣ್ಯವಿಶೇಷವಾಗಿದೆ.

" ಇತಿ ಶಿವಂ ಭೂಯಾತ್ "



ತಂದೆಗೂ ಗುರುವಿಗೂ ಒಂದು ಅಂತರವುಂಟು
ತಂದೆ ತೋರುವ ಸದ್ಗುರುವ; ಗುರುರಾಯ
ಬಂಧನವ ಕಳೆವ ಸರ್ವಜ್ಞ.

# ವೀರಶೈವ



ಲೇಖಕ :
ಡಾ॥ ಸಿದ್ಧವೀರಶಾಸ್ತ್ರಿ ಸಿದ್ಧರಾಮಸ್ವಾಮಿ
ಹಿರೇಮಠ, ಜೈನಾಪೂರ.
"ಕಾವ್ಯತೀರ್ಥ, ಆಯುರ್ವೇದ ಭಿಷ್ಯಾಚಾರ್ಯ"

ವಿ ಶಬ್ದೇನೋಚ್ಯತೆ ವಿದ್ಯಾ ಶಿವಜೀವೈಕ್ಯಬೋಧಿನೀ
ಚಸ್ಯಾಂ ಯೇ ರಮಂತೆ ವೀರಶೈವಾಃ ಪ್ರಕೀರ್ತಿತಾಃ

ಜಗದ್ಗುರು ರೇಣುಕಾಚಾರ್ಯರು ಅಪ್ಪಣೆ ಕೊಡಿಸಿದಂತೆ ವಿ ಎಂಬ ಅಕ್ಷರದಿಂದ ಶಿವಜೀವರ ಐಕ್ಯವನ್ನು ಬೋಧಿಸುವ ವಿದ್ಯೆ. ಜೀವನಾರು? ಶಿವನಾರು? ಜೀವನಿಗೆ ಮತ್ತು ಶಿವನಿಗೆ ಸಂಬಂಧ-ವೇನು? ಜೀವನಿಗೆ ಪೂರ್ವಕರ್ಮಾದಿಗಳ ಸಂಬಂಧವನ್ನು (ತಪ್ಪಿಸಿ) ಹೋಗಲಾಡಿಸಿ ಶಿವನಲ್ಲಿ ಸಮರಸ (ತಾದಾತ್ಮ್ಯ) ಹೊಂದಿ ಶಿವನಲ್ಲಿಯೇ ರಮಿಸಿ ಆನಂದ ಪಡುವ ಮತಕ್ಕೆ ವೀರಶೈವಮತವೆಂದೆನ್ನುವರು. ಇಂಥ ಈ ವೀರಶೈವ ಮತವನ್ನು ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಪ್ರತಿಯೊಂದು ಯುಗ ಯುಗಗಳಲ್ಲಿ ಸ್ಥಾಪಿಸಿದ ಬಗ್ಗೆ ವೇದಾಗಮೋಪನಿಷತ್ತುಗಳಲ್ಲಿ ಹೇಳಿದ್ದು ಸುಪ್ರಸಿದ್ಧವಷ್ಟೆ.

ವೀರಶೈವ ಎಂಬ ಸಮಾಸದಲ್ಲಿರುವ ಶೈವ ಎಂಬ ಪದಕ್ಕೆ ಶಿವಭಕ್ತಿಯುಳ್ಳವನೆಂದೂ ಆ ದೇವರ ಭಕ್ತಿಯನ್ನೇ ದೃಢವಾಗಿ ನಡೆಯಿಸುವನಾದ್ದರಿಂದಲೂ ಶಿವನಲ್ಲಿ ಕಟ್ಟುನಿಟ್ಟಾದ ವೀರವ್ರತ ನಿಯಮಾದಿಗಳಿಂದ ದೇಹದಂಡನೆಗಳನ್ನು ಮಾಡುವದರಿಂದ ವೀರಶೈವ-ರೆಂದು ಅರ್ಥವು. ಈ ಮತಕ್ಕೆ ಶಕ್ತಿವಿಶಿಷ್ಟಾದ್ವೈತ ಮತವೆಂತಲೂ ಶಿವಾದ್ವೈತ ಮತವೆಂತಲೂ ಬೇರೆ ಪರ್ಯಾಯನಾಮಗಳಿರುತ್ತವೆ. ಇದಕ್ಕೆ ವೇದಾಗಮ-ಗಳೆರಡೂ ಪ್ರಮಾಣವಾಗಿರುವವು. ತತ್ರಾಪಿ ವೇದಗಳಿಗಿಂತಲೂ ಆಗಮಗಳಲ್ಲಿ ಈ ಮತದ ವಿಷಯಗಳು ವಿಸ್ತಾರವಾಗಿ ವಿವರಿಸಿರೋಣದರಿಂದ ಇದು ತಾಂತ್ರಿಕ ವೈದಿಕಮತವೆನಿಸುವದು. ಈ ವೀರಶೈವ ಮತವು ಜೀವನಿಗೂ ಶಿವನಿಗೂ ಕೇವಲ ಭೇದವನ್ನಾಗಲಿ ಕೇವಲ ಅಭೇದವನ್ನಾಗಲಿ ಹೇಳದೇ ಸುವರ್ಣ ಸುವರ್ಣಲಂಕಾರಗಳಿಗೆ ಹೇಗೆ ಭೇದಾಭೇದಗಳೆರಡೂ ಉಂಟೋ ಹಾಗೆ ಭೇದಾಭೇದಗಳೆರಡನ್ನೂ ಪ್ರತಿಪಾದಿಸಿರುವರು. ಇದು ದ್ವೈತಾದ್ವೈತ ಶೃತಿವಾಕ್ಯಗಳಿಗೆ ಸಮನ್ವಯವಾಗಿರುವದರಿಂದ ಸರ್ವಶೃತಿ ಸಮನ್ವಯವೆಂದು ಈ ಮತದ ಭಾಷ್ಯಕಾರರು ಹೇಳಿರುವರು. ಈ ಮತದ ಸಿದ್ಧಾಂತ ಸಾರವೇನಂದರೆ: ರಾಜ್ಯಧಾನಿಗೆ (ರಾಜ್ಯ ರಕ್ಷಿಸಲು) ಕೋಟೆಯ ಗೋಡೆಗಳಿದ್ದಂತೆ ಈ ವೀರಶೈವರಾಜ್ಯಕ್ಕೆ ರಕ್ಷಿಸಲು ಕೋಟೆಯ ಗೋಡೆಗಳೆಂದರೆ "ಅಷ್ಟಾವರಣ" ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ ರಾಜ್ಯದ ಕೋಟೆಯ ಗೋಡೆಗಳು ರಾಜ್ಯವನ್ನಷ್ಟೇ ರಕ್ಷಿಸಬಹುದು. ಆ ವೀರಶೈವರಾಜ್ಯದ ಕೋಟೆಯ ಅಷ್ಟಾವರಣಗಳು ಹಾಗಲ್ಲ, ಅಲ್ಲಿದ್ದ ವೀರಶೈವ ಜನಾಂಗಕ್ಕೆ ಪ್ರತ್ಯಕ್ಷವಾಗಿ ವೀರಶೈವ ನಿಜತತ್ವೋಪದೇಶಾದಿಗಳಿಂದ ಶಿವತತ್ವದ ತಿಳುವಳಿಕೆಯನ್ನುಂಟು ಮಾಡಿ ಪ್ರಬೋಧನೆ ನೀಡಿ ಪ್ರೇರೇಪಿಸಿ ಸಂರಕ್ಷಣ ಮಾಡುವ ಗುರುತರ ಜವಾಬ್ದಾರಿಯನ್ನು ಹೊತ್ತಿರುತ್ತವೆ. ಆಗಮದಲ್ಲಿ ಅಪ್ಪಣೆಕೊಡಿಸಿದ್ದೇನಂದರೆ —

"ಶಿವಸ್ಯತ್ರಯೋ ಭಾಗಾ ಗುರುರ್ಲಿಂಗತು ಜಂಗಮಃ"

ಶಿವನ ಮೂರು ಅಂಶಗಳೇ ಗುರು, ಲಿಂಗ, ಜಂಗಮರು.

ನೆನಹಿಲ್ಲದ ಘನವಸ್ತು ಒಂದೇ. ಅದು ತನ್ನ ನೆನಹು ಮಾತ್ರದಿಂದ ಸಚ್ಚಿದಾನಂದ ನಿತ್ಯಪರಿಪೂರ್ಣನೆನಿಸಿ ಇದೇ ಪಂಚಲಕ್ಷಣಗಳಿಂದ ಲಕ್ಷಿತವಾದ ತನ್ನ ಚಿತ್‌ಶಕ್ತಿಯೊಡನೆ ಜ್ಯೋತಿ ಪ್ರಕಾಶಗಳಂತೆ ಅವಿನಾ-ಭಾವ ರೂಪದಿಂದೊಡಗೂಡಿದ್ದು ಈ ಚೇತನಾಚೇತ-ನಾತ್ಮಕವಾದ ಜಗತ್ಸೃಷ್ಟಿಗೆ ಕಾರಣವಾಗಿರುವದು. ಈ ಶಕ್ತಿವಿಶಿಷ್ಟಾದ್ವೈತ ವಸ್ತುವೇ ಬ್ರಹ್ಮಶಿವಲಿಂಗಗಳೆಂಬ

ಪರ್ಯಾಯ (ಬೇರೆ ಬೇರೆ) ನಾಮವುಳ್ಳದ್ದಾಗಿರುವದು. ಇನ್ನು ಈ ಪರಶಿವನಲ್ಲಿ ಜಗತ್‌ಸೃಷ್ಟಿಯ ಇಚ್ಛೆಯಾಗಲು ಆವನ ಶಕ್ತಿಯಲ್ಲಿದ್ದ ಸತ್ವ ರಜ ತಮೋಗುಣಗಳು ವ್ಯಕ್ತ (ಪ್ರಕಟ) ಸ್ಥಿತಿಯನ್ನುಹೊಂದಿದವು. ಬಳಿಕ ಶಕ್ತಿಯಗುಣಗಳಲ್ಲಿ ಸತ್ವಗುಣದಿಂದ ವೈರಾಗ್ಯಮಯವಾದ ಶಾಂತವೃತ್ತಿ, ರಜೋಗುಣದಿಂದ ರಾಗಮಯವಾದ ಘೋರವೃತ್ತಿ, ತಮೋಗುಣದಿಂದ ಅಜ್ಞಾನಮಯವಾದ ಮೂಢವೃತ್ತಿಗಳೆಂಬ ಶಕ್ತಿಯ ವೃತ್ತಿತ್ರಯಗಳುಂಟಾದವು. ಈ ವೃತ್ತಿತ್ರಯಗಳಿಂದ ಆ ಶಕ್ತಿಯೇ ಕ್ರಮದಿಂದ ಮಾಯೆ, ಅವಿದ್ಯೆ, ಪ್ರಕೃತಿಗಳೆಂದೆನಿಸಿತು. ಬಳಿಕ ಆ ಮಾಯಾವೃತ್ತಿಯಲ್ಲಿ ಪ್ರತಿಫಲಿಸಿದ ಬ್ರಹ್ಮಚೈತನ್ಯವೇ ಈಶ. ಅಂದರೆ ಪತಿಪದಾರ್ಥವೆಂದೂ ಅವಿದ್ಯಾವೃತ್ತಿಯಲ್ಲಿ ಪ್ರತಿಫಲಿಸಿದ ಆದೇ ಬ್ರಹ್ಮಚೈತನ್ಯವೇ ಜೀವ ಅಂದರೆ ಪಶುಪದಾರ್ಥವೆಂದೂ ಪ್ರಕೃತಿವೃತ್ತಿಯಲ್ಲಿ ಪ್ರತಿಫಲಿಸಿದಾಚೈತನ್ಯವೇ ಜಗತ್ತು, ಅಂದರೆ ಪಾಶಪದಾರ್ಥವೆಂದೂ ಎನಿಸಿತು. ಇವುಗಳಲ್ಲಿ ಸಾತ್ವಿಕೋಪಾಧಿಯುಳ್ಳ ಈಶನು ಪ್ರೇರಕನಾದನು. ರಾಜಸೋಪಾಧಿಯುಳ್ಳ ಜೀವರು ಪ್ರೇರ್ಯರಾದರು. ಈ ಜೀವರಿಗೆ ತಾಮಸೋಪಾಧಿಯುಳ್ಳ ಜಗತ್ತು ಭೋಗ್ಯವಸ್ತುವಾಯಿತು. ಆ ಭೋಗ್ಯವಸ್ತುವಿನ ಭೋಗಾಶಕ್ತಿಯುಳ್ಳ ಜೀವರು ಬದ್ಧರಾದರು.

ಆ ಬದ್ಧಜೀವಿಗಳ ಭವ ನಿವೃತ್ತಿಗಾಗಿ ಆ ಪರಶಿವನಲ್ಲಿ ಮನಃಸೃಷ್ಟಿಯ ಇಚ್ಛೆಯುಂಟಾಗಲು ಆ ಪರಶಿವನಲ್ಲಿದ್ದ ಚಿತ್‌ಶಕ್ತಿಯು ಯೋಗದಿಂದ ಒಂದು ಶಕ್ತಿಯೂ ಇನ್ನೊಂದು ಭಕ್ತಿಯೂ ಉದಯಿಸಿದವು. ಈ ಶಕ್ತಿಯು ಲಿಂಗಕ್ಕೂ, ಭಕ್ತಿಯು ಅಂಗಕ್ಕೂ ಕಾರಣವೆನಿಸಿದವು. ಅದು ಹೇಗೆಂದರೆ ಶಿವಧರ್ಮಾಚರಣೆಯಿಂದ ಪಾಪಕ್ಷಯವಾಗಲಾಗಿ ನಿರ್ಮಲಾಂತಃಕರಣೆಯಾದ ಜೀವನು ಭಕ್ತಿಯನ್ನಾಶ್ರಯಿಸಿ ಅಂಗನೆನಿಸಿದನು. ಶಿವಸ್ವರೂಪಿಯಾದ ಗುರುವು ಈ ಅಂಗನಾದ ಮುಮುಕ್ಷುವಿನ ದೃಷ್ಟಿಯಲ್ಲಿ ದೃಷ್ಟಿಯನ್ನು, ಮನದಲ್ಲಿ ಮನಸ್ಸನ್ನೂ ಭಾವದಲ್ಲಿ ಭಾವವನ್ನೂ ಇರಿಸಿ ಆತನ ಶಿಖಾಚಕ್ರದಲ್ಲಿದ್ದ ಶಿವನ ಕಲೆಯನ್ನೇ ತನ್ನ ಶಕ್ತಿಪ್ರಭಾವದಿಂದ ಬಹಿಷ್ಕರಿಸಿ ಶಿಷ್ಯನ ಉದ್ಧಾರಾರ್ಥವಾಗಿ ಗುರುವು ಆಣವ ಮಾಯಾ ಕಾರ್ಮಿಕ ಮಲಗಳಿಂದುಂಟಾದ ಪಾತಗಳನ್ನು ವೇದ ಕ್ರಿಯಾ ಮಂತ್ರ ಎಂಬ ಮೂರು ದೀಕ್ಷೆಗಳಿಂದ (ಮೋಕ್ಷಾಪೇಕ್ಷಿ) ಮುಮುಕ್ಷು ಶಿಷ್ಯನನ್ನು ಪರಿಶುದ್ಧಗೊಳಿಸಿ ಗೌಪ್ಯವಾಗಿ ಪಂಚಾಕ್ಷರಿ ಮಹಾಮಂತ್ರೋಪದೇಶ ಮಾಡಿ ಶಿಷ್ಯನ ಕರಕಮಲದಲ್ಲಿ ಲಿಂಗವನ್ನು ಕೊಡುತ್ತಾನೆ. ಹೀಗೆ ಶುದ್ಧಾಂತಃಕರಣನಾದ ಭಕ್ತನು ಗುರುಶಕ್ತಿ ಪ್ರಭಾವದಿಂದುಂಟಾದ ಆ ಲಿಂಗವನ್ನು ಪಡೆದು ಭಸ್ಮ ರುದ್ರಾಕ್ಷ, ಮಂತ್ರ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ. ಅಷ್ಟಾವರಣಗಳೇ ಶರೀರವಾಗಿ ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ, ಗಣಾಚಾರಗಳೆಂಬ ಪಂಚ ಆಚಾರಗಳೇ ಪ್ರಾಣಗ(ಳಾಗಿ) ವಾಗಿ ಮುಕ್ತಿಸೋಪಾನಗಳೆನಿಸಿದ ಷಟಸ್ಥಲ ಮಾರ್ಗಗಳಿಂದ ಆಚರಿಸಿ ತನ್ನ ಇಷ್ಟಲಿಂಗದಲ್ಲಿ ವ್ಯಕ್ತವಾಗಿದ್ದ ಮಹಾಲಿಂಗವನ್ನು ವ್ಯಕ್ತಗೊಳಿಸುವನು. ಮಾಡಿಕೊಳ್ಳುವನು ಆ ಕ್ರಮ ಎಂತೆಂದರೆ :—
ಭಕ್ತಸ್ಥಲದಲ್ಲಿ ಶ್ರದ್ಧಾಭಕ್ತಿಯಿಂದ ಕ್ರಿಯಾಸಮೇತವಾದ ಆಚಾರಲಿಂಗವನ್ನು ಅರ್ಚಿಸಿ, ಸದ್ಭಕ್ತಿಯನ್ನು ಮಾಹೇಶ್ವರ ಸ್ಥಲದಲ್ಲಿ ನಿಷ್ಠಾ ಭಕ್ತಿಯಿಂದ ಜ್ಞಾನಶಕ್ತಿ ಸಮೇತನಾಗಿ ಗುರುಲಿಂಗವನ್ನು ಪೂಜಿಸಿ ಕರ್ಮಕ್ಷಯವನ್ನೂ ಪ್ರಸಾದಿ ಸ್ಥಲದಲ್ಲಿ ಅವಧಾನ ಭಕ್ತಿಯಿಂದ ಇಚ್ಛಾಶಕ್ತಿ ಸಮೇತ ಲಿಂಗವನ್ನು ಪೂಜಿಸಿ ಯಜಸಿ ನಿರ್ಮಲಮತಿಯನ್ನೂ ಪ್ರಾಣಲಿಂಗಸ್ಥಲದಲ್ಲಿ ಅನುಭವ ಭಕ್ತಿಯಿಂದ ಆದಿಶಕ್ತಿ ಸಮೇತ ಲಿಂಗವನ್ನು ಜಂಗಮ ಲಿಂಗವನ್ನು ಆರಾಧಿಸಿ ಸುವಿಚಾರವನ್ನು ಶರಣಸ್ಥಲದಲ್ಲಿ ಆನಂದ ಭಕ್ತಿಯಿಂದ ಪರಾಶಕ್ತಿ ಸಮೇತ ಪ್ರಸಾದ ಲಿಂಗವನ್ನು ಸೇವಿಸಿ ದರ್ಪಸಂಕ್ಷಯವನ್ನೂ (ಅಹಂಕಾರ

ದೂರೀಕರಿಸುವಿಕೆ, ಐಕ್ಯಸ್ಥಲದಲ್ಲಿ ಸಮರಸ ಭಕ್ತಿಯಿಂದ ಚಿಚ್ಛಕ್ತಿ ಸಮೇತ (ಸಮವೇತ) ಮಹಾಲಿಂಗವನ್ನು ಭಜಿಸಿ ಸಮ್ಯಕ್ ಜ್ಞಾನವನ್ನು ಪಡೆದು, ಅವಿರಳ ಶಿವೈಕ್ಯನಾಗುವನು. ಇದುವೇ ಲಿಂಗಾಂಗ ಸಾಮರಸ್ಯವು ಇದೇ ತತ್ವಮಸಿ ಮಹಾಕಾವ್ಯದ ಅರ್ಥವು. ಇದಕ್ಕೇನೇ ವೀರಶೈವರು "ಷಟಸ್ಥಲ ಸಿದ್ಧಾಂತ" ವೆನ್ನುವರು.

ಈ ಷಟಸ್ಥಲದ ಆಚರಣೆಯನ್ನು ಯೋಗದ ಯಮಾದಿ ಅಷ್ಟಾಂಗಗಳಲ್ಲಿ ಉತ್ತರಭಾಗವೆನಿಸಿದ ಧಾರಣ, ಧ್ಯಾನ, ಸಮಾಧಿಗಳೆಂಬ ಮೂರು ಅಂಗಗಳಲ್ಲಿಯೇ ಮುಖ್ಯವಾಗಿ ಸಂಬಂಧಿಸಿ ಶಿವಭಕ್ತಿಪೂರ್ವಕವಾಗಿ ಆಚರಿಸುವದರಿಂದ ಇದುವೇ ಶಾಂಭವಯೋಗವೆಂದೆನಿಸುವದು.

ವೀರಶೈವನು ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯಗಳೆಂಬ ಷಡರ್ಥಗಳನ್ನು ಸತತ ಸಂಗ್ರಹಿಸತಕ್ಕದ್ದು. ಗುರುವಿನಿಂದ ಪ್ರಾಪ್ತವಾದ ಲಿಂಗಾಂಗ ಸಾಮರಸ್ಯದ ಅರಿವೇ ಜ್ಞಾನ, ಪತಿ, ಪಶು ಪಾತಗಳೆಂಬ ತ್ರಿಪದಾರ್ಥಗಳೇ ಜ್ಞೇಯ. ಈ ವೀರಶೈವ ಮತಕ್ಕೆ ಆದಿ ದೈವತೆಗಳಾದ ಗುರು, ಲಿಂಗ, ಜಂಗಮರನ್ನು ಅನನ್ಯಭಾವದಿಂದ ಅರ್ಚಿಸುವದೇ ಅನುಷ್ಠೇಯ. ಭಸ್ಮ ರುದ್ರಾಕ್ಷಾದಿಗಳಿಂದ ಅಧಿಕೃತನಾಗಿರುವದೇ ಅಧಿಕಾರ. ಶಿವಪಂಚಾಕ್ಷರಿ ಮಂತ್ರವೇ ಸಾಧನ. ಶಿವಸ್ವರೂಪವೇ ಸಾಧ್ಯ. ಷಟಸ್ಥಲಾಚರಣೆಗೆ ಈ ಆರು ಅರ್ಥಗಳ ಸಂಗ್ರಹವಾದರೂ ಅತ್ಯವಶ್ಯವಾಗಿರುವದು.

ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮ ಈ ಆರು ತತ್ವಗಳನ್ನುದ್ದೇಶಿಸಿ ಆರು ಸ್ಥಲಗಳೂ. ಈ ಆರು ಸ್ಥಲಗಳ ವಿಭಜನೆಯಿಂದ ಪೃಥ್ವ್ಯಾದಿ ಮೂವತ್ತಾರು ಶಿವಾಂತವಾದ (೩೬) ತತ್ವಗಳೂ ಈ ಮತದಲ್ಲಿ ಹೇಳಲ್ಪಟ್ಟಿವೆ. ವೇದದಲ್ಲಿ ಕರ್ಮ, ಜ್ಞಾನ ಭಕ್ತಿಗಳೆಂಬ ಮೂರು ಕಾಂಡಗಳಿರುತ್ತವೆ. ಅವುಗಳಲ್ಲಿ ಶ್ರೇಷ್ಠವೆನಿಸಿರುವ ಕ್ರಿಯಾ ಜ್ಞಾನ ಸಮುಚ್ಚಯವಾದ ಭಕ್ತಿಕಾಂಡವನ್ನೇ ಮುಖ್ಯವಾಗಿ ವೀರಶೈವರು ಆಚರಿಸುವರು. ಆಕಸ್ಮಾತಾಗಿ ಆವರಿಸಿದ ಬೆಂಕಿಯಿಂದ ಪಾರಾಗಬೇಕಾದ ಮನುಷ್ಯನಿಗೆ ಕಣ್ಣು ಕಾಲುಗಳೆರಡರ ಅವಶ್ಯಕತೆ ಇದ್ದಂತೆ ಮೋಕ್ಷಪ್ರಾಪ್ತಿಗೆ ಕರ್ಮ ಜ್ಞಾನಗಳೆರಡರ ಸಮುಚ್ಚಯವು ಅವಶ್ಯವಾಗಿರುತ್ತವೆ. ವೀರಶೈವನು ಜನ್ಮದಾರಭ್ಯ ಐಕ್ಯವಾಗುವವರೆಗೆ (ಆಮರಣ) ಪ್ರಾಣಸದೃಶವಾಗಿರುವದೂ ಸ್ವಸ್ವರೂಪಜ್ಞಾ (ಶಿವೋ-ಹಂ) ಉಪದಿಷ್ಟವಾದ ಲಿಂಗವನ್ನು ಎಡಬಿಡದೆ ಸತತ ಧರಿಸುವನು. ಈ ಶರಣನು ವೀರಶೈವನು. ತನ್ನ ಸತ್ಕಾರ್ಯದಿಂದ ಬಂದ ಅರ್ಪಣ ಯೋಗ್ಯವಾದ ಪದಾರ್ಥವನ್ನು ಲಿಂಗಕ್ಕೆ ಅರ್ಪಿಸಿ ಆ ಪದಾರ್ಥವನ್ನು ತಾನು (ಭುಂಜಿಸಬೇಕು) ಭುಂಜಿಸುವದೇ ಲಿಂಗ ಭೋಗೋಪಭೋಗಿಯೆನಿಸುವನು. ಮಂತ್ರ, ಹಠ, ಲಯ, ರಾಜಗಳೆಂಬ ನಾಲ್ಕು ಯೋಗಗಳನ್ನೊಗೊಂಡ ಮತ್ತು ಅರಿವು, ಅನುಸಂಧಾನ, ಅರ್ಚನೆ, ಭಕ್ತಿ, ವ್ರತಗಳೆಂದೆನಿಪ ಐದು ಅಂಗಗಳಿಂದ ಕೂಡಿದ ಶಿವಯೋಗದಲ್ಲಿ ನಿರತನಾದ ವೀರಶೈವನು ಚತುರ್ವಿಧ ಮುಕ್ತಿಗಳನ್ನು ಮೀರಿ ಸ್ವಸ್ವರೂಪಾವಿರ್ಭಾವ ಶಿವಾನಂದ ಸಮರಸವೆಂಬ ಪಂಚಮಪದವೆನಿಸಿದ ಕೈವಲ್ಯ ಮುಕ್ತಿಯನ್ನು ಹೊಂದುವನು. "ಏಕೇನ ಜನ್ಮನಾ ಮುಕ್ತಿಃ ವೀರಾಣಾಂತು ಮಹೇಶ್ವರಿ" ಎಂಬ ಆಗಮೋಕ್ತಿಯಂತೆ ವೀರಶೈವರಿಗೆ ಒಂದೇಜನ್ಮದಿಂದ ಮುಕ್ತಿಯು ಲಭಿಸುತ್ತದೆ.

ಮಾನವಧರ್ಮಕ್ಕೆ ಜಯವಾಗಲಿ ।

ಸರ್ವೇಜನಾಃ ಸುಖಿನೋಭವಂತು !!

*********

# ಶಾಂತಾಶ್ರಮದ ಸದ್ಗುರು —

ಲೇಖಕರು : "ವ್ಯಾಖ್ಯಾನವಾಚಸ್ಪತಿ" ಪಿ. ಆಯ್. ಪಟೇಲ, B. A., B. Ed. ಹಿರೇಜೇವರಗಿ.

ಪರಮ ತೇಜೋಮೂರ್ತಿಗಳಾದ, ಭೀಷ್ಮ-ಬ್ರಹ್ಮಚಾರಿಗಳಾದ, ಪರಮ ತಪೋಧನರಾದ, ಸಿದ್ಧ ಪುರುಷರಾದ, ಕಾರಣಿಕ ವ್ಯಕ್ತಿಗಳಾದ, ಹಿರೇಜೇವ-ರಗಿಯ 'ಬಾಲಶಿವಯೋಗಿ' ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯರನ್ನು ಯಾರು ಗೌರವದಿಂದ ಕಂಡಿಲ್ಲ? ಪಂಚಜಗದ್ಗುರುಗಳಿಗೆ ಪಂಚಪ್ರಾಣ, ಗುರುವರ್ಗಕ್ಕೆ ಪಿತಾಮಹ ವ್ಯಕ್ತಿ, ಸಕಲಜೀವಿಗಳಿಗೂ ಬೇಕಾದ ಮಹಿಮಾಪುಂಗವರು. ಅವರು ತಮ್ಮ ಇಡೀಜೀವ-ಮಾನದಲ್ಲಿ ಸಾಧಿಸಿದ್ದು "ಸಕಲ ಜೀವಾತ್ಮರಿಗೆ ಲೇಸನೇ ಬಯಸು" ಎಂಬ ಶರಣವಾಣಿ. ಎಲ್ಲರಿಗೂ ಎಲ್ಲ ಕಾಲ-ದಲ್ಲಿಯೂ ಚಿಂತಿಸುವ ಕರುಣಾಮೂರ್ತಿ.

ಶ್ರೀಗಳು ಸಿದ್ಧಪುರುಷರು. ಅವರು ಆಡಿದ್ದು ಆಗುತ್ತದೆ. ಅವರು ಶಾಂತಸ್ವಭಾವದವರು. ಸದಾಕಾಲ ಶಿವಪೂಜಾ ಲೋಲರು. ಬಾಲರಲ್ಲಿ ಬಾಲರಾಗಿ, ಮತಿವಂತರಲ್ಲಿ ಮೇಧಾವಿಗಳಾಗಿ, ಯತಿಗಳಲ್ಲಿ ಶ್ರೇಷ್ಠರಾಗಿ, ಶಕ್ತಿ ಸಂಪನ್ನರಾಗಿ ಲೋಕಮಧ್ಯದಲ್ಲಿ ವಿರಾಜಮಾನರಾಗಿ-ರುವರು ಇಂತಹ ಪುಣ್ಯಪುರುಷನಿಗೀಗ ಎಂಬತ್ತು ದಾಟಿದ ಪ್ರಯುಕ್ತ ನಾಡಿನ ಹಲವು ಜನರು 'ಋಷಿ ಋಣ' ತೀರಿಸುವ ಉದ್ದೇಶದಿಂದ ಅವರ ಎಂಬತ್ತರ ವರ್ಧಂತಿಯನ್ನು ಅಕ್ಕಲಕೋಟದಲ್ಲಿ ಆಚರಿಸಲು ನಿರ್ಧರಿಸಿದ್ದು ಸೂಕ್ತ.

ಪೂಜ್ಯ ಗುರುಗಳಿಗೆ ತಮ್ಮ ಜೀವಮಾನದಲ್ಲಿ ಹಲವು ಗಣ್ಯವ್ಯಕ್ತಿಗಳೊಡನೆ ಘನಿಷ್ಠ ಆತ್ಮೀಯ ಸಂಬಂಧ ಒಂದಿರುವುದನ್ನು ನಾವು ಇಲ್ಲಿ ನೆನೆಯ ಬಹುದು. ಆ ವ್ಯಕ್ತಿಗಳೆಂದರೆ ನಾಗನೂರ ಬೃಹನ್ಮಠಾ-ಧ್ಯಕ್ಷರಾದ ಲಿಂ. ಪಂ. ಕಾಶೀನಾಥ ಶಾಸ್ತ್ರಿಗಳವರು ಸಂಪಾದಕರು 'ಪಂಚಾಚಾರ್ಯ ಪ್ರಭಾ' ಮೈಸೂರು. ಹುಟಗಿ ಬೃಹನ್ಮಠಾಧ್ಯಕ್ಷರಾದ 'ವೀರತಪಸ್ವಿ' ಲಿಂ. ಶ್ರೀ. ಷ. ಬ್ರ. ಚನ್ನವೀರ ಶಿವಾಚಾರ್ಯರು ಸಂಸ್ಥಾಪಕ 'ಶ್ರೀಮದ್ವೀರಶೈವ ಗುರುಕುಲ' ಸೊಲ್ಲಾಪುರ. ಮತ್ತು ಲಿಂ. ಶ್ರೀ ಷ. ಬ್ರ. ರಾಚಲಿಂಗ ಶಿವಾಚಾರ್ಯ ಪರಾಂಡಕರ ಸಂಪಾದಕ 'ವೀರಶೈವ ಗರ್ಜನಾ' ಬಾರ್ಶಿ. ಮತ್ತು ಇಂದಿನ ಶ್ರೀಮದ್ರಂಭಾಪುರಿ ಜಗದ್ಗುರುಗಳಾದ 'ಪ್ರಸನ್ನ ರೇಣುಕ' ವೀರಗಂಗಾಧರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ-ವರು ಹಾಗೂ ನಾಡಿನ ಅನೇಕ ಪಟ್ಟಚರಾಧಿಕಾರಿಗಳು. ಪೂಜ್ಯರು ಅಖಿಲ ಭಾರತ ವೀರಶೈವ ಗುರುವರ್ಗ ಸಮ್ಮೇಲನ ಮಾಳಕವತೆಯ ಕಾರ್ಯದರ್ಶಿಗಳಾಗಿಯೂ ಕೆಲಸ ಮಾಡಿದ್ದಾರೆ. 'ಗುರುವರ್ಗ ದರ್ಪಣ' ಎಂಬ ಗ್ರಂಥವೂ ಹೊರಬಿದ್ದಿದೆ.

ಪೂಜ್ಯಪಾದರನ್ನು ಕಂಡಾಗ ಮನಸ್ಸು ಪಾವನ ಗೊಳ್ಳುತ್ತದೆ. ಅವರ ಕರುಣಾಕಟಾಕ್ಷದಿಂದ ಜೀವನ ಧನ್ಯವಾಗುತ್ತದೆ. ಇಂತಹ ಪೂಜ್ಯರು ಲೋಕದಲ್ಲಿ ಕೇವಲ ಬೆರಳಿನ ಮೇಲೆಣಿಸುವಷ್ಟು ಜನರು ಮಾತ್ರ ಲಭ್ಯರಾಗುತ್ತಾರೆ. ಇಂತಹ ಮಹಾ ವಿಭೂತಿಯನ್ನು ಪಡೆದ ನಾವು ಶಿಷ್ಯರೇ ಧನ್ಯರು ! ಕೃತಾರ್ಥರು !!

ಪೂಜ್ಯಪಾದರ ಅಧ್ಯಯನ ಶಕ್ತಿ ಬಹಳ ಆಳವಾ-ದುದು. "ಜಗದ್ಗುರು ಪಂಡಿತಾರಾಧ್ಯ" ಗ್ರಂಥಾಲಯ-ದಲ್ಲಿ ಅವರು ಸಂಗ್ರಹಿಸಿರುವ ಗ್ರಂಥಗಳು ಅವರ ವಿದ್ಯಾಭಿರುಚಿಯನ್ನು ವ್ಯಕ್ತಗೊಳಿಸುತ್ತದೆ. ಬಡವಬಲ್ಲಿದ ಎಂಬ ಭೇದಭಾವವಿಲ್ಲದೆ ಎಲ್ಲರನ್ನೂ ಸಮಾನವಾಗಿ ಕಾಣುವ ಶ್ರೀಗಳವರ ಸಮನ್ವಯ ದೃಷ್ಟಿಗೆ ಎಂತಹ ಪಂಡಿತನೂ ನತಮಸ್ತಕನಾಗಬೇಕು.

ಪೂಜ್ಯಪಾದರು ಪ್ರಗಲ್ಭ ಪಂಡಿತರು. ಅವರು ಓದಿದ್ದು ಸ್ವಲ್ಪೇ ಆದರೂ ಅಧ್ಯಯನ ಮಾಡಿದ್ದು ಬಹಳ. ವೀರಶೈವ ಮತತತ್ವವು ರಕ್ತಗತವಾಗಿಬಿಟ್ಟಿದೆ. ಮಿತಭಾಷಿಗಳು, ಮಿತವ್ಯಯಿಗಳು. ಅವರೊಡನೆ ಸಂಭಾಷಣೆ ಮಾಡುವ ಎದೆಗಾರಿಕೆ ಎಂತಹ ವ್ಯಕ್ತಿಗೂ ಆಗದು. ಅವರ ನಡೆನುಡಿ ಹಿತಮಿತವಾದುದು. ಕರ್ತವ್ಯ ದಕ್ಷರಾದ ಅವರಿಂದ ಪ್ರಾಪಂಚಿಕರು ತಿಳಿದುಕೊಳ್ಳ ಬೇಕಾದುದು ಬಹಳವಿದೆ. ನಮ್ಮ ಗ್ರಾಮದ ಹಿರೇಮಠವು ಹಿಂದೆ ಏನು ಇತ್ತು ಈಗ ಏನಾಗಿದೆ ಎಂಬುವದನ್ನು ಪ್ರತ್ಯಕ್ಷ ನಾವು ನೋಡುತ್ತಿದ್ದೇವೆ.



ಶ್ರೀ ಜಗದ್ಗುರು ಪಂಡಿತಾರಾಧ್ಯ ದೇವಸ್ಥಾನ, ಹಿರೇಜೇವರಗಿ.



ಪರಮ ಪೂಜ್ಯ ಶ್ರೀಗಳವರ ಯೋಗಮಂಟಪ ಹಿರೇಜೇವರಗಿ

(ಲಿಂಗೈಕ್ಯ ಶ್ರೀ. ಶಂಕರಪ್ಪ ಚಾಕೋತೆ ಸೋಲಾಪೂರ ಇವರ ಸ್ಮರಣಾರ್ಥವಾಗಿ)



ಶ್ರೀ. ಸಂಗಪ್ಪ ಮತ್ತು ಶ್ರೀ. ಮಹಾರುದ್ರಪ್ಪ ಚಾಕೋತೆ ಸೋಲಾಪೂರ ಇವರು ಕಟ್ಟಿಸಿದ್ದು.

ತಾ. ೯–೧೧–೧೯೬೧.



ಪರಮ ಗುರುಗಳ ಯೋಗ ಮಂಟಪದ ಒಳಭಾಗದ ದೃಶ್ಯ.



ಹಿರೇಜೇವರಗಿಯ ವಾಡೆತೋಟದಲ್ಲಿ
ಪೂಜ್ಯ ಶ್ರೀಗಳವರು ಮಾಡಿದ ಉಗ್ರಶಿವಾನುಷ್ಠಾನದ ದೃಶ್ಯ.

ಕೃಷಿಕ್ಷೇತ್ರದಲ್ಲಿ ಅವರು ಸಾಧಿಸಿದ ಪ್ರಗತಿ ಅನುಕರಣೀಯವಾಗಿದೆ. ದೇಶದಲ್ಲಿ ಬಂದ ಭೀಕರ ದುರ್ಭಿಕ್ಷ ಕಾಲದಿಂದ ಅವರು ಊರಲ್ಲಿ ಹಿಟ್ಟುಬೇಡುವ ದನ್ನು ನಿಲ್ಲಿಸಿದ್ದಾರೆ. ಅವರು ಶಿಷ್ಯರ ಮನೆಗೆ ಹೋಗ ಬೇಕಾದರೂ ಕೂಡ ಬಹಳ ಆಲೋಚನೆ ಮಾಡುತ್ತಾರೆ. ಅಲ್ಲದೆ ಶಿಷ್ಯರು ತಮಗೆ ಕೊಟ್ಟ ಕಾಣಿಕೆಯನ್ನು ಸಂತೋಷದಿಂದ ಸ್ವೀಕರಿಸುತ್ತಾರೆ. ಎಂದೂ ಯಾರಿಗೂ ಕಾಡಿದವರಲ್ಲ, ಬೇಡಿದವರಲ್ಲ. ಅವರು ಬಹಳ ಕಷ್ಟ ಸಹಿಷ್ಣುಗಳು. ಸಾದಾ ಜೀವಿಗಳು. ಅವರು ನಮ್ಮ ನಾಡಿನ ಋಷಿಪರಂಪರೆಯನ್ನು ಕಾಪಾಡಿದ ಮಹಾ ವಿಭೂತಿಗಳು. ನಮ್ಮ ಮಠದ ಆಸ್ತಿ ಶ್ರೀಗಳೇ ಆಗಿದ್ದು ಅವರ ಕೈಗೆ ಬಂದ ಹಣವು ಭದ್ರವಾಗಿ ಉಳಿದು ಅದು ಮಠದ ಜೀರ್ಣೋದ್ಧಾರಕ್ಕೆ ಕಾರಣವಾಯಿತು. ಅವರು ಅಘಟಿತಘಟನಾ ಸಾಮರ್ಥ್ಯವುಳ್ಳವರು. ಅವ ರನ್ನು ಕಂಡಾಗ ಪ್ರಾಚೀನ ಕಾಲದ ಋಷಿ, ಮುನಿ-ಗಳನ್ನು ಕಂಡಂತಾಗುತ್ತದೆ.

ಪೂಜ್ಯ ಶ್ರೀಗಳು ಇಡೀ ಊರಿನ ಚಿಂತೆ ಮಾಡು ತ್ತಾರೆ. ಊರಿನ ಎಲ್ಲ ಜನರು ಸುಖದಿಂದ ಬಾಳಬೇಕೆಂದು ಅಪೇಕ್ಷಿಸುತ್ತಾರೆ. ಊರಿನ ಯಾವುದೇ ವ್ಯಕ್ತಿಗೆ ಕೇಡು ಆದರೆ ನೊಂದುಕೊಳ್ಳುವರು. ಪ್ರಸಾದ ಬಿಡುವರು. ಆದರೆ ಊರಿನ ಜನರಿಗೆ ಶ್ರೀಗಳ ಚಿಂತೆ ಇರಬೇಡವೆ? ಯಾವ ವ್ಯಕ್ತಿ ತನ್ನ ಇಡೀಜೀವನವನ್ನು ಸಮಾಜದ ಹಿತಕ್ಕಾಗಿ ಸಮರ್ಪಿಸಿದೆ, ಸಮಾಜದ ಏಳಿಗೆಗಾಗಿ ಚಿಂತಿಸುತ್ತಿದೆ, ಅವರಿಗಾಗಿ ಸಮಾಜ ಚಿಂತಿಸಬೇಡವೆ? ಆದರೆ ಕಾಲ ಬಹಳ ಗಂಭೀರವಾಗಿದ್ದು ಜನರು ವಾಮ ಮಾರ್ಗ ಹಿಡಿದುದ್ದರಿಂದ ಈ ಋಷಿಗೆ ಎಲ್ಲಿಲ್ಲದ ಕಷ್ಟ. ತಾನು ಮಠಾಧಿಕಾರಿಯಾದಾಗ್ಯೂ ಕೂಡ ಭಿಕ್ಷಾನ್ನ ವನ್ನು ಭುಂಜಿಸದೆ ದುಡಿದು ಉಣ್ಣುವ ಸ್ವಭಾವವನ್ನು ಹೊಂದಿದ ಈ ಮಹಾನ್ ವಿಭೂತಿ ಪ್ರಾಪಂಚಿಕ ವ್ಯಕ್ತಿಗೆ ಆದರ್ಶನಾಗಿದ್ದಾನೆ. ಯಾರು ಏನೇ ಅಂದರೂ ಕೂಡ ಮೂಕ ವೇದನೆಯಿಂದ ಸಹಿಸಿಕೊಳ್ಳುತ್ತಾನೆ. ಇವರನ್ನು ನಿಂದಿಸಿದ ಯಾವ ವ್ಯಕ್ತಿಗೂ ಸುಖವಾಗಿಲ್ಲ. ಒಬ್ಬನಿಗಂತೂ ಮಹಾರೋಗವಾಯಿತು, ಇನ್ನೊಬ್ಬ-ನಿಗೆ ನಾಲಿಗೆಗೆ ಹುಳಬಿದ್ದು ಮರಣ ಹೊಂದಿದನು. ಮತ್ತೊಬ್ಬನಂತೂ ದಾರಿದ್ರ್ಯದಿಂದ ನರಳಾಡಿದನು. ಮಗದೊಬ್ಬನು ಸಮಾಜದಲ್ಲಿ ತಲೆಎತ್ತಿ ತಿರುಗದಂತೆ ಹೀನ ಸ್ಥಿತಿಗಿಳಿದನು. ಇಂತಹ ಒಂದಲ್ಲ ಸಾವಿರ ಉದಾಹರಣೆಗಳನ್ನು ಕೊಡಬಹುದು.

ಶ್ರೀಗಳವರು ನಮ್ಮ ಗ್ರಾಮದ ಯಾವತ್ತು ಸಾಮಾಜಿಕ, ಶೈಕ್ಷಣಿಕ ಕೆಲಸಗಳಿಗೆ ಚೈತನ್ಯಪುರುಷ ರಾಗಿದ್ದಾರೆ. ನನಗೂ ಮತ್ತು ಶ್ರೀ ಹನುಮಂತರಾವ ದೇಸಾಯಿ ವಕೀಲರಿಗೂ ಪೂಜ್ಯರ ಘನವಾದ ಆಶ್ರಯ ದಲ್ಲಿ ಕೆಲಸಮಾಡುವ ಸೌಭಾಗ್ಯ ಚಿಕ್ಕಂದಿನಿಂದಲೂ ಪ್ರಾಪ್ತವಾಗಿದೆ. ನಮ್ಮ ಗ್ರಾಮದ ಮಿಡ್ಲಸ್ಕೂಲ ಮತ್ತು ಹೈಸ್ಕೂಲ ನಿಧಿಸಂಗ್ರಹಕ್ಕಾಗಿ ನಮ್ಮಿಬ್ಬರನ್ನು ಸುತ್ತುಮುತ್ತಲಿನ ಹಳ್ಳಿಗಳಿಗೆ ಕಳಿಸಿದ್ದುಂಟು. ಆಗ ಶ್ರೀಗಳವರು ತಮ್ಮ ಹತ್ತಿರವಿದ್ದ ಹಣವನ್ನು ನಮಗೆ ಫಲಾಹಾರಕ್ಕಾಗಿ ಕೊಟ್ಟಿದ್ದುಂಟು. ಇವರು ಕರುಣಾ ಸಾಗರರು, ದಯಾಪೂರಿತರು, ಗುರು ಆದವನು ಹೇಗಿರ ಬೇಕು ? ಎಂಬುವದನ್ನು ತಿಳಿಯಬೇಕಾದವರು ಇವರನ್ನು ಕಂಡು ಗುರುತ್ವದ ಮಹತ್ತನ್ನು ತಿಳಿದು ಕೊಳ್ಳಬೇಕು. ಇಂತಹ ಗುರುಪುಂಗವರಿಂದಲೇನೇ ವೀರಶೈವತ್ವ ಉಳಿಯಬೇಕು, ಬೆಳೆಯಬೇಕು. ಇವರು ಸ್ತುತಿಗೆ ಮೆಚ್ಚುವವರಲ್ಲ. ಪರನಿಂದೆಯನ್ನು ಮಾಡು-ವವರಲ್ಲ. ಸತ್ಯವಾದುದನ್ನು ನುಡಿಯಲು ಹೆದರುವವ ರಲ್ಲ. ಡಂಭಕರನು, ಜೂಜುಗಾರರನು, ಕುಡುಕರನು ಸ್ತ್ರೀಲಂಪಟರನು, ದೇಶದ್ರೋಹಿಗಳನು, ಸಮಾಜ-ವಿಘಾತಕರನು, ಮನೆಮುರುಕ ವ್ಯಕ್ತಿಗಳನು ನಂಬು-ವವರಲ್ಲ. ಅವರನ್ನು ದಾರಿಗೆ ತರಲು ಮಹಾತ್ಮಾ ಗಾಂಧಿಯವರಂತೆ ತಾವೂ ಕೂಡ ಉಪವಾಸ ಮಾಡಿ ದ್ದುಂಟು. ಅದರ ಪರಿಣಾಮ ಒಳಿತಾಗಿದ್ದುಂಟು. ಇಂತಹ ವಿಭೂತಿಪುರುಷ ಇಂದಿನ ಅಧರ್ಮಯುಗದಲ್ಲಿ ಚಿರಕಾಲ ಬಾಳಿದರೆ ಧರ್ಮವು ಉಳಿಯುವದು. ಅದ ಕ್ಕಾಗಿ ಈ ಋಷಿಪುಂಗವನಿಗೆ ಚಿರಕಾಲ ಬಾಳುವ ಆಯುಸ್ಸು ದೊರೆಯಲಿ.



# ಶ್ರೀ ಸಿದ್ಧಾಂತ ಶಿಖಾಮಣಿ

ಲೇಖಕರು : ಶ್ರೀ ಷ. ಬ್ರ. ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳು ಮರಬ
ಯೋಗಾಶ್ರಮ, ಗುಡೂರ.



ಕಾವ್ಯವಾಣಿಯಿಂದ ಪ್ರಾರಂಭವಾಗಿ, ತತ್ವವಾಣಿಯಲ್ಲಿ ವಿವರಣೆಗೊಂಡು, ವರದವಾಣಿಯಲ್ಲಿ ವಿರಮಿಸಿದ ಈ ಕೃತಿ ಅಮೂಲ್ಯವಾದುದು. ಜಗತ್ತು ಅತ್ಯಂತ ಜಡವೆಂದು ಉಳಿದ ದಾರ್ಶನಿಕರು ಹೇಳುವ ಆ ಕಾಲದಲ್ಲಿ ಇದು ತನ್ನ ದೂರದೃಷ್ಟಿಯನ್ನು ಹರಿಸಿದೆ. ವೈಜ್ಞಾನಿಕ ಪ್ರಜ್ಞೆಯನ್ನು ಪ್ರಕಾಶಪಡಿಸಿದೆ. ಒಟ್ಟಾರೆ ಸಮಗ್ರ ಜೀವನದ ಸಂಪತ್ತು ಈ ಗುರುಕೃತಿಯಲ್ಲಿ ತುಂಬಿದೆ. ಇದು ವೀರಶೈವಕ್ಕೆ ಪರಮಪ್ರಮಾಣ ಗ್ರಂಥರತ್ನವೆಂದು ಘಂಟಾಘೋಷವಾಗಿ ಹೇಳಬಹುದು.

ಈ ಸಿದ್ಧಾಂತ ಶಿಖಾಮಣಿಗೆ 'ಶ್ರೀ ರೇಣುಕಗೀತೆ' ಎಂದು ಇನ್ನೊಂದು ಹೆಸರಿದೆ. ಇದರಿಂದಾಗಿ ಇದು ಗೀತೆಗಳಲ್ಲಿ ಪರಿಗಣಿತವಾಗಿದೆ. ಇದು ಶಿವಗೀತೆ, ಭಗವದ್ಗೀತೆ, ಗುರುಗೀತೆ ಮೊದಲಾದ ಗೀತೆಗಳ ಕಾಲದಲ್ಲಿ ಹುಟ್ಟಿರಬೇಕೆಂದು ಹೇಳಲು ಅವಕಾಶವಿದೆ. ಪುರಾಣಗಳ ನಂತರ ಗೀತೆಗಳ ಕಾಲ. ಪುರಾಣಗಳಲ್ಲಿನ ಕೆಲವಂಶಗಳನ್ನೆತ್ತಿ ಹಿಗ್ಗಿಸಿ ಗೀತೆಗಳನ್ನು ರಚಿಸಿದಂತಿದೆ. ಭಗವದ್ಗೀತೆಯು ಇದಕ್ಕೆ ಸತ್ಯಸಾಕ್ಷಿಯಾಗಿದೆ. ಶಿವಗೀತೆಯೂ ಅಷ್ಟೆ! ಪದ್ಮಪುರಾಣದ ಭಾಗವೆಂದು, ಭಗವದ್ಗೀತೆಗೆ ಮುನ್ನ ಹುಟ್ಟಿದುದೆಂದು ಹೇಳುತ್ತಾರೆ. ಅಂತೆಯೇ ಶಿವಯೋಗಿ ಶಿವಾಚಾರ್ಯ ಕವಿಯೂ ಸಹ ತನ್ನ ಈ ಶ್ರೀ ರೇಣುಕ ಗೀತೆಯಲ್ಲಿ ಎಲ್ಲ ಪುರಾಣಗಳ ಸಾರವನ್ನು ಇರಿಸಿರುವುದಾಗಿ ಹೇಳಿಕೊಂಡಿದ್ದಾನೆ. ಭಗವದ್ಗೀತೆ ಉಪನಿಷತ್ತುಗಳ ಸಾರವಾದರೆ, ಶ್ರೀ ರೇಣುಕಗೀತೆಯು ಶಿವಾಗಮಗಳ ಸಾರವಾಗಿದೆ. ಇದು ಗೀತೆಗಳ ಸಮಕಾಲೀನ ಕೃತಿಯೆಂದು ಹೇಳಲು ಪೋಷಕವಾಗಿದೆ. ಒಂದೊಂದು ಸಾಹಿತ್ಯ ಪ್ರಕಾರಕ್ಕೆ ಒಂದೊಂದು ಕಾಲವಿರುತ್ತದೆಂಬುದನ್ನು ಯಾರೂ ಅಲ್ಲಗಳೆಯಲಾರರು.

ಗೀತೆಯಲ್ಲಿ ೧೮ ಅಧ್ಯಾಯಗಳಿರುವಂತೆ ಅದರಲ್ಲಿ ೨೧ ಪರಿಚ್ಛೇದಗಳಿವೆ. ಪರಿಚ್ಛೇದ ಪದ ಅಧ್ಯಾಯ ಸರ್ಗ ಎಂಬ ಪದಗಳಿಗೆ ಪರ್ಯಾಯ ಪದವಾಗಿದ್ದರೂ ಅವುಗಳಿಗಿಂತ ವಿಶಿಷ್ಟಾರ್ಥವುಳ್ಳುದಾಗಿದೆ. ವಿಂಗಡಣೆಯೊಂದೆ ಇದರರ್ಥವಲ್ಲ. ವಿಚಾರ ನಿರ್ಧಾರ ಎಂಬ ಅರ್ಥಗಳೂ ಇದಕ್ಕಿವೆ. ಅಲ್ಲದೆ ಅವಚ್ಛಿನ್ನ ಪರಿಚ್ಛಿನ್ನ ಪದಸೌಮ್ಯವಿದ್ದು ನ್ಯಾಯಶಾಸ್ತ್ರ ಶಾಂಕರಾದ್ವೈತಗಳ ಕಾಲವನ್ನು ಸ್ಮರಣಕ್ಕೆ ತರುತ್ತದೆ. ಗೀತೆಯಲ್ಲಿ ಕೃಷ್ಣನ ವಿರಾಡ್ ಸ್ವರೂಪದರ್ಶನವಿದ್ದರೆ ಇದರಲ್ಲಿ ಕೊನೆಯ ಪರಿಚ್ಛೇದದಲ್ಲಿ ಶ್ರೀ ರೇಣುಕರ ಮೂರುಕೋಟಿ ಸ್ವರೂಪ ರೂಪ ವಿರಾಡ್‌ದರ್ಶನವಿದೆ. ಇವೆಲ್ಲವೂ ಸಮಕಾಲೀನತೆಗೆ ಕುರುಹುಗಳಾಗಿವೆ.

## ಸಿದ್ಧಾಂತ ಶಿಖಾಮಣಿಯ ಸ್ವರೂಪ

ಇದು ಶಿವಾಗಮಗಳ ಸಾರ. ಇದರಿಂದಾಗಿ ಶೈವತಂತ್ರಗಳಿಗಿಂತ ಶ್ರೇಷ್ಠ. ಇದರ ಮುಂದೆ ಮತ್ತೆ ಸಿದ್ಧಾಂತವಿಲ್ಲ. ಲೋಕಾನುಗ್ರಹಕ್ಕಾಗಿ ಇದರ ಉದಯ. ಇದು ಪ್ರಕಟಿತ ಶಿವಾದ್ವೈತ ಇದರಿಂದ ಲಭಿಸುತ್ತದೆ. ಭಾವ ಪ್ರಸಾದ ಸಕಲಾರ್ಥಗಳೂ ಇದರಲ್ಲಿ ಪ್ರಕಾಶಗೊಂಡಿವೆ. ನೂರೊಂದು ನೆಲೆಗಳ ತುಂಬು ನಿಲವು ನಿರೂಪಣೆಗೆ, ಶೈವೀ ಭಕ್ತಿಗೆ ಇದೊಂದೇ ಪ್ರಮಾಣ

ಪುಸ್ತಿಕೆ. ಪರಮ ಪ್ರಬೋಧಕ್ಕೆ ಅದ್ವಯಾನಂದ ಪ್ರಕಾಶಕ್ಕೆ ಇದೊಂದೇ ಕಲಾತ್ಮಕ ಕೃತಿ. ರೇಣುಕರ ಪ್ರಸಾದವಾಣಿಯಿಂದ ಅವತರಿಸಿದ ಸಿದ್ಧಾಂತವಾಣಿ; ಶಿವಾದ್ವೈತಶಾಸ್ತ್ರ ಶಿವಪ್ರಸಾದ ಪಾತ್ರ. ಷಟ್‌ಸ್ಥಲ, ತತ್ವತಂತ್ರ, ಸರ್ವಸಿದ್ಧಾಂತ ಸಾರ, ವೇದ ವೇದಾಂತ ಸರ್ವಸ್ವ ವಿದ್ಯಾಚಾರಪ್ರಕಾಶ, ಇದು ಶಿವಸಿದ್ಧಾಂತ. ವೀರಶೈವ ಮತಾತ್ಮಕ ಇದಲ್ಲದೆ, ಇದು ವೇದಾಗಮ ವೀರಶೈವ ಸರಣಿ, ಷಟ್‌ಸ್ಥಲ ಉದ್ಯನ್ಮಣಿ, ಜೀವೇಶ್ವರ ಯೋಗ ಪದ್ಮ ತರಣಿ, ಗೋಪ್ಯಚಿಂತಾಮಣಿ ಇದು ಗಾತ್ರದಲ್ಲಿ ಗೀತೆಯ ಎರಡರಷ್ಟಿದೆ.

ನೂರೊಂದು ನೆಲೆಗಳು ಸಮಗ್ರವಾಗಿ ಇದರಲ್ಲಿ ಪ್ರತಿಪಾದಿತವಾಗಿವೆ. ಭಾವಪೂರ್ಣವಾಗಿದ್ದು ಸುಬೋಧ ವಾಗಿವೆ. ಜೀವನಮುಕ್ತಿಯೇ ಇದರ ಪ್ರಾಮುಖ್ಯ ಗುರಿ. ಇದರಲ್ಲಿ ಉಕ್ತವಾದ ಸಾಧನ ಮಾರ್ಗಗಳು ಅಥವಾ ಸ್ಥಲಗಳು ಏಕಸೂತ್ರತೆಗೆ ಸೇರಿಕೊಂಡಿವೆ. ಹಂತಹಂತ ವಾಗಿ ಮೇಲಕ್ಕೇರಿಸುತ್ತವೆ. ದ್ವೈತ ಅದ್ವೈತ. ಕ್ರಿಯೆ ಜ್ಞಾನ ಸಕಲ–ನಿಷ್ಕಲ, ಜಡ–ಅಜಡ ಮೊದಲಾಗಿ ಉಭಯ ಸಮನ್ವಯ ಮತ್ತು ಸರ್ವಸಮನ್ವಯ ಸಿದ್ಧಾಂತವಾಗಿದೆ. ಆ ಪರಮವಸ್ತು ಇದಕ್ಕೆ ಜಿಜ್ಞಾಸ್ಯ ವಿಷಯವಲ್ಲ; ಈ ಪಿಂಡವಸ್ತುವೆ ಜಿಜ್ಞಾಸ್ಯ; ಮತ್ತು ಉಪಾಸ್ಯ. ಈ ಸಿದ್ಧಾಂತ ಶಿಖಾಮಣಿ ದಿಟಕ್ಕೂ ಇದೊಂದು ದಿವ್ಯ ಚಿಂತಾಮಣಿ. ಯಾರು ಯಾರು ಏನೇನನ್ನು ಚಿಂತಿಸಿದರೆ ಅದೆಲ್ಲವೂ ಇದರಲ್ಲಿದೆ. ವ್ಯಕ್ತಿ ಮತ್ತು ವಿಶ್ವಕಲ್ಯಾಣವೆ ಇದರ ಲಕ್ಷ್ಯ. ಇದರಲ್ಲಿ ಷಡ್–ದರ್ಶನಗಳು ಸಮಾವೇಶಗೊಂಡಿವೆ. ಅಪರೋಕ್ಷಾನು-ಭೂತಿಯನ್ನು ಇದು ಒಪ್ಪುವದರಿಂದ ಇದು ಉತ್ತರ ಮೀಮಾಂಸೆಯೆನ್ನಿಸಿದೆ. ಇದು ಶಿವಶಕ್ತಿ ಮತ್ತು ಪುರುಷ ಪ್ರಕೃತಿ ವಿವೇಕಕ್ಕೆ ಅವಕಾಶಕೊಡುವುದರಿಂದ ಸಾಂಖ್ಯ ಶಾಸ್ತ್ರವೂ ಇದರಲ್ಲಿದೆ. ಕರ್ಮಯೋಗವನ್ನು ಅಂದರೆ ಕ್ರಿಯೆಯನ್ನು ಅಂಗೀಕರಿಸುವುದರಿಂದ ಪೂರ್ವ ಮೀಮಾಂಸೆಯೂ ಇದರಲ್ಲಿದ್ದಂತೆಯೇ! ಅಷ್ಟಾಂಗ ಯೋಗಗಳೆಲ್ಲ ಇದರಲ್ಲಿ ಒಂದಿಲ್ಲ ಒಂದು ರೀತಿಯಿಂದ ನಿರೂಪಿತವಾಗಿರುವುದರಿಂದ ಯೋಗದರ್ಶನವೂ ಆಗಿದೆ. ವಿಶೇಷ ವಿಶಿಷ್ಟ ಪದಪದಾರ್ಥಂಗೀಕಾರವಿರುವುದರಿಂದ ವೈಶೇಷಿಕ ದರ್ಶನವು ಇದರಲ್ಲಿದೆ. ಇದರಿಂದಾಗಿ ಇದು ಮಹತ್ವಪೂರ್ಣವಾಗಿವೆ. ಪರಮಜ್ಞಾನಿಗಳಿಗೆ ಪ್ರಿಯವಾಗಿದೆ. ಈ ಕೃತಿ ತೆಲಗು, ತಮಿಳು, ಮರಾಠಿ ಭಾಷೆಗಳಲ್ಲಿ ಅನುವಾದಿತವಾಗಿದೆ. ಆಯಾ ಪ್ರಾಂತಗಳಲ್ಲಿ ಪ್ರಚಾರದಲ್ಲಿದೆ.

ಈ ಸಿದ್ಧಾಂತ ಶಿಖಾಮಣಿಯನ್ನು ಅಧ್ಯಯನ ಮಾಡುವುದರಿಂದ ಈ ಕೆಲವು ಮಹತ್ವದ ಮಾತುಗಳು ಮನದಟ್ಟಾಗುತ್ತವೆ.

ಅದು ನಿರೂಪಿಸುವ ಸಿದ್ಧಾಂತ ಶಿವಾದ್ವೈತ, ಆದರ ಗುರಿ ಪರಮಾನಂದ ಪ್ರಕಾಶ, ಮತ್ತು ಶಿವಾತ್ಮೈಕ್ಯ. ಅದನ್ನು ಪಡೆಯುವ ಮಾರ್ಗ ಷಟ್‌ಸ್ಥಲ. ಆ ಷಟ್‌ಸ್ಥಲ ಸಾಧನೆಗೆ ಬೇಕಾದ ಮುಖ್ಯ ಸಂಪತ್ತಿದು ಕ್ರಿಯೆಗಳಿಂದ ಕೂಡಿದ ಭಕ್ತಿ. ಈ ಷಟ್‌ಸ್ಥಲ ಸಿದ್ಧಾಂತ ಹೈಮವತಿಯ ಮಗನಾದ ಷಣ್ಮುಖನಿಂದ ಬಂದುದು. ಈ ಸಿದ್ಧಾಂತ ಪ್ರತಿಪಾದಕ ಮೂಲಗ್ರಂಥ ಅಥವಾ ಶಾಸ್ತ್ರ, ಶಿವಧರ್ಮೋತ್ತರ. ಇದನ್ನು ಪ್ರಚಾರ ಮಾಡಿದವನು ಶಿವಪ್ರಿಯನೂ ಗಣನಾಥನೂ ಆದ ರೇಣುಕನು. ಈತನು ಪ್ರಬೋಧ ಸಿದ್ಧ. ಈ ಕೃತಿಯ ಪ್ರಕಾರ ರೇಣುಕಸಿದ್ಧನು ಭಾರತದ ಆದಿಮಾನವ, ಆದಿಮಹಾನುಭಾವ. ಆ ಪ್ರಕೃತ ಶಿವಸೃಷ್ಟಿಗೆ ಒಳ ಪಟ್ಟವನು ಶಿವಾದ್ವೈತ ಸಿದ್ಧಾಂತವನ್ನು ಸ್ಥಾಪಿಸುವದೆ ಈತನ ಮಣಿಹ ಆ ಸಿದ್ಧಾಂತ. ಸರ್ವಾರ್ಥದಾಯಕ, ಸರ್ವರಿಗೆ ಹಿತಕಾರಕ. ಅದನ್ನು ಮೊತ್ತಮೊದಲು ಆತ್ಮ ಶಿಷ್ಯನಾದ ಅಗಸ್ತ್ಯಮುನಿಗೆ ಪ್ರಬೋಧಿಸುವನು. ಕೊನೆಗೆ ಸಿಂಹಳಕ್ಕೆ ಹೋಗಿ ವಿಭೀಷಣನನ್ನು ಉದ್ಧರಿ-ಸುವನು. ತನ್ನ ಮೂರು ಕೋಟಿ ವಿರಾಡ್ ಸ್ವರೂಹ

ಸರ್ವತತ್ವಗಳಿಗೆ ಸಾಕ್ಷಿಣಿಯಂತೆ, ಉರಿವ ಕಟ್ಟಿಗೆಯಂತೆ ಅದು ಸರ್ವತೋಮುಖಿ. ಅದು ಈ ವಿಶ್ವಕ್ಕೆ ವಿಶ್ರಾಂತಿ ಸ್ಥಲವಂತೆ, ಅದು ಚಿದಾಕೃತಿಯಾಗಿ ಬೆಳಗುವ ಪ್ರಕಾಶ ವಂತೆ, ಅದೇ ವಿಮರ್ಶಾ ಕಲೆಯಂತೆ, ಅದರಿಂದ ಆತ್ಮನು ಸದಾನಂದಮಯನಾಗಿರುವಂತೆ, ಇದ್ದು ಬೆಳಗುವನಂತೆ, ಪರಿಪೂರ್ಣ ವಿಮರ್ಶಾಶಕ್ತಿಯುಳ್ಳವನೇ ಸರ್ವಜ್ಞನಂತೆ, ಸರ್ವಕರ್ತನಂತೆ, ಅಂತಹ ಆ ವಿಮರ್ಶಾ ಭಾಂಡದಲ್ಲಿ ಈ ವಿಶ್ವತತ್ವಗಳನ್ನೆಲ್ಲ ತುಂಬಿ ತನ್ನಲ್ಲಿ ಅಂತರ್ಮುಖಿ-ಯಾದವನೆ ಮುಕ್ತನಂತೆ, ಸ್ವಸ್ವರೂಪಧಾರಿಯಂತೆ.

ಇಂತಹ ಅಮೋಘವಾದ ವಿಚಾರಗಳು ಸಿದ್ಧಾಂತ ಶಿಖಾಮಣಿಯಲ್ಲಿ ಇನ್ನೆಷ್ಟೋ ಇವೆ. ಅದನ್ನೆಲ್ಲ ಇಲ್ಲಿ ಎತ್ತಿ ಬರೆಯಲು ಈ ಲೇಖನ ವ್ಯಾಪ್ತಿಗೆ ಸಾಧ್ಯವಿಲ್ಲ. ಅರಿಯಬೇಕೆನ್ನುವವರು ಆ ಮೂಲ ಕೃತಿಯನ್ನೇ ಓದ-ಬೇಕು. ಇದು ಶಿವಯೋಗಿ ಶಿವಾಚಾರ್ಯನು ಶಿವಾದ್ವೈತ ಸಿದ್ಧಾಂತಕ್ಕಿಂತ, ದಿವ್ಯಚಿಂತಾಮಣಿ, ಕ್ರಿಯಾ ಜ್ಞಾನಾ-ನುಭವ ಪದ್ಮತರಣಿ.

“ ಸಿದ್ಧಾಂತ ಶಿಖಾಮಣಿ ” ಕರ್ನಾಟಕ ಹಾಗೂ ಭಾರತೀಯ ದರ್ಶನ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯಾಗಿದೆ. ಸರ್ವದರ್ಶನ ಸಮನ್ವಯವಾಗಿದೆ. ಜೀವನದರ್ಶನವಾಗಿದೆ. ಮೊತ್ತಮೊದಲು ಮಾನವತೆಯ ಸಮತಾವಾದವನ್ನು ಮತ್ತು ‘ ಅನ್ನಂ ಬ್ರಹ್ಮೇತಿ ವ್ಯಜಾ-ನಾತ್ ’ ಎಂಬ ಶ್ರುತ್ಯುಕ್ತಿಯನ್ನು ಪ್ರಯೋಗಾತ್ಮಕ ವಾಗಿ ಕ್ರಿಯಾಚರಣೆಯಲ್ಲಿ ತಂದುಪ್ರಸಾದವೆ ಪರಶಿವ ಎಂಬ ಪರಿಣಾಮಕಾರಿ ಪ್ರತಿಪಾದನೆಯನ್ನು ಮಾಡಿದ ಕೀರ್ತಿ ಈ ಕೃತಿಗೆ ಸಲ್ಲಬೇಕು.

## ಕೊನೆಯ ಮಾತು.

ಪರಮ ಪೂಜ್ಯರೂ ಶಿವಯೋಗ ನಿಷ್ಠರೂ ಆದ ಜೇವರಗಿಯ ಶ್ರೀ. ಷ. ಬ್ರ. ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳವರು ಗುರುವರ್ಗದ ಶುಭ್ರಾಕಾಶದಲ್ಲಿ ಮಿನಗುವ ಬೆಳ್ಳಿಚಿಕ್ಕೆಯಾಗಿದ್ದಾರೆ. ಅವರ ಲೋಕ-ಹಿತದೃಷ್ಟಿಯು ಕಲ್ಯಾಣಕಾರಿಯಾಗಿದೆ. ಸಾರ್ಥಕ-ನಾಮರಾದ ಅವರು ಕರುಣೆ ವಾತ್ಸಲ್ಯಗಳ ಕಣ್ಮಣಿ. ಅವರಿಗೆ ಸಿದ್ಧಾಂತ ಶಿಖಾಮಣಿ ಎಂದರೆ ಜೀವಾಳ! ಅದರ ಪಾರಾಯಣ ಪಠನಗಳು ಸದಾಕಾಲ ನಡೆಯ-ಲೇಬೇಕು. ಅವರ ಷಷ್ಟ್ಯಬ್ಧಿಯ ದಿನಾಚಾರಣೆಯ ಸುಪ್ರಸಂಗದಲ್ಲಿ ಸಿದ್ಧಾಂತ ಶಿಖಾಮಣಿಯನ್ನು ಕುರಿತು ಬರೆಯುವದು. ನಮಗೆ ಅತ್ಯಂತ ಸಂತೋಷವನ್ನುಂಟು ಮಾಡಿತು. ಶ್ರೀ ಜಗದಾಚಾರ್ಯರು ಅವರಿಂದ ಇನ್ನೂ ಅನೇಕ ಮಂಗಲಕಾರ್ಯಗಳನ್ನು ನೆರವೇರುವಂತೆ ಅನುಗ್ರಹಿಸಲೆಂದು ಹೃದಯಾರೆ ಹಾರೈಸಲಾಗಿದೆ.



ಗುರು ಶಿಷ್ಯ ಸಂಬಂಧವನೇನೆಂದುಪಮಿಸುವೆನಯ್ಯಾ, ಗುರುವಿನ ಒಂದಾಗಿ ಹೋಗಲು ಬಾರದು, ಅದೇಕೆಂದರೆ ಗುರುವಿನ ನೆರಳ ಮೆಟ್ಟದಹಾಗೆ ಹೋಗಬೇಕು. ಗುರುವಿದ್ದ ಊರಲ್ಲಿರ-ಬಾರದು, ಅದೇಕೆಂದರೆ ತ್ರಿಕಾಲದಲ್ಲಿ ನಮಸ್ಕರಿಸದಲ್ಲದೆ ಇರಬಾರದು. ಗುರುವಿನಿದಿರಲ್ಲಿ ಆಸನವಿಕ್ಕಿ ಕುಳ್ಳಿರಬಾರದು, ಅದೇನುಕಾರಣವೆಂದರೆ ಆಸನವಿಲ್ಲದೆ ಭೃತ್ಯನಾಗಿ ಕುಳ್ಳಿರಬೇಕು. ಗುರುವಿನ ಸಮಪಂಕ್ತಿಯಲ್ಲಿ ಲಿಂಗಾರ್ಚನೆಯ ಮಾಡಲಾಗದು, ಅದೇನುಕಾರಣವೆಂದರೆ ಗುರುವಿಂಗೆ ಆರೋಗ-ಣೆಯ ಮಾಡಿಸಿದ ಬಳಿಕ ಪ್ರಸಾದಮಂ ಕೊಂಬುದು. ಗುರುವಿನಂತಹನಿಂತಹನೆಂದು ಕನಸಿನಲ್ಲಿ ಮನಸಿ-ನಲ್ಲಿ ನಿಂದೆಯ ಮಾಡಿದರೆ, ಅಘೋರ ನರಕದಲ್ಲಿಕ್ಕದೇ ಬಿಡುವನೇ, ನಮ್ಮ ಕೂಡಲ ಸಂಗಮದೇವ.

— ಬಸವಣ್ಣನವರು.

# ವೀರಶೈವ ಸಂಸ್ಕೃತಿ ವಿಕಾಸ

ಲೇಖಕರು :
ಡಾ|| ಶ್ರೀ. ಷ. ಬ್ರ. ಸಿದ್ಧರಾಮ ಶಿವಾಚಾರ್ಯರ್, M. B. H S. ಕವಳೂರ.

................

ಭಾರತೀಯ ಸಮಾಜ ಅಸಂಖ್ಯಾತ ವರ್ಷಗಳ ವರೆಗೆ ಹಬ್ಬಿರುವ ಸುದೀರ್ಘವಾದ ಅವಿಚ್ಛಿನ್ನ ಧಾರಿಯಂತಹ ಭವ್ಯವಾದ ಐತಿಹಾಸಿಕ ಪರಂಪರೆಯನ್ನು ಹೊಂದಿದೆ, ಮತ್ತು ಒಂದು ವಿಶಿಷ್ಟವಾದ ಜೀವನಕ್ರಮ ಹಾಗೂ ಅದ್ವಿತೀಯ ಸಂಸ್ಕೃತಿಯನ್ನು ಪಡೆದು-ಕೊಂಡಿದೆ. ಮೊಹೆಂಜೊದಾರೋ ಸಂಸ್ಕೃತಿ ಅಥವಾ ಅದಕ್ಕೂ ಹಿಂದಿನಕಾಲದಿಂದ ಹಿಡಿದು ಇಂದಿನವರೆಗೆ ಇದರ ಜೀವನಕ್ರಮದ ಗತಿಯಲ್ಲಿ ಯಾವ ಪ್ರಾಣ-ಘಾತಕ ತಡೆಗಳೂ ಇಲ್ಲದಂತಹ, ಒಂದು ಗಮನಾರ್ಹವಾದಂತಹ ನಿರಂತರತೆಯನ್ನು ಕಾಣಬಹುದಾಗಿದೆ. ಈ ಸಂಸ್ಕೃತಿಯನ್ನು ಸಮರ್ಪಕವಾಗಿ ವಿವರಿಸಲು ಮ್ಯಾಥೂ ಅರ್ನಾಲ್ಡರವರ ಅಭಿಪ್ರಾಯವನ್ನು ಅಂಗೀ-ಕರಿಸಬಹುದಾಗಿದೆ. ಸತ್ಯ, ಅಹಿಂಸೆ, ವಿಶ್ವಪ್ರೇಮ, ವಿಶಾಲ ಮನೋಭಾವ, ಹೃದಯವೈಶಾಲ್ಯ; ದಾನ-ಶೀಲತೆ ಔದಾರ್ಯಪೂರ್ಣವಾದ ಆತಿಥ್ಯ ಮತ್ತು ಇತರ ಎಲ್ಲಾ ಪ್ರಾಣೋಜ್ಜೀವಕ ಮೂಲಭೂತ ಮೌಲ್ಯಗಳ ಮಧುರ ಸವಿ ಹಾಗೂ ತಿರುಳೇ ಸಂಸ್ಕೃತಿ ಎಂದು ವಿದಿತವಾಗುವದು. ಇದು ರಚನಾತ್ಮಕವಾದ ಸಮಗ್ರ ಅರಿವು ಹಾಗೂ ಆಧ್ಯಾತ್ಮಿಕ ಜ್ಞಾನದ ಜ್ಯೋತಿಯ ಪ್ರತಿಬಿಂಬವೇ ಆಗಿದೆ. ಇದು ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಶಂಕರ ರಾಮಾನುಜರಂತಹ ದಾರ್ಶನಿಕರನ್ನು, ಬಸವ, ಬುದ್ಧ, ಜೈನ-ರಂತಹ ಉತ್ಕೃಷ್ಟ ಬೋಧಕರನ್ನು, ಅಶೋಕನಂತಹ ಮಹಾಶ್ರೇಷ್ಠ ಚಕ್ರವರ್ತಿಯನ್ನು, ಕಾಳಿದಾಸನಂತಹ ಅದ್ವಿತೀಯ ಸಾಹಿತಿಗಳನ್ನು ಮತ್ತು ಅದ್ಭುತ ಕಲೆ-ಗಳು, ದೇವಾಲಯಗಳು ಹಾಗೂ ಶಿಲೆಗಳಲ್ಲಿ ಸೃಷ್ಟಿಸಿದ ಸಾಟಿಯಿಲ್ಲದಂತಹ ಸುಂದರ ಕಲಾಕೃತಿಗಳನ್ನು ಕಾಣಿಕೆಯಾಗಿ ಜಗತ್ತಿಗೆ ನೀಡಿದ ಭವ್ಯ ಸಂಸ್ಕೃತಿ ಆಗಿದೆ. ಪರಕೀಯ ಸಂಸ್ಕೃತಿಗಳ ಸಂಪರ್ಕದ ಕಾರಣ ನಿರಂತರವಾಗಿ ಬದಲಾವಣೆಗೊಳಗಾಗಿದ್ದರೂ ಭಾರ-ತೀಯ ಮಣ್ಣಿನಲ್ಲೇ ಸೃಷ್ಟಿಯಲ್ಲಿ ಅರಳಿದ ಮತ್ತು ಇಂದುಕೂಡ ಸರಿಯಾದವುಗಳೆಂಬುದಾಗಿ ಒಪ್ಪಿಕೊಳ್ಳಲಾದ ಮೂಲಭಾವನೆ ಹಾಗೂ ಆದರ್ಶಗಳ ಮೇಲೆ ಆಧಾರಿತವಾಗಿರುವ ಈ ಸಂಸ್ಕೃತಿ ತನ್ನತನವನ್ನು ಕಳೆದುಕೊಳ್ಳದೆ ಭಾರತೀಯ ಸಾಧನೆಯಾಗಿಯೇ ಉಳಿದಿದೆ. ವಿಭಿನ್ನವಾದ ಅನೇಕ ಜನಾಂಗ, ಸಾಮಾ-ಜಿಕ ವ್ಯವಸ್ಥೆ ಹಾಗೂ ಸಂಸ್ಕೃತಿಗಳು ಇಲ್ಲಿಗೆ ಬಂದವು. ಮತ್ತೆ ಕೆಲವು ದೇಶದ ಸಂಪತ್ತನ್ನು ಸೂರೆಗೊಳ್ಳುವ ಉದ್ದೇಶದಿಂದ ಬಂದವು. ಹೀಗೆ ಬಂದ ಪರಕೀಯ ಅಂಶಗಳಲ್ಲಿ ಮುಕ್ಕಾಲುಮೂರು ವೀಸಾಪಾಲು ಎಲ್ಲವೂ ಈ ಭಾರಿಯಾದ ಜನಾಂಗ ಹಾಗೂ ನೈತಿಕ ಪ್ರಯೋಗ ಶಾಲೆಯಲ್ಲಿ ಅನೇಕ ಬದಲಾವಣೆಗಳನ್ನು ಹೊಂದಿದವು. ಪ್ರತಿಯೊಂದು ಒಂದಲ್ಲ ಒಂದು ವಿಧದಲ್ಲಿ ಸಾಂಸ್ಕೃತಿಕ ಬೆಳವಣಿಗೆಗೆ ಕೊಡುಗೆಯನ್ನು ನೀಡಿತು. ಭಾರತವು ಜಗತ್ತಿನ ವಿವಿಧ ಸಾಮಾಜಿಕ ಮತ್ತು ಸಾಂಸ್ಕೃತಿಕ ವಾಹಿನಿಗಳನ್ನು ಸ್ವಾಗತಿಸಿ ಅವುಗಳ ಸಾರವನ್ನೆಲ್ಲಾ ಹೀರಿಕೊಂಡ ಒಂದು ದೊಡ್ಡ ಸರೋವರವಾಗಿದೆ. ಮತ್ತು ತನ್ನ ಅಂತರಾಳದಲ್ಲಿ ತನ್ನ ವ್ಯಕ್ತಿತ್ವವನ್ನು ತನ್ನತನವನ್ನೂ ಬಿಟ್ಟುಕೊಡದೆ ಕಾಪಾಡಿಕೊಂಡಿದೆ. ತನ್ನದೇ ಆದ ಸಂಸ್ಕೃತಿಯಲ್ಲಿ ಆಳವಾಗಿ ಬೇರೂರಿರುವ ಮತ್ತು ಇತರ ನಾಡುಗಳ ಸಾಂಸ್ಕೃತಿಕ ಸಂಪ್ರದಾಯಗಳೆಂಬ ನದಿ ನೀರುಗಳಿಂದ ಪೋಷಿಸಲ್ಪಟ್ಟ ಭಾರತದ ಜೀವನಕ್ರಮ ಅದ್ವಿತೀಯವಾದುದಾಗಿದೆ. ಇದರ ಅಸಾಧಾರಣ ಪ್ರತಿಭೆಯ ಪ್ರಜ್ಞೆ ಪರಕೀಯರ

ಮೇಲೆ ಅತ್ಯಧಿಕ ಪ್ರಭಾವವನ್ನು ಬೀರಿದೆ. ಆದ್ದರಿಂದ ಪ್ರತ್ಯೇಕತೆ ಭಾರತದ ಸಹಜ ಮನೋ–ಧರ್ಮವಲ್ಲ. ಪರಸ್ಪರ ಸಹಕಾರ ಮೈತ್ರಿಯೇ ಇದರ ಅಂತಃಪ್ರವೃತ್ತಿಯಾಗಿದೆ. ಇದು ಇತರರ ಒಳ್ಳೆಯ ಅಂಶಗಳನ್ನೆಲ್ಲಾ ತೆರೆದ ಹೃದಯದಿಂದ ಒಪ್ಪಿಕೊಂಡಿದೆ. ಮತ್ತು ಜನಹಿತಕ್ಕೆ ಅವಶ್ಯಕವೆಂಬುದಾಗಿ ಕಂಡುಬಂದ ವಿಷಯಗಳನ್ನೆಲ್ಲಾ ತನ್ನ ಸಂಸ್ಕೃತಿಗೆ ಸೇರಿಸಿಕೊಂಡಿದೆ. ಆದ್ದರಿಂದ ಭಾರತೀಯ ಸಂಸ್ಕೃತಿ ಸಮೃದ್ಧವಾದ ಬೆಳೆಯಂತೆ ಹುಲುಸಾಗಿ ಭವ್ಯವಾಗಿ ಅರಳಿದೆ. ಈ ಸಂಸ್ಕೃತಿಯ ಸುಂದರವಾದ ಅಭಿವ್ಯಕ್ತಿಗಳನ್ನು ಇದರ ಅಪೂರ್ವವಾದ ದರ್ಶನ, ಧಾರ್ಮಿಕ ಪಂಥ, ಸಾಹಿತ್ಯ ಮತ್ತು ಅತ್ಯದ್ಭುತವಾದ ರಚನಾತ್ಮಕ ಶಕ್ತಿಗೆ ಸಾಕಾರ ರೂಪವೋ ಎಂಬಂತಿರುವ ಕಲೆಗಳಲ್ಲಿ ಕಾಣಬಹು–ದಾಗಿದೆ. ಕಾಲಗತಿಯಲ್ಲಿ ನಿರಂತರ ಮುಂದುವರೆಯುವ ಜಲಧಾರೆಯಂತೆ ಅವಿಚ್ಛಿನ್ನವಾದ ಹಾಗೂ ಬಹು ವ್ಯಾಪಕವಾದ ಸಂಸ್ಕೃತಿಯಾಗಿರುವದರಿಂದ ಇದು ಬಹು ಸಂಕೀರ್ಣವಾಗಿದೆ ಮತ್ತು ಇದರ ಅನೇಕ ಬಾಹ್ಯರೂಪಗಳು ವೈವಿಧ್ಯಮಯವಾಗಿವೆ.

ಇಂತಹ ಸಂಸ್ಕೃತಿಯನ್ನು ಪಾಶ್ಚಾತ್ಯ ದೇಶಗಳ ಸರ್. ಹೆನ್ರಿನಾರ್ಮನ್‌ರಂತಹ ವಿಚಾರಶೀಲ ಪಂಡಿ–ತರು ತಪ್ಪಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವರು ಭಾರತೀಯ ಸಂಸ್ಕೃತಿಯಲ್ಲಿ ಪರಲೋಕ ಚಿಂತೆ ಪ್ರಾಪಂಚಿಕ ಜೀವನದ ನಿರಾಕರಣೆ ಎಲ್ಲವೂ ವಿಧಿಗೆ ಅಧೀನ ಎಂಬ ವಾದ ಮತ್ತು ನಿರಾಶಾವಾದವೇ ಮುಖ್ಯ ಎಂದು ಟೀಕಿಸಿದ್ದಾರೆ, ಮತ್ತು ಭಾರತೀಯ ಸಂಸ್ಕೃತಿಯಲ್ಲಿ ನೈತಿಕವಾದ ವಿಷಯವೇ ಇಲ್ಲ ಎಂಬುದಾ–ಗಿಯೂ ಸಹ ಆಪಾದಿಸಲಾಗಿದೆ. ಇದಕ್ಕಿಂತ ಸತ್ಯಕ್ಕೆ ದೂರವಾದ ಮಾತು ಮತ್ತ್ಯಾವುದೂ ಇಲ್ಲ. ಭಾರತವು ಮೂಲಭೂತ ಮೌಲ್ಯಗಳ ಭದ್ರವಾದ ಆಧಾರದ ಮೇಲೆ ಕಟ್ಟಲಾದ ಸಾಮಾಜಿಕ ರಚನೆಯನ್ನೂ ಮತ್ತು ಧರ್ಮ ಅಥವಾ ನೈತಿಕ ತತ್ವಗಳ ಪ್ರಭಾವಕ್ಕೆ ಒಳಗಾದ ಮತ್ತು ಅವುಗಳಿಂದ ರೂಪಿತವಾದ ಜೀವನ ಕ್ರಮವನ್ನೂ ಹೊಂದಿರುವ ನಾಡಾಗಿದೆ. ಆದುದರಿಂದ ಭಾರತದ ಸಾಮಾಜಿಕ ಸಂಸ್ಥೆಗಳನ್ನೂ ಹಾಗೂ ಅವುಗಳಿಗೆ ಆಧಾರವಾಗಿರುವ ಮೂಲಭೂತ ನಂಬಿಕೆ ಮತ್ತು ದೈವೀಶಕ್ತಿಯ ಆಪ್ಪಣೆಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನಮಾಡಬೇಕಾ–ದುದು ಭಾರತೀಯ ಸಂಸ್ಕೃತಿಯ ಪ್ರತಿಯೊಬ್ಬ ಮಾನವನ ಪವಿತ್ರ ಕರ್ತವ್ಯವಾಗಿದೆ. ಇಂದು ನಾವು ನಮ್ಮ ಕಾಲುಗಳ ಮೇಲೆ ನಿಂತು ಜಗತ್ತಿನ ಸಂಸ್ಥೆಗಳಲ್ಲಿ ನಮ್ಮ ವಿಶಿಷ್ಟ ವ್ಯಕ್ತಿತ್ವ ಹಾಗೂ ಸ್ವಂತತೆಯನ್ನು ತೋರಬೇಕಾದರೆ ಈ ತರಹದ ಸಂಸ್ಕೃತಿಯ ಜ್ಞಾನ ಆವಶ್ಯಕ. ಇಂದು ಈ ಜಗತ್ತು ವಿಜ್ಞಾನದ ದುರುಪ-ಯೋಗದ ಕಾರಣ ಅಪಾಯಕ್ಕೆ ಒಳಗಾಗಿದೆ. ಅದಕ್ಕೆ ಒಂದು ಪ್ರಗತಿಶೀಲ ಶಾಂತಿಯ ಅಮೃತ ಅತ್ಯಾವಶ್ಯಕವಾಗಿದೆ. ಇಂದು ಭಾರತೀಯ ಯುವಕ ಯುವತಿಯರೂ ಪಾಶ್ಚಾತ್ಯಪ್ರಭಾವಗಳಿಗೆ ಒಳಗಾಗಿ ಪಾಶ್ಚಾತ್ಯ ಜೀವನ ಕ್ರಮವನ್ನೇ ಅನುಸರಿಸುತ್ತಿದ್ದಾರೆ. ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ತುಚ್ಛವಾಗಿ ಕಾಣುತ್ತಿದ್ದಾರೆ. ಇದು ಭಾರತೀಯರಿಗೆ ಸಮರ್ಪಕವಲ್ಲ ಗತಕಾಲದ ಆಧಾರದ ಮೇಲೆ ಗೌರವಯುತವಾದ ದೃಷ್ಟಿಯನ್ನಿಟ್ಟು ಅವುಗ-ಳನ್ನೂ ವಿಸ್ತೃತಗೊಳಿಸಿಕೊಂಡು ಮತ್ತು ಆಳವಾದ ಉತ್ಸುಕತೆಯನ್ನು ಬೆಳೆಸಿಕೊಂಡು ಮುನ್ನಡೆಇಡಬೇಕು. ಮತ್ತು ಎಷ್ಟೇ ವಿಪತ್ತುಗಳು ಬಂದರೂ ನಮ್ಮ ಸಹಜ ಪ್ರವೃತ್ತಿಗೆ ಅನುಗುಣವಾದ, ಜೀವನ ಕ್ರಮಕ್ಕೆ ಬಲಗೊಡುವಂತ ಅಂಶಗಳನ್ನೆಲ್ಲಾ ಅಳವಡಿಸಿಕೊಂಡು ವಿಶ್ವಶಾಂತಿ, ಸಮೃದ್ಧಿ ಹಾಗೂ ಪ್ರಗತಿಯುಂಟಾಗುವ ತರದಲ್ಲಿ ನಾವು ನಮ್ಮ ನಿಜವಾದ ಕಾಣಿಕೆಗಳನ್ನೂ ನೀಡುವುದರ ಮೂಲಕ ಭಾರತೀಯ ಸಂಸ್ಕೃತಿಗೆ ಕೃತಕೃತ್ಯರಾಗಬೇಕು.

ಹೀಗೆ ಮಾನವ ಸಹಜವಾದ ವ್ಯಕ್ತಿತ್ವವನ್ನೂ ಶಾಂತಿ ಸಮೃದ್ಧಿಗಳ ಆಗರವನ್ನಾಗಿ ಪರಿವರ್ತಿಸಲು–ದ್ಯುಕ್ತಗಳಾದ ಬೌದ್ಧ, ಜೈನ ಮುಂತಾದ ಅನೇಕ ಭಾರತೀಯ ಸಂಸ್ಕೃತಿಗಳಲ್ಲಿ ವೀರಶೈವ ಸಂಸ್ಕೃತಿಯೂ ಒಂದಾಗಿದೆ. ಇಂತಹ ಸಂಸ್ಕೃತಿಯನ್ನು ಮಾನವನು ತನ್ನ ಅನುಕೂಲಕ್ಕಾಗಿ ರೂಪಿಸಿಕೊಂಡ ಪರಿಸರಣದ ಒಂದು ಭಾಗವೇ ಆಗಿರುವುದು. ಪ್ರಸಿದ್ಧ ಆಂಗ್ಲ ಶಾಸ್ತ್ರಜ್ಞನಾದ ಈ. ಬಿ. ಟೇಲರ್ ಎನ್ನುವವನು, ಸಂಸ್ಕೃತಿ ಎನ್ನುವುದು ಒಂದು ಮೊತ್ತಮಾತ್ರ. ಇದರಲ್ಲಿ ಜ್ಞಾನ, ನಂಬಿಕೆ, ಕಲೆ, ನೈತಿಕತೆ, ಕಾನೂನು ಸಂಪ್ರದಾಯ ಇತ್ಯಾದಿಗಳು ಸೇರಿರುತ್ತವೆ ಎಂದು ಹೇಳಿದ್ದಾನೆ. ಆದುದರಿಂದ ಸಂಸ್ಕೃತಿಯು ಒಂದು ಸಾಂಕೇತಿಕ ನಿರಂತರ ಸಂಚಿತ ಪ್ರಗತಿಶೀಲ ಪ್ರಕ್ರಿಯೆ ಎಂದು ವಿದಿತವಾಗುತ್ತದೆ. ಇದನ್ನೇ ಸಾಮಾಜಿಕ ಪರಂಪರೆ ಎಂಬುದಾಗಿ ಹೇಳುತ್ತಾರೆ. ಮಾನವನು ತನಗೆ ಅವಶ್ಯಕವಾದ ಧರ್ಮ, ನೈತಿಕ ಧರ್ಮ, ಸ್ವಾವ-ಲಂಬನೆ, ಸಹಕಾರ. ಪ್ರೀತಿ, ಸೇವೆ, ತ್ಯಾಗ ಮೊದಲಾ-ದವುಗಳನ್ನು ಕಲಿಯುವದು ಸಂಸ್ಕೃತಿಯಲ್ಲಿಯೇ. ಆದುದರಿಂದ ಅದನ್ನೂ "ಮಾನವ ಗುಣ ಪ್ರಸಾರದ ಶಿಶುವಿಹಾರ" ಎಂದು ಕರೆದಿದ್ದಾರೆ. ಇಂತಹ ವಿಶಿಷ್ಟ ಸಂಸ್ಕೃತಿಗಳಲ್ಲಿ ಒಂದಾದ ಧರ್ಮ ವೀರಶೈವ ಧರ್ಮ ವಾಗಿದೆ. ಇಲ್ಲಿ ಧರ್ಮಪದವು 'ಭಾರವನ್ನು' ಧರಿಸು ಅಥವಾ ಪೋಷಕವಾಗಿರು ಆಸರೆ ಆಗಿರು, ಬೆಂಬಲ ಕೊಡು ಅಥವಾ ಒಂದುಗೂಡಿಸು ಎಂಬುದಾಗಿ ಅರ್ಥ ಗಳನ್ನು ಹೊಂದಿಸುವ ಧೃಞ್ ಧಾರಣ ಪೋಷಣಯೋಃ 'ಧ್ರಿ' ಎಂಬ ಮೂಲಧಾತುವಿನಿಂದ ಉತ್ಪನ್ನವಾಗಿದೆ. ಅಂದರೆ ಧರ್ಮ ಎಂಬ ಶಬ್ದಕ್ಕೆ ಒಂದು ವಸ್ತುವನ್ನು ಒಟ್ಟುಗೂಡಿಸುವುದು. ಅದು ಸಹಜವಾಗಿ ಹೇಗಿರ–ಬೇಕೋ ಹಾಗೆಯೇ, ಅದನ್ನು ಇಟ್ಟು ಪೋಷಿಸುವುದು. ಅದು ಚೂರು ಚೂರಾಗಿ ಒಡೆದು ಬೇರೆ ಯಾವುದೋ ವಸ್ತುವಾಗುವುದನ್ನು ತಡೆಗಟ್ಟುವುದು ಮತ್ತು ಅದರ ವೈಶಿಷ್ಟ್ಯ ಸೂಚಕ ಲಕ್ಷಣ ಹಾಗೂ ಕ್ರಿಯೆಗಳನ್ನು ಕಾಪಾಡುವುದು ಎಂಬುದಾಗಿ ಪದಶಃ ಅರ್ಥ ಕೂಡಬಹುದು.

ಶ್ರೀ ಅರವಿಂದರು ಆಧ್ಯಾತ್ಮಿಕತೆ, ಜೀವಸತ್ವ ಮತ್ತು ಬೌದ್ಧಿಕತೆ ಭಾರತೀಯ ಸಂಸ್ಕೃತಿಯ ಮೂರು ಸಾರಭೂತವಾದ ಲಕ್ಷಣಗಳಾಗಿವೆ. ಮತ್ತು ಅವುಗಳಿಗೆ ಧರ್ಮವು ಮೂಲವಾಗಿದೆ ಎಂಬುದಾಗಿ ವಿವರಿಸುತ್ತಾರೆ. ಉಪನಿಷತ್ತುಗಳು ಧರ್ಮವು ಸಮಗ್ರ ವಿಶ್ವದ ಆಧಾರ ವಾಗಿದೆ ಎಂಬುದಾಗಿ ವರ್ಣಿಸುತ್ತವೆ. ಮಹಾಭಾರತದಲ್ಲಿ ಧರ್ಮವನ್ನು ಜಗತ್ತಿನ ಪೋಷಣೆ ಮತ್ತು ಪ್ರಗತಿಗೆ ಅತ್ಯಂತ ಅವಶ್ಯಕವಾದ ಅಂಶ ಎಂಬುದಾಗಿ ಹೇಳಲಾ-ಗಿದೆ. ರಾಮಾಯಣವು ಕೂಡ ಧರ್ಮವು ಮಾನವ ಜೀವನದ ಸಾರ ಎಂಬುದಾಗಿ ವಿವರಿಸುತ್ತದೆ. ಧರ್ಮ-ವೆಂದರೆ ನಮ್ಮ ಆಲೋಚನೆ, ನಡೆ, ನುಡಿ, ಕ್ರಿಯೆ–ಗಳಲ್ಲಿ ಸಾಮರಸ್ಯ ಎಂದರ್ಥವೂ ಆಗುತ್ತದೆ. ಆದುದ–ರಿಂದ ಇದು ಮಾನವ ವ್ಯಕ್ತಿತ್ವದ ಪೂರ್ಣವಿಕಾಸಕ್ಕೆ ಅನಿವಾರ್ಯವಾಗುತ್ತದೆ. ಇದು ಆತ್ಮಸಾಕ್ಷಿ ಮತ್ತು ಸದ್ವರ್ತನೆಯನ್ನು ಎತ್ತಿಹಿಡಿಯುತ್ತದೆ. ಮತ್ತು ನಾವು ಮಾಡುವ ಕ್ರಿಯೆಗಳು ನೈತಿಕ ಶಿಖರಗಳನ್ನು ಮುಟ್ಟು ವಂತೆ ಮಾಡುತ್ತವೆ. ಹೀಗೆ ಇದು ಆದರ್ಶವಾದ ಧಾರ್ಮಿಕ ನಡತೆಯಾಗುತ್ತದೆ. ಆದುದರಿಂದ ಶಾಸ್ತ್ರ-ಜ್ಞರು ಧರ್ಮ ಮತ್ತು ಸಂಸ್ಕೃತಿಗಳಿಗೆ ಒಂದೇ ಅರ್ಥ ವನ್ನು ಹೇಳುತ್ತಾರೆ. ಬೌದ್ಧಗ್ರಂಥದಲ್ಲಿ ಸುಸಂಸ್ಕೃತ ವ್ಯಕ್ತಿಯನ್ನು 'ಧರ್ಮಾತ್ಮ' ಎಂಬುದಾಗಿ ಕರೆಯ ಲಾಗಿದೆ. ಸಂಸ್ಕೃತಿಯಾಗಿ ಧರ್ಮವು ಜೀವನದ ಮೂಲ ಭೂತ ಮೌಲ್ಯಗಳನ್ನು ಪ್ರತಿಬಿಂಬಿಸುತ್ತದೆ. ಮತ್ತು ಮಾನವ ಜೀವನದ ವೈವಿಧ್ಯಪೂರ್ಣವಾದ ಕ್ರಿಯೆ ಹಾಗೂ ಅಭಿವ್ಯಕ್ತಿಗಳಲ್ಲಿ ಅಡಗಿರುವ ಅದರ ಏಕತೆ ಯನ್ನು ಎತ್ತಿತೋರುತ್ತದೆ.

ಧರ್ಮ ಎಂದರೆ ನೈತಿಕವಾಗಿ ಸರಿಯಾಗಿರುವ

ಕರ್ತವ್ಯ, ಪರಮಸತ್ಯ. ವಿವೇಚನಾಶಕ್ತಿ ಹಾಗೂ ಅಂತರ್ದೃಷ್ಟಿ, ವಿಶ್ವನಿಯಮ, ಆದರ್ಶಗಳು, ವಾಸ್ತವಿಕ ಗುಣ, ನೈತಿಕ ಹಾಗೂ ಲೌಕಿಕ ಕಟ್ಟಳೆ ಒಳ್ಳೆಯ ಕಾರ್ಯಗಳು, ನ್ಯಾಯ, ರೂಢಿ, ಪದ್ಧತಿ ಹಾಗೂ ಸಂಪ್ರದಾಯ ಎಂದೂ ಅರ್ಥವಾಗುತ್ತದೆ. ಮತ್ತು ಇದು ಮಾನವನಿಗೆ ಆತ್ಮದ ನಿತ್ಯವಾಗಿರುವ ಕಳೆಯಾಗಿರುವುದರಿಂದ ದೈವಿಕವಾಗುತ್ತದೆ. ಸಂತೋಷದಲ್ಲಿ ಧರ್ಮವು ಮೋಕ್ಷ ಸಿದ್ಧತೆಗೆ ಕಾರಣವಾಗುತ್ತದೆ. ಮೋಕ್ಷವು ಪರಿಪೂರ್ಣ ದೇವತ್ವವಾದರೆ ಧರ್ಮವು ಮಾನವ ಪರಿಸ್ಥಿತಿಗಳಲ್ಲಿ ದೇವತ್ವವಾಗುತ್ತದೆ. ಇದೇ ಮತಧರ್ಮ ಎಂದೂ ಕರೆಯಲ್ಪಡುತ್ತದೆ. ಆಂಗ್ಲ ಶಾಸ್ತ್ರಜ್ಞರಾದ ಆಗ್‌ಬರ್ನ್ ಎನ್ನುವವರು "ಅತಿಮಾನುಷದ ಬಗ್ಗೆ ಜನರು ಬೆಳೆಸಿಕೊಂಡಿರುವ ಮನೋಭಾವನೆಗೆ ಮತಧರ್ಮ" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಸರ್‌ಜೇಮ್ಸ್ ಫ್ರೇಜರ್ ಎನ್ನುವವರು "ಪ್ರಕೃತಿ ನಿಯಮಗಳನ್ನು ಮತ್ತು ಮಾನವ ಜೀವನ ಪಥವನ್ನು ನಿಯಂತ್ರಿಸಿ ನಿರ್ದೇಶಿಸುವ ಅತಿಮಾನುಷ ಶಕ್ತಿಯಲ್ಲಿ ಅವರು ಇಟ್ಟಿರುವ ನಂಬಿಕೆಯೇ ಮತಧರ್ಮ" ಎಂದು ವ್ಯಾಖ್ಯೆಯನ್ನು ಕೊಟ್ಟಿದ್ದಾರೆ. ಎಲ್ಲ ಸಮಾಜ ಶಾಸ್ತ್ರಜ್ಞರಲ್ಲಿ ಮತಧರ್ಮ ಎಂದರೆ ಅತಿಮಾನುಷ ಶಕ್ತಿಯಲ್ಲಿ ಇಟ್ಟಿರುವ ನಂಬಿಕೆ. ಈ ನಂಬಿಕೆಯು ಭಯ, ಭೀತಿ, ಪೂಜ್ಯಭಾವನೆ ಮತ್ತು ಬಹಿರಂಗ ಅತಿಮಾನುಷ ಸಂಬಂಧಗಳನ್ನು ವ್ಯಕ್ತಪಡಿಸುವ ಅಭಿಪ್ರಾಯವಿದೆ. ಈ ದೃಷ್ಟಿಯಿಂದಲೇ ಧಾರ್ಮಿಕ ವರ್ತನೆಗಳು ಆರಂಭಗೊಂಡದ್ದು. ಈ ಧಾರ್ಮಿಕ ವರ್ತನೆಗಳು ಕುರುಡು ಸಂಪ್ರದಾಯವೆಂದು ಕೆಲವರು ಬಗೆಯುತ್ತಾರೆ. ಅವರೀಭಾವನೆ ಅರ್ಥವಿಲ್ಲದ ವ್ಯರ್ಥ ಪ್ರಯತ್ನವೇ ಆಗಿದೆ. ಆ ಅತಿಮಾನುಷ ಶಕ್ತಿಯನ್ನು ಒಲಿಸಿಕೊಳ್ಳಲು ತಮ್ಮ ಅಭಿಷ್ಟಗಳನ್ನು ನೆರವೇರಿಸಿಕೊಳ್ಳಲು ಮತ್ತು ಅದನ್ನು ಸ್ವಾಧೀನಪಡಿಸಿಕೊಳ್ಳಲು ಆದಿವಾಸಿಗಳು ಹಲವಾರು ಪ್ರಕಾರದ ಧಾರ್ಮಿಕ ವಿಧಿಗಳನ್ನು ಅನುಸರಿಸುತ್ತಿದ್ದರು. ಅವುಗಳೇ ಮತಾಚರಣೆಗಳಾಗಿ ಪರಿಣಮಿಸಿದವು. ಇಂತಹ ಅಲೌಕಿಕ ಶಕ್ತಿಯ ಅಸ್ತಿತ್ವವನ್ನು ಜನ ನಂಬಬೇಕಾದರೆ ಪೂಜೆ ಪುರಸ್ಕಾರಗಳು ಪ್ರಾರ್ಥನೆ, ಜಪ, ತಪ, ಧ್ಯಾನ, ಹೋಮ ಯಾಗಾದಿಗಳು ಬಲಿ ಅರ್ಪಿಸುವದು, ಹಾಡುವದು, ನೃತ್ಯ ಇತ್ಯಾದಿಗಳು ಆದಿವಾಸಿಗಳಲ್ಲಿ ಇದ್ದವೆಂದು ಐತಿಹಾಸಿಕ ಹಿನ್ನೆಲೆಯಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಮತ್ತು ಆ ಶಕ್ತಿಯ ಅಂತರ್ಗತ ಧರ್ಮವೇ ಜಗತ್ತಿನ ವಾಸಿಸುವ ಎಲ್ಲ ಜೀವಿಗಳ ನಿರಂತರ ಹೋರಾಟಕ್ಕೆ ಕಾರಣೀಭೂತವಾದುದೆಂಬ ಅಂಶವನ್ನು ಆದಿವಾಸಿಗಳೇ ಕಂಡುಕೊಂಡಿರಬೇಕಾದರೆ ಆಧುನಿಕರಾದ ನಮ್ಮೆಲ್ಲರಲ್ಲಿ ಇರುವ ಧಾರ್ಮಿಕ ನಂಬಿಕೆಗಳು ಕುರುಡು ಸಂಪ್ರದಾಯವೆಂದು ಹೇಳುವುದು ಅಷ್ಟು ಸಮಂಜಸವಲ್ಲ. ಇಂತಹ ನಿಗೂಢವಾದ ಧರ್ಮದ ರಹಸ್ಯವನ್ನು ಆದಿವಾಸಿಗಳು ಜಗತ್ತಿನ ವಿವಿಧ ಪ್ರದೇಶಗಳಲ್ಲಿ ವಿವಿಧ ರೀತಿಯಲ್ಲಿ ಅನುಷ್ಠಾನ ಪರರಾಗಿದ್ದರೆಂದು ಅವರಿಂದಲೇ ರಚಿತವಾದ ಕೆಲವು ಐತಿಹ್ಯ ಮತ್ತು ಪುರಾಣ ಕಥೆಗಳಿಂದ ನಮಗೆ ತಿಳಿದು ಬರುತ್ತದೆ. ಮತ್ತು ತತ್ಕಾಲದಲ್ಲಿ ವೇದಾಗಮೋಪನಿಷತ್ತುಗಳ ಜ್ಞಾನವು ಮುಂದಗತಿಯಲ್ಲಿದ್ದುದಾಗಿ ತಿಳಿಯುತ್ತದೆ. ಇದು ಋಷಿಗಳ ಮೂಲದಿಂದ ಬಂದುದರಿಂದ ವೈದಿಕ ಪರಂಪರೆ ಎಂದು ಹೇಳಿಸಿಕೊಳ್ಳಲು ಶಕ್ತವಾಯಿತು.

ಹೀಗೆ ಪವಿತ್ರವಾದ ನಮ್ಮ ಈ ಭಾರತ ಭೂಮಿಯು ಐತಿಹಾಸಿಕ ಹಿನ್ನೆಲೆಯಿಂದ ಸಿಂಧು ಸಂಸ್ಕೃತಿಯೇ ಮೂಲವಾಗಿರುವ ಅನಂತ ಧರ್ಮಗಳ ತಾಯ್ನಾಡಾಗಿದೆ ಮತ್ತು ಇಲ್ಲಿ ಎಷ್ಟೋ ಧರ್ಮಗಳು ತಲೆ ಎತ್ತಿ ಮೆರೆದ ವಿಷಯವು ದಾರ್ಶನಿಕರಿಗೆ ವಿದಿತ ವಿಷಯವೇ ಸರಿ. ಆ ಧರ್ಮಗಳು ವೈದಿಕಗಳಾಗಿರಬಹುದು ಅಥವಾ ಅವೈದಿಕಗಳಾಗಿರಬಹುದು. ಆದರೆ ಇವುಗಳಲ್ಲಿ ಪ್ರಮಾಣ ಪ್ರಮೇಯ ದೃಷ್ಟಿಯಿಂದ ಪರಸ್ಪರ ಭಿನ್ನತೆ

ಮತ್ತು ವೈಲಕ್ಷಣ್ಯಾದಿಗಳು ಕಾಣದಿರವು. ಆದರೂ ವೈದಿಕ ಧರ್ಮಗಳಲ್ಲಿಯೇ ಪರಸ್ಪರ ವಿಭಿನ್ನತೆ ಇರುವುದು ವ್ಯಕ್ತವಾಗುತ್ತದೆ. ಆ ದಿಶೆಯಲ್ಲಿ ಪರಸ್ಪರ ವಿಭಿನ್ನತೆಯನ್ನು ದೂರಮಾಡಿ ಸರ್ವ ಸಮನ್ವಯತ್ವವನ್ನು ಎತ್ತಿ ಹಿಡಿದು ಜಗತ್ತಿಗೆ ಪ್ರಕಾಶಪಡಿಸುವ ಒಂದು ಅಪೂರ್ವ ಸಾಧನೆಯು ಅತ್ಯಾವಶ್ಯಕವಾಗಿದ್ದಿತು. ಇಂತಹ ಮಹತ್ಕಾರ್ಯವನ್ನು ಸಾಧಿಸಿದ ಒಂದು ಅತ್ಯಪೂರ್ವ ಶ್ರೇಯಸ್ಸು ವೀರಶೈವ ಧರ್ಮಕ್ಕೆ ಸಲ್ಲುತ್ತದೆಂದು ಹೇಳುವಲ್ಲಿ ಯಾವ ಅತಿಶಯೋಕ್ತಿಯಾಗಲಾರದು. ಕಾರಣ ಆದಿಕಾಲದ ರಾಜರೆಲ್ಲರೂ ವೈದಿಕ ಸಂಸ್ಕೃತಿಯ ಪ್ರಭಾವಕ್ಕೆ ಗಾಢವಾಗಿ ಒಳಗಾಗಿದ್ದರಿಂದೂ ಅವರಲ್ಲಿ ಬಹುಪಾಲಿನವರು ತಮ್ಮ ವಂಶಕ್ಕೆ ವೇದಕಾಲದ ಯಾರಾದರೊಬ್ಬ ಪ್ರಸಿದ್ಧ ಋಷಿಯೇ ಮೂಲಪುರುಷನೆಂದು ಹೇಳಿಕೊಳ್ಳುವುದನ್ನು ಕಾಣುತ್ತೇವೆ. ಮತ ನಂಬಿಕೆಗಳು ಮತ್ತು ಧರ್ಮಾಚರಣೆಗಳಿಗೆ ಸಂಬಂಧಪಟ್ಟಂತೆ ವಿಚಾರ ಮಾಡಿದರೆ ರಾಜರು ಮತ್ತು ವಿದ್ವಾಂಸರುಗಳು ವೈದಿಕ ಸಂಪ್ರದಾಯಗಳಿಗನುಸಾರವಾದ ಭಾವನೆಗಳನ್ನು ಜೀವನ ಕ್ರಮಗಳನ್ನು ಮೈಗೂಡಿಸಿಕೊಂಡಿದ್ದರೆಂಬುದು ಸ್ಪಷ್ಟವಾಗಿದೆ. ಇದರಿಂದಾಗಿ ವೈದಿಕ ನಂಬಿಕೆಗಳ ಪರಿಣಾಮದಿಂದ ರೂಪುಗೊಂಡ ಶೈವ, ವೈಷ್ಣವ ಮತಗಳೂ, ವೈದಿಕ ಮೂಲವಲ್ಲದ ಜೈನ ಬೌದ್ಧಮತಗಳೂ ಸ್ಥಳೀಯವಾದ ನಂಬಿಕೆಗಳಿಗೆ ಸೇರಿದ ಹಲಕೆಲವು ಆಚರಣೆಗಳೂ ಪ್ರಚಾರದಲ್ಲಿದ್ದವೆಂಬುದು ಸಾಕಷ್ಟು ಆಧಾರಗಳಿಂದ ತಿಳಿದುಬರುತ್ತದೆ. ಆದುದರಿಂದ ವೀರಶೈವ ಮತವು ಋಷಿಗಳಿಗೂ ಮೂಲ ಗುರುಗಳಾದ ಆಚಾರ್ಯ ಪರಂಪರೆಯಿಂದ ಬೆಳೆದು ಬಂದಿರುವುದರಿಂದ ಪರಮ ವೈದಿಕ ಮತವೆಂದು ವೇದಗಳಲ್ಲಿ ಪ್ರಸಿದ್ಧವಾಗಿದೆ. ಅಲ್ಲದೆ ವಿಭಿನ್ನ ಮತಗಳಲ್ಲಿರುವ ಪರಸ್ಪರ ನ್ಯೂನ್ಯತೆಗಳನ್ನು ತಿರಸ್ಕರಿಸುವದರ ಮೂಲಕ ಸಾಮ್ಯವನ್ನು ಪ್ರಕಾಶಪಡಿಸಿ ಸರ್ವಧರ್ಮ ಸಮನ್ವಯತ್ವವನ್ನು ಸಾಧಿಸಿದ ಏಕೈಕ ಧರ್ಮ ಅಪ್ರಾಕೃತ ವೀರಶೈವ ಧರ್ಮವೇ ಆಗಿದೆ.

ಈಗ ವೀರಶೈವ ಧರ್ಮ ಸಂಸ್ಕೃತಿಯ ಚಾರಿತ್ರಿಕ ಹಾಗೂ ಸಾಮಾಜಿಕ ಬೆಳವಣಿಗೆಗೆ ಮತ್ತು ಅದರ ತತ್ವಸ್ವರೂಪವನ್ನು ಕುರಿತು ವಿಚಾರ ಮಾಡುವುದು ಅಗತ್ಯವಾಗಿದೆ. ವೀರಶೈವ ಮತವು ಶೈವ-ಪಾಶುಪತ, ಸೋಮ, ಲಾಕುಲಾದಿ ಸಪ್ತವಿಧ ಶೈವ ಪ್ರಭೇದಗಳಲ್ಲಿ ಒಂದಾಗಿದೆ. ವೇದಾಂತ, ಸಿದ್ಧಾಂತ ಸಮ್ಮತವಾದುದೇ ವೀರಶೈವ ಮತ ಎಂಬುದಾಗಿ ಶ್ರೀ ರೇಣುಕ ಭಗವತ್ಪಾದರು ಅಗಸ್ತ್ಯರಿಗೆ ಉಪದೇಶ ಮಾಡಿದ್ದಾರೆ. ಈ ಅಗಸ್ತ್ಯರು ರಾಮಾಯಣ ಕಾಲದಲ್ಲಿಯೂ ಪ್ರಸಿದ್ಧವಾಗಿರುವುದರಿಂದ ಮತ್ತು "ಅಗಸ್ತ್ಯಮುನಿ ಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಂ। ಸೂತ್ರವೃತ್ತಿಂ ಸಮಾಲೋಕ್ಯ ಕೃತಂ ಭಾಷ್ಯಂ ಶಿವಂ ಕರಂ" ಅಂದರೆ ಅಗಸ್ತ್ಯ ಮಹರ್ಷಿಯು ವ್ಯಾಸ ಸೂತ್ರಗಳಿಗೆ ರಚಿಸಿರುವ ವ್ಯಾಖ್ಯಾನರೂಪವಾದ ಸಮನ್ವಯಾತ್ಮಕವಾದ ವೃತ್ತಿಯನ್ನು ಪರಿಶೀಲಿಸಿ ಅದರ ಆಧಾರದ ಮೇಲೆ ಶ್ರೀಪತಿ ಪಂಡಿತರು ಮಂಗಲಕರವಾದ ಭಾಷ್ಯವನ್ನು ಬರೆದಿದ್ದೇವೆಂಬುದಾಗಿ ಹೇಳಿದ್ದಾರೆ. ಆದುದರಿಂದ ಅಗಸ್ತ್ಯಮುನಿಗಳಿಗೂ ಪುರಾತನವಾದ ಮತ ವೀರಶೈವ ಮತವಾಗಿದೆ. ಅದರ ಐತಿಹಾಸಿಕ ಮೂಲ ಯಾವುದೆಂದು ನಿರ್ಧರಿಸುವುದು ಕಷ್ಟವಾಗಿದೆ. ಅದು ವೈದಿಕ ಪೂರ್ವಕಾಲವೆಂದೂ ಆರ್ಯೇತರ ಕಾಲವೆಂದೂ, ಕೆಲವು ವಿದ್ವಾಂಸರು ಪ್ರತಿಪಾದಿಸುತ್ತಾರೆ. ಐತಿಹಾಸಿಕ ಮೂಲವನ್ನು ತೆಗೆದುಕೊಂಡರೆ ಹರಪ್ಪಾ ಮೊಹೆಂಜೋದಾರೊಗಳಲ್ಲಿನ ಸಂಸ್ಕೃತಿಯಲ್ಲಿ ಶಿವಲಿಂಗ ಪೂಜಾಪದ್ಧತಿಯನ್ನು ಅವಲೋಕಿಸಿದಾಗ ಲಿಂಗಪೂಜಾ ಪದ್ಧತಿಯೂ ಅದಕ್ಕೂ ಪೂರ್ವದಿಂದಲೂ ಇದ್ದಿರಬಹುದು ಎಂದು ಗೊತ್ತಾಗುತ್ತದೆ. ಮತ್ತು ಮೆಸೋಪೊಟೇಮಿಯಾ, ಈಜಿಪ್ಟ್, ಗ್ರೀಸ್ ಮೊದಲಾದ ಭಾರತದ ಹೊರಗಿನ ದೇಶಗಳಲ್ಲಿಯೂ ಪ್ರಚಾರದಲ್ಲಿತ್ತೆಂದು ತಿಳಿಯುತ್ತದೆ. ಮಹಾಭಾರತದ ಸಂಕಲನ ಕಾಲದ ಸರಿಸುಮಾರಿನಲ್ಲಿ

ಲಿಂಗಪೂಜೆಯೂ ಹಿಂದೂ ಧರ್ಮದ ಅಂಗವಾಗಿ ಅಂಗೀಕೃತವಾಯಿತೆಂದು ಸರ್ ಚಾರ್ಲ್ಸ್ ಎಲಿಯೆಟ್ ಅಭಿಪ್ರಾಯಪಡುತ್ತಾನೆ. ಇದರಿಂದ ಮೂಲ ನಿವಾಸಿಗಳಿಂದ ವಿಶೇಷವಾಗಿ ದ್ರಾವಿಡವರ್ಗದ ಬುಡಕಟ್ಟು ಜನವರ್ಗದವರಿಂದ ಇದನ್ನು ತೆಗೆದುಕೊಳ್ಳಲಾಯಿತು. ಎಂಬ ಹಳೆಯ ವಾದ ಈಗ ನಿರಾಕೃತವಾಗಿದೆ. ಲಿಂಗ ಪೂಜೆಯು ದಕ್ಷಿಣದಲ್ಲಿ ವಿಶೇಷವಾಗಿ ಪ್ರಚಾರದಲ್ಲಿತ್ತಾದರೂ ಅಲ್ಲಿಗೆ ಸೀಮಿತವಾಗಿದ್ದಿಲ್ಲ. ಭಾರತದ ಎಲ್ಲಾ ಭಾಗಗಳಲ್ಲಿ ಆಸಾಂ, ನೇಪಾಳ, ಕಾಶ್ಮೀರದ ಬಹು ಭಾಗಗಳಲ್ಲಿ ಕೂಡ ರೂಢಿಯಾಗಿದೆ. ಮತ್ತು ಇದಕ್ಕೆ ಅನಾರ್ಯವೆಂದು ಕರೆಯಬಹುದಾದಯಾವ ವಿಷಯದ ಸೋಂಕೂ ಇರಲಿಲ್ಲ. "ಮುಖೇ ಮಂತ್ರಂ ಹೃದಿಧ್ಯಾನಂ ಮಸ್ತಕೇ ಲಿಂಗ ಧಾರಣಂ। ರುದ್ರಾಕ್ಷಂಚ ಶಿಖಾಭಸ್ಮ ಇತಿ ಬ್ರಾಹ್ಮಣ ಲಕ್ಷಣಂ" ಎಂಬ ಗೌತಮಸ್ಮೃತಿಯ ಉಕ್ತಿಯಂತೆ ಇದು ಅತ್ಯಂತ ನಿಷ್ಠಾವಂತ ಬ್ರಾಹ್ಮಣರ ಅಂತರಂಗ ಪೂಜೆಯ ಅಂಗವಾಗಿದೆ. ಮತ್ತು ಪೂಜೋಪಚಾರಗಳು ಔಚಿತ್ಯಪೂರ್ಣವಾಗಿವೆ. ಇವನ್ನೆಲ್ಲ ಗಮನಿಸಿದಾಗ ಈ ಪೂಜಾ ಪದ್ಧತಿಯೂ ನಮ್ಮ ಆದಿ ಶತಮಾನಗಳಲ್ಲಿ ಹಿಂದೂ ಬ್ರಾಹ್ಮಣ ವರ್ಗದಲ್ಲಿ ರೂಪುಗೊಂಡು ಪ್ರಚಾರಕ್ಕೆ ಬಂತೆಂದೂ ಗೊತ್ತಾಗುತ್ತದೆ. ಈ ಕಾರಣಗಳಿಂದ ಪುರುಷ ಮತ್ತು ಸೃಷ್ಟಿಕಾರ್ಯದಲ್ಲಿ ಏನೋ ಒಂದು ಭಗವದಂಶವಿದೆ ಎಂಬ ಭಾವನೆ ಆಗಲೇ ರೂಢವಾಗಿತ್ತೆಂದು ಗೋಚರ ವಾಗುತ್ತದೆ.

ಶೈವ ಸಾಹಿತ್ಯದಲ್ಲಿ ಲಿಂಗವನ್ನು ಬೆಳಕಿನ ಕಂಬ ವೆಂದು ಪೌರಾಣಿಕ ಹಿನ್ನೆಲೆಯಿಂದ ವರ್ಣಿಸಲ್ಪಟ್ಟಿದೆ. ಸಾರಾಂಶ ಏನೆಂದರೆ ಬ್ರಹ್ಮ ವಿಷ್ಣುಗಳೀರ್ವರು ಪರಸ್ಪರ ಮೇಲ್ಮೆಯನ್ನು ಪ್ರಕಟಿಸಲುದ್ಯುಕ್ತರಾಗಿ ಯುದ್ಧಸನ್ನದ್ಧ ರಾದಾಗ ಅವರ ಗರ್ವಾಪಹರಣದ ದೆಶೆಯಿಂದ ಭೂಮ್ಯಾಕಾಶಗಳಿಗೆ ಏಕಾಕಾರವಾದ ಒಂದು ಸ್ತಂಭವು ಪ್ರಕಟವಾಗುತ್ತದೆ. ಅದರ ಮೂಲವನ್ನು ಗುರುತಿಸಲು ಅಶರೀರ ವಾಣಿಯ ಆದೇಶವಾಗುತ್ತದೆ. ಅವರಿಗೆ ಅದು ಸಾಧ್ಯವಾಗದೆ ಹೋದಾಗ "ನಿಮ್ಮೀರ್ವರಿಗೂ ನಿಯಾಮಕವಾದ ಪರವಸ್ತು ಬೇರೆ ಇದೆ. ಅದನ್ನು ಈ ಲಿಂಗ ರೂಪದಲ್ಲಿ ಉಪಾಸನೆಮಾಡಿ ನಿಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳಿರಿ" ಎಂಬುದಾಗಿ ಪರಶಿವನೇ ಆಜ್ಞೆ ಮಾಡುತ್ತಾನೆ ಎಂಬುದಾಗಿ ಪುರಾಣಗಳಿಂದ ತಿಳಿದು ಬರುತ್ತದೆ. ಆದುದರಿಂದ ವೀರಶೈವರಿಗೆ ಲಿಂಗವು ಪರ ಶಿವನ ಪ್ರತ್ಯಕ್ಷರೂಪ. ಪರಬ್ರಹ್ಮ ಜ್ಯೋತಿಗೆ ಜ್ಯೋತಿ ಯಾದ ಪರಂಜ್ಯೋತಿ, ನಿರಂತರವಾದ ಪರಮಾನಂದ ಇತ್ಯಾದಿ ಇತ್ಯಾದಿ. ವೇದದಲ್ಲಿ ಉಕ್ತವಾದಂತೆ "ದಹ್ರಂ ವಿಪಾಪ್ಮಂ ಪರವೇಶ್ಮ ಭೂತಂ। ಹೃತ್ಪುಂಡರೀಕಂ ಪುರಮಧ್ಯಾ ಸಂಸ್ಥಂ। ತತ್ರಾಪಿ ದಹ್ರಂಗಗನಂ ವಿಶೋಕ ಸ್ತಸ್ಮಿನ್ಯದಂತಸ್ತದುಪಾಸಿತವ್ಯಂ" ಮತ್ತು 'ಅಂಗುಷ್ಠಮಾತ್ರ ಪುರುಷೋ ಜ್ಯೋತಿ ರಿವಾಧೂಮಕಃ ಎಂದರೆ ಧೂಮರಹಿತವಾದ ಉಜ್ವಲ ಪ್ರಕಾಶಮಾನವಾದ ಮತ್ತು ಹೃದಯಾಂತರಾಳದಲ್ಲಿ ನೆಲಸಿರುವ ಪರಂಜ್ಯೋತಿಯನ್ನು ಗುರುವು ದೀರ್ಘಾಪೂರ್ವಕ ಯೋಗ ಸಾಮರ್ಥ್ಯದಿಂದ ಹೊರತಂದು ರೂಪ ಕೊಟ್ಟದ್ದು ಅದನ್ನು ಲಿಂಗವೆಂದು ವೀರಶೈವರು ನಂಬುತ್ತಾರೆ. ಬಸವಾದಿ ಶಿವಶರಣರ ವಚನಶಾಸ್ತ್ರಗಳಲ್ಲಿಯೂ ಲಿಂಗವು ಅಗ್ನಿಸ್ತಂಭವೆಂದು ವರ್ಣಿತವಾಗಿದೆ. "ಲೀಯತೆ ಗಮ್ಯತೆ ಯತ್ರ ಜಗದೇ ತಚ್ಚರಾಚರಂ" ಅಂದರೆ ವಿಶ್ವವೆಲ್ಲವೂ ಯಾವುದರಿಂದ ಮೂಡಿಬಂದಿದೆಯೋ ಯಾವುದರಲ್ಲಿ ಅದು ಹೋಗಿ ಐಕ್ಯವಾಗುವದೊ ಆ ಪರಾತ್ಪರ ವಸ್ತುವೇ ಲಿಂಗವೆಂದು ವಿವರಿಸಲ್ಪಟ್ಟಿದೆ. ಲಿಂಗದ ಮೂಲವನ್ನು ಅಥರ್ವಣ ವೇದದ ಸ್ಕಂಧದಲ್ಲಿ ಕಾಣಬಹುದು. ಭಾಷ್ಯಕಾರರು ಜನ್ಮಾದ್ಯಧಿಕರಣದಲ್ಲಿ

"ಯತೋವಾ ಇಮಾನಿ ಭೂತಾನಿ ಜಾಯಂತೆ। ಯೇನ ಜಾತಾನಿ ಜೀವಂತಿ। ಯತ್ಪ್ರಯಂತ್ಯಭಿಸಂ ವಿಶಂತಿ। ತದ್ವಿ ಜಿಜ್ಞಾಸಸ್ವ। ತದ್ಬ್ರಹ್ಮೇತಿ"

ಎಂಬ ವಿಷಯ ವಾಕ್ಯದಲ್ಲಿ ಜಗಜನ್ಮಾದ್ಯ ಸಾಧಾರಣ

ಕಾರಣವಾದ ಲಿಂಗರೂಪ ಪರಶಿವ ಬ್ರಹ್ಮವನ್ನು ಉಪಾಶಿಸು ಎಂಬುದಾಗಿ ವಿವರಿಸುತ್ತಾರೆ. ಇನ್ನೂ ಸ್ಪಷ್ಟವಾದ ಆಧಾರಕ್ಕೆ ನಾವು ವೈದಿಕಯುಗಕ್ಕೆ ಅಂದರೆ ಋಗ್ವೇದಕ್ಕೆ ಹೋಗಬೇಕು. ಭಾರತ ದೇಶದ ಚರಿತ್ರೆಯಲ್ಲಿ ವೈದಿಕಯುಗವು ಪ್ರಾಚೀನತಮವೆಂದು ಎಲ್ಲಾ ವಿದ್ವಾಂಸರೂ ಒಪ್ಪಿಕೊಂಡಿದ್ದಾರೆ.

ಡಾ. ಮ್ಯಾಕ್ಡೊನೆಲ್‌ರ ಪ್ರಕಾರ ವೈದಿಕ ದೇವತೆಗಳು ಬಹುಮಟ್ಟಿಗೆ ಮೂರ್ತೀಕರಿಸಿದ ಪ್ರಾಕೃತಿಕ ಶಕ್ತಿಗಳು. ಈ ವಿಧದಿಂದ ದೇವರಿಗೆ ಸಂಬಂಧಿಸಿದ ಭಾವನೆ, ವಿಕಾಸ ಹೊಂದಿದ ರೀತಿಯನ್ನು ಕಟ್ಟಕಡೆಗೆ ಈ ದೇವರು ವಿಶ್ವದ ಪರಮೋಚ್ಚ ಸೃಷ್ಟಿಕರ್ತನೂ ಶಾಸಕನೂ ವಿಶ್ವವ್ಯಾಪಕನೂ ಆಗಿ ಪರಿಣಮಿಸಿ ಅವನನ್ನೂ ಅರಿತುಕೊಳ್ಳುವುದರಿಂದ ಶಾಶ್ವತಾನಂದ ದೊರೆಯುವದೆಂಬ ನಂಬಿಕೆಯುಂಟಾಗುವವರೆಗೂ ಕ್ರಮಕ್ರಮವಾಗಿ ಭಾವನೆ ಬೆಳೆದುಬಂದ ರೀತಿಯನ್ನೂ ನಾವು ಸ್ಪಷ್ಟವಾಗಿ ಗುರುತಿಸಬಹುದು.

ಶ್ವೇತಾಶ್ವತರೋಪನಿಷತ್ತಿನಲ್ಲಿ ಶಿವನು ಸರ್ವೇಶ್ವರನೆಂದು ವರ್ಣಿಸಲಾಗಿದೆ —

"ಸರ್ವಾನನ ಶಿರೋಗ್ರೀವಃ ಸರ್ವ ಭೂತಗುಹಾಶಯಃ ।
ಸರ್ವ ವ್ಯಾಪೀಚ ಭಗವಾನ್ ತಸ್ಮಾತ್ಸರ್ವಗತಃ ಶಿವಃ"

ಸಮಸ್ತ ಲೋಕಗಳನ್ನೆಲ್ಲ ತನ್ನ ಪ್ರಭುಶಕ್ತಿಯಿಂದ ಆಳುವವನು ಯಾರೋ ಸರ್ವಭೂತಗಳ ಅಂತರಾತ್ಮನು ಯಾರೋ ಅಂಥ ಪರಶಿವನೇ ಸಮಸ್ತ ಮಾನವರ ಆರಾಧ್ಯದೇವರು. ಮತ್ತು —

"ನತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಂ ।
ನೇಮಾ ವಿದ್ಯುತೋ ಭಾಂತಿ—ಕುತೋಽ ಯ ಮಗ್ನಃ ।
ತಮೇವ ಭಾಂತ ಮನುಭಾತಿ ಸರ್ವಂ ।
ತಸ್ಯ ಭಾಸಾ ಸರ್ವಮಿದಂ ವಿಭೂತಿ"

ಅಂದರೆ ಸೂರ್ಯನಾಗಲಿ, ಚಂದ್ರನಾಗಲಿ, ನಕ್ಷತ್ರಗಳಾಗಲಿ, ಮಿಂಚೆಆಗಲಿ, ಅವನನ್ನು ಬೆಳಗಿಸಲಾರವು. ಅವನು ಹೊಳೆದಾಗ ಅವನನ್ನು ಅನುಸರಿಸಿ ಉಳಿದೆಲ್ಲವೂ ಹೊಳೆಯುತ್ತವೆ. ಅವನ ಪ್ರಕಾಶದಿಂದಲೇ ಉಳಿದೆಲ್ಲ ವಸ್ತುಗಳು ಗೋಚರಿಸುತ್ತವೆ. ಮತ್ತು "ಭೀಷಾಽಸ್ಮಾದ್ವಾತಃ ಪವತೆ—ಭೀಷೋದೇತಿ—ಸೂರ್ಯಃ" ವಾಯು ಮೊದಲಾದ ಪಂಚಭೂತಗಳೂ. ಸೂರ್ಯ, ಚಂದ್ರ, ಮೊದಲಾದ ದೇವತೆಗಳೂ ಯಾರ ಭಯದಿಂದ ತಮ್ಮ ಕರ್ತವ್ಯಗಳನ್ನು ಪಾಲಿಸುತ್ತಿರುವರೋ ಅಂಥ ದೇವನಾದ ಸರ್ವಶಕ್ತ ಶಿವನಿಗೆ ಶ್ವೇತಾಶ್ವೇತರ ಕಾರನು ತನ್ನನ್ನು ತಾನೇ ಅರ್ಪಿಸಿಕೊಂಡು ಬಿಡುತ್ತಾನೆ. ಆದ್ದರಿಂದ ಋಗ್ವೇದ ಯಜುರ್ವೇದಗಳಲ್ಲಿಯೂ, ಮುಂಡಕ, ಕಠ, ಅಥರ್ವ ಶಿರೋಪನಿಷತ್ತುಗಳಲ್ಲಿಯೂ ಪ್ರತಿಪಾದ್ಯನಾದ ಅನನ್ಯನಾದ ಏಕೈಕ ದೇವರೆಂದರೆ ಆ ಪರಶಿವನೇ ಬೇರೆ ಯಾರೂ ಅಲ್ಲ. ಅಂತಹ ಶಿವರೂಪಲಿಂಗವನ್ನು ಭಕ್ತರು ಉಪಾಶಿಸಬೇಕು ಎಂದು ವಿವರಣೆ ಇರುತ್ತದೆ. ಇತಿಹಾಸ ಕಾಲದಲ್ಲಿ ಶೈವೋಪಾಸನೆಯು ವೇದಕಾಲ ಮತ್ತು ಸೂತ್ರಕಾಲಗಳಲ್ಲಿ ಇದ್ದುದಕ್ಕಿಂತಲೂ ಹೆಚ್ಚು ವಿಶಾಲ ವ್ಯಾಪ್ತಿಯನ್ನು ತಳೆದಿತ್ತೆಂದು ತೋರುತ್ತದೆ.

ರಾಮಾಯಣದಲ್ಲಿಯೂ ಶಿವನನ್ನು ಶಿವೋಪಾಸನೆಯನ್ನು ಕಾಣುತ್ತೇವೆ. ರಾಮಾಯಣದ ನಾಯಕನಾದ ಮಹಾವಿಷ್ಣುವಿನ ಅವತಾರ ಪುರುಷನಾದ ಶ್ರೀರಾಮನು ರಾವಣನ ಲಂಕಾನಗರದ ಮೇಲೆ ದಾಳಿ ಇಡುವುದಕ್ಕೆ ಸಾಗರವನ್ನು ದಾಟುವ ಮೊದಲು ಶಿವಲಿಂಗವನ್ನು ಪೂಜಿಸಿದನು. ಇಂದೂ ಕೂಡ ಆ ರಾಮೇಶ್ವರ ಲಿಂಗವನ್ನು ಪರಮಪವಿತ್ರವಾದ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದೆಂದು ಭಾವಿಸಿ ಸಮಸ್ತ ಹಿಂದೂಗಳೂ ಪೂಜಿಸುತ್ತಿದ್ದಾರೆ. ಅದೇ ಈಗಿನ ಪವಿತ್ರ ತೀರ್ಥಕ್ಷೇತ್ರವೆನಿಸಿದ 'ರಾಮೇಶ್ವರ' ಎಂಬುದು ಮತ್ತು ಉಪನಿಷತ್ತುಗಳಲ್ಲಿ ವರ್ಣಿತವಾದ ಶಿವಯೋಗವು ರಾಮಾಯಣದಲ್ಲಿ ಹೆಚ್ಚು ಸ್ವರೂಪವನ್ನು ತಾಳಿ ಪರಮೋಚ್ಚ ಮಟ್ಟವನ್ನು ಮುಟ್ಟಿದೆ. ಶಿವನು ಮಹಾಯೋಗಿ.

ಅವನನ್ನು ತೃಪ್ತಿಪಡಿಸುವುದಕ್ಕೆ ತಪಸ್ಸುಮಾಡಬೇಕು. ಭಗೀರಥನು ಘೋರ ತಪಸ್ಸನ್ನು ಮಾಡಿ ಪರಶಿವನ ಜಟಾಂತರ್ಗತ ಗಂಗೆಯನ್ನು ಭೂಲೋಕಕ್ಕೆ ಪ್ರವಹಿಸು ವಂತೆ ಮಾಡಿದನು. ಮಹಾಭಾರತದಲ್ಲಿಯೂ ಶಿವ ಮತವು ಇನ್ನೂ ವಿಕಾಸಹೊಂದಿರುವುದನ್ನು -ನೋಡ ಬಹುದಾಗಿದೆ. ಅಲ್ಲಿ ಶಿವೋಪಾಸನೆ ದ್ವಿಮುಖವಾಗಿದೆ. ಒಂದು ತಾತ್ವಿಕರೂಪ, ಇನ್ನೊಂದು ಜನಪ್ರಿಯಾರೂಪ. ಆದರೆ ಇವೆರಡನ್ನೂ ಸಮೀಕರಿಸಿ ನಿರೂಪಿಸಲಾಗಿದೆ. ಮಹಾಭಾರತದ ಕರ್ಣಪರ್ವ (24, 62,) ಅನುಶಾ– ಸನ ಪರ್ವ ( 22–23–27–144 ) ಗಳಲ್ಲಿ ಈ ವೈಶಿಷ್ಟ್ಯವು ಕಂಡು ಬರುತ್ತದೆ.

ಪುರಾಣಗಳಲ್ಲಿಯೂ ಶಿವೋಪಾಸನೆಯು ಬಹು- ಮಟ್ಟಿಗೆ ಬೆಳೆದು ವೃದ್ಧಿಗೊಂಡಿದೆ. ವೇದ ಕಾಲಾ– ನಂತರದ ಶಿವಮತವು ಪುರಾಣಗಳಲ್ಲಿ ಹೆಚ್ಚು ವಿಕಾಸ ಹೊಂದಿದ ರೂಪದಲ್ಲಿ ಕಾಣಬರುತ್ತದೆ. ವೇದ ಮತ್ತು ಇತಿಹಾಸ ಸಾಹಿತ್ಯಗಳಲ್ಲಿ ಶಿವನ ಬಗೆಗೆ ಸೂಚ್ಯವಾಗಿ ಹೇಳಿರುವ ಸಂಗತಿಗಳನ್ನೆಲ್ಲಾ ಪುರಾಣಗಳಲ್ಲಿ ಪೂರ್ಣ ವಾಗಿ ವ್ಯಕ್ತವಾಗಿ ವಿವರಿಸಿದೆ. ಮತ್ತು ಶಿವನ ಮಹಿಮೆ ಗಳನ್ನು ಹಾಡಿ ಹೊಗಳಲು ವೇದಗಳಿಗೆ ಸಾಮರ್ಥ್ಯ- ವಿಲ್ಲ ಎಂಬುದಾಗಿ ಸೌರ ( 7 : 10 : 38 : 1 : 33 : 90 ) ಲಿಂಗ ( 21:16 ) ಅಗ್ನಿ ( 88:2 ) ವಾಯು ( 30:283÷88 ) ಪುರಾಣಗಳು ವಿವರಿಸುತ್ತವೆ. ಪುರಾಣಗಳ ಕಾಲದಲ್ಲಿ ಶಿವನನ್ನು ಬೇರೆ ಬೇರೆ ಹಲವು ರೂಪಗಳಲ್ಲಿ ಪೂಜಿಸುತ್ತಿದ್ದರು. ಅರ್ಧ ಶಿವ ಅರ್ಧ ವಿಷ್ಣು ಸೇರಿದ 'ಹರಿಹರನ' ರೂಪದಲ್ಲಿ ಪೂಜಿಸುವ ಹರಿಹರೇಶ್ವರ ದೇವಾಲಯವು ಚಿತ್ರದುರ್ಗ ಜಿಲ್ಲೆಯ ಹರಿಹರದಲ್ಲಿರುತ್ತದೆ. ಅರ್ಧಗಂಡಸು ಅರ್ಧಹೆಂಗಸು ಆದ ಅರ್ಧನಾರೀಶ್ವರನೆಂಬ ರೂಪದಲ್ಲಿ ಪೂಜಿಸುತ್ತಿ– ದ್ದರು. (  ) ಬ್ರಹ್ಮ, ವಿಷ್ಣು, ಶಿವ ಈ ಮೂವರು ಒಂದುಗೂಡಿರುವ ಮಹೇಶ್ವರ ಅಥವಾ ತ್ರಿಮೂರ್ತಿ ರೂಪವು ಒಂದು. ಇದು ಸಾಮಾನ್ಯವಾಗಿ ಈಗಿನ ಪ್ರಸಿದ್ಧ ಯಾತ್ರಾ ಸ್ಥಳವಾದ ಕಲಬುರ್ಗಿ ಜಿಲ್ಲೆಯ ಗಾಣಗಾಪೂರ ಕ್ಷೇತ್ರದಲ್ಲಿರುವ ದತ್ತಾತ್ರೆಯ ಮೂರ್ತಿ ಆಗಿರಬಹುದು.

ಪುರಾಣಗಳಲ್ಲಿ ನಾನಾಬಗೆಯ ಲಿಂಗಗಳ ವರ್ಣನೆ ಇದೆ. 'ಜಲ ಲಿಂಗಗಳು' ಎಲ್ಲಿಗಾದರೂ ಕೊಂಡೊಯ್ದು ಪೂಜಿಸಲು ಸಾಧ್ಯವಾದವುಗಳು. ಅವನ್ನೇ ದೇಹದ ಮೇಲೆ ಧರಿಸುವ ಇಷ್ಟಲಿಂಗವೆಂದೂ ಕರೆದಿರಬಹುದು. 'ಅಚಲ ಲಿಂಗ' ದೇವಾಲಯದಲ್ಲಿ ಸ್ಥಾಪಿಸಿದಂತಹವು. ಲಿಂಗಗಳು ಕೆಲವು ದುಂಡಾಕಾರ, ಸ್ತಂಭಾಕಾರ,ಶಂಖಾ- ಕಾರ, ಮಾನವಾಕಾರ(ನಟರಾಜವಿಗ್ರಹ)ಭೇದಗಳಿಂದಿ- ರುವುದು ವೇದ್ಯವಾಗುತ್ತದೆ. ಮತ್ತು ಲಿಂಗಗಳನ್ನು ಮಣ್ಣುಮುದ್ದೆ, ಮರ, ಕಲ್ಲು, ಸ್ಫಟಿಕ, ಲೋಹ; ತಾಮ್ರ ಹಿತ್ತಾಳೆ, ಬೆಳ್ಳಿ, ಚಿನ್ನ ಅಥವಾ ರತ್ನ ಮುಂತಾದ ವಸ್ತುಗಳಿಂದ ನಿರ್ಮಿಸಿ ಪೂಜಿಸುವ ವಿಧಾನವು ಪುರಾಣ ಗಳಲ್ಲಿ ಸ್ಪಷ್ಟವಾಗಿದೆ.

ಬೌದ್ಧ ಸಾಹಿತ್ಯದಲ್ಲಿ ಶೈವಮತವು ವಿಕಾಸಹೊಂದಿದ ರೂಪದಲ್ಲಿತ್ತೆಂದೂ ಅದೊಂದು ಪ್ರಮುಖ ಮತವಾಗಿ- ತ್ತೆಂದೂ ಕಂಡುಬರುತ್ತದೆ. ತ್ರಿಪಿಟಕಗಳಲ್ಲಿ ಜಾತಕಗಳಲ್ಲಿ ಮತ್ತು ದೀರ್ಘನಿಕಾಯದಲ್ಲಿ ಶಿವಪ್ರಸ್ತಾಪವಿರುವುದು- ಹಾಗೂ ಅಶ್ವಘೋಷನು ಬುದ್ಧಚರಿತದಲ್ಲಿ ಶಿವನನ್ನು ವೃಷಧ್ವಜನೆಂದು ( 10 : 3 ) ಭವನೆಂದೂ (1:92) ಪಾರ್ವತಿಯನ್ನು ಸ್ಕಂಧಮಾತೆಯೆಂದೂ ( 1 : 66 ) ಕರೆದಿದ್ದಾನೆ.

ಮತ್ತು ಮಹಾವೈಯಾಕರಣರಯಾದ ಪಾಣಿನಿಯು ಶಿವಭಕ್ತನಾಗಿದ್ದನೆಂಬುದು ಅವನ ಅಷ್ಟಾಧ್ಯಾಯಿಯಲ್ಲಿ ಸ್ಪಷ್ಟವಾಗಿ ಗೊತ್ತಾಗುತ್ತದೆ. ಅವನ ವ್ಯಾಕರಣಕ್ಕೆ ಮೂಲಾಧಾರವಾದ "ಮಾಹೇಶ್ವರ ಸೂತ್ರಗಳು" ಮಹೇಶ್ವರನು ತನ್ನ ಕೈ ಡಮರುಗವನ್ನು ಹದಿನಾಲ್ಕು ಸಲ ಆಡಿಸಿ ಧ್ವನಿಮಾಡಿದಾಗ ಆವಿರ್ಭವಿಸಿದವೆಂದು

ಆ ಗ್ರಂಥದಿಂದ ಗೊತ್ತಾಗುತ್ತದೆ. ಆ ಕಾಲದಲ್ಲಿ ವಾಕ್ ಶಕ್ತಿಯೂ ಶಿವನಿಂದ ಮೂಡಿತೆಂಬ ನಂಬಿಕೆ ಇತ್ತು.
"ಮೂಕಂ ಕರೋತಿ ವಾಚಾಲಂ ಪಂಗುಂಲಂಘ ಯತೇಗಿರಿಂ।
ಯತ್ಕೃಪಾತಮಹಂ ವಂದೇ ಪಾರ್ವತೀಶಂ ಮಹೇಶಂ"
ಎಂಬ ಶ್ಲೋಕವು ತತ್ಕಾಲದಲ್ಲಿಯೇ ಪ್ರಕಟವಾಗಿರುವುದನ್ನು ಸ್ಮರಿಸಬಹುದು. ಪಾಣಿನಿ ಇದ್ದ ಕಾಲ ಕ್ರಿ.ಪೂ. ೪ನೇ ಶತಮಾನಕ್ಕಿಂತ ಈಚಿನದಲ್ಲವೆಂದು ಪಂಡಿತರ ಅಭಿಪ್ರಾಯವಾಗಿದೆ. ಅದಕ್ಕೂ ಪೂರ್ವದಲ್ಲಿ ಕ್ರಿ.ಪೂ. ೩ನೇ ಶತಮಾನದ್ದೆಂದು ಹೇಳುವ ಕೌಟಲ್ಯನ ಅರ್ಥ ಶಾಸ್ತ್ರದಲ್ಲಿ ಶಿವನ ಪ್ರಸ್ತಾಪಗಳಿರುವುದರಿಂದ (3:22: 2:20) ಕ್ರಿಸ್ತಶತಕ್ಕೆ ಪೂರ್ವದಲ್ಲಿಯೇ ಶೈವಮತವೂ ವಿಕಾಸ ಹೊಂದಿತ್ತು ಎಂದು ಸಿದ್ಧವಾಗುತ್ತದೆ.

ಆದಿಕಾಲದ ಸಾಹಿತ್ಯವನ್ನು ಗಮನಿಸಿದಾಗ ಶೈವ ಮತವು ಜನಪ್ರಿಯವಾಗಿತ್ತೆಂದೂ ಭಾರತರಾಷ್ಟ್ರದಲ್ಲೆಲ್ಲಾ ಹರಡಿತ್ತೆಂದೂ ಸಿದ್ಧವಾಗುತ್ತದೆ. 'ಮೃಚ್ಛಕಟಿಕ' ನಾಟಕದ ಕರ್ತೃವಾದ ಶೂದ್ರಕನು ಕಾಳಿದಾಸ, ಮಯೂರ, ಬಾಣ, ಭವಭೂತಿಗಳಂಥ ಪ್ರಸಿದ್ಧ ಸಂಸ್ಕೃತ ಕವಿಗಳು ತಮ್ಮ ಕೃತಿಗಳಲ್ಲಿ ಶಿವನನ್ನು ಶಿವನ ಕಾರ್ಯವನ್ನು ವರ್ಣಿಸುತ್ತ ಶೈವರು ಮಹಾ ಶಿವಭಕ್ತರೆಂದು ಅಂಗೀಕರಿಸಿದ್ದಾರೆ.

ಉದಾ : ಕಾಳಿದಾಸನು —

ವಾಗರ್ಥ ವಿವಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ।
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ।

ಎಂಬುದಾಗಿ ರಘುವಂಶ ಮಹಾಕಾವ್ಯಾರಂಭದಲ್ಲಿ, ಶಿವ ಸ್ತುತಿಯನ್ನು ಮಾಡಿದ್ದಾನೆ.

ಕನಿಷ್ಕಪಕ್ಷ ಕ್ರಿ.ಪೂ. ೧ನೇ ಶತಮಾನದಿಂದಲಾದರೂ ಶಿವಮತವೂ ರೂಢಿಯಲ್ಲಿತ್ತೆಂಬುದಕ್ಕೂ ಅದಕ್ಕೆಪ್ರಾಮುಖ್ಯತೆ ಇತ್ತೆಂಬುದಕ್ಕೂ ಪ್ರಾಚೀನಾನ್ವೇಷಣಾ ವಿದ್ಯೆ, ಶಿಲಾಶಾಸನವಿದ್ಯೆ, ನಾಣ್ಯವಿದ್ಯೆ ಇವುಗಳು ತಕ್ಕಷ್ಟು ಆಧಾರಗಳನ್ನು ಒದಗಿಸುತ್ತವೆ. ಮೊಹೆಂಜೋದಾರೊ ಕಾಲಕ್ಕೆ ಸೇರಿದವೆಂದು ಹೇಳಲಾದ ವಸೀರಿಸ್ತಾನದಲ್ಲಿ ಸಿಕ್ಕಿರುವ ಮಣ್ಣಿನ ಬೊಂಬೆಗಳನ್ನು ಈಶ್ವರ–ನಂದಿ ಆಕೃತಿಗಳೆಂದು ಸರ್. ಟಿ. ಸ್ಟೈಯ್ನಾ ಎನ್ನುವವರು ಅಭಿಪ್ರಾಯಪಡುತ್ತಾರೆ. ಕ್ರಿ. ಶ. ೨ ನೇ ಮತ್ತು ೩ನೇ ಶತಮಾನಗಳ ನಾಣ್ಯಗಳ ಮೇಲೂ ನಂದಿಯ ಆಕೃತಿ ಇರುವುದನ್ನು ಅಲೆಕ್ಝಾಂಡರನ ಉತ್ತರಾಧಿಕಾರಿಗಳ ನಾಣ್ಯಗಳ ಮೇಲೂ ಕಾಣಬಹುದು. ಮಹಾಭಾಷ್ಯಕರ್ತನಾದ ಪತಂಜಲಿಯು ಕೂಡ ಸ್ಕಂದನು ಆ ಕಾಲದಲ್ಲಿ ಪೂಜೆಗೊಳ್ಳುತ್ತಿದ್ದ ದೇವತೆ ಎಂದು ಹೇಳುತ್ತಾನೆ. ಪಾತಂಜಲಿ ಯೋಗ ಶಾಸ್ತ್ರವೆಂಬುದು ಶಿವಯೋಗವನ್ನಾಧರಿಸಿಯೇ ರಚಿತವಾದದ್ದೆಂದು ವಿದಿತವಾಗುತ್ತದೆ. ಗೊಂಡೋಫರ್ನೆಸನ್ ಒಂದು ನಾಣ್ಯದ ಮೇಲೆ ಶಿವನ ಮೂರ್ತಿ ಇದ್ದು ಎರಡು ಕೈಗಳಿರುವದು, ಒಂದು ಕೈಯಲ್ಲಿ ತ್ರಿಶೂಲವೂ ಹಿಡಿದಿರುವದು ವ್ಯಕ್ತವಾಗುತ್ತದೆ. ಮತ್ತು ಕುಶಾನರಾಜನೇಮ ಕಾಡ್‌ಫಿಸಿಸನ್ ಎರಡು ನಾಣ್ಯಗಳಲ್ಲಿ ಒಂದರ ಮೇಲೆ ಇರುವ ಶಿವಮೂರ್ತಿಗೆ ಒಂದು ಕೈಯಲ್ಲಿ ತ್ರಿಶೂಲವೂ, ಇನ್ನೊಂದು ಕೈಯಲ್ಲಿ ಕಮಂಡಲವೂ ಇರುವುದಾಗಿ ತಿಳಿಯುತ್ತದೆ. ಇದರಿಂದ ವೇದ್ಯವಾಗುವದೇನಂದರೆ ವೀರಶೈವ ಮತಸ್ಥಾಪನಾಚಾರ್ಯರ ಒಂದು ಕೈಯಲ್ಲಿ ದಂಡ ಮತ್ತೊಂದು ಕೈಯಲ್ಲಿ ಕಮಂಡಲ ಇರುವದನ್ನು ನೋಡಿದರೆ ಶಿವನಿಗೂ ಶಿವಾಂಶ ಸಂಭೂತ ಗಣಾಧೀಶ್ವರರಾದ ಪಂಚಾಚಾರ್ಯರಿಗೂ ಸಾಮ್ಯವಿರುವದು ವ್ಯಕ್ತವಾಗುತ್ತದೆ. ಆಚಾರ್ಯರ ಕೈಯಲ್ಲಿರುವ ದಂಡವು ಧರ್ಮದಂಡವೆಂದು ಪ್ರಸಿದ್ಧವಾಗಿರುತ್ತದೆ. ಮತ್ತು ಈ ಆಚಾರ್ಯರ ಸಾದೃಶ್ಯಪರವಾದ ಚಿತ್ರಗಳು ಕ್ರಿ. ಪೂ. ದಲ್ಲಿಯೇ ಪ್ರಚಲಿತವಿರುವುದರಿಂದ ವೀರಶೈವ ಮತ ಸ್ಥಾಪನಾಚಾರ್ಯರ ಪರಂಪರೆ ಆಗಿನಿಂದಲೂ ಮುಂದುವರಿದಿರುವುದನ್ನು ನಾವು ಮನಗಾಣಬಹುದು. ಇನ್ನೊಂದು ನಾಣ್ಯದ ಮೇಲೆ ಶಿವನ ಪಕ್ಕದಲ್ಲಿ ಒಂದು ನಂದಿ ನಿಂತಿರುವದು ವೇದ್ಯವಾಗುತ್ತದೆ. ಮತ್ತು ಇದರಿಂದ ಗ್ರೀಕರು ಭಾರತಿಯರಿಗಾಗಿ ಪರಿವರ್ತನೆ ಹೊಂದಿದ್ದರೆಂದೂ ಶೈವಮತವನ್ನು ತಮ್ಮ ಮತವನ್ನಾಗಿ

ಅಂಗೀಕರಿಸಿದ್ದರೆಂದೂ ಅನುಮಾನಿಸಬಹುದಾಗಿದೆ. ಮತ್ತು ನಾಣ್ಯಗಳ ಮೇಲಿನ ಬರಹವನ್ನು "ಮಹೇಶ್ವರ" ಎಂದು ಓದಿದ್ದಾರೆ. ಕನಿಷ್ಕನಿಗೆ ಸಂಬಂಧಿಸಿದ ಚಿನ್ನದ ನಾಣ್ಯಗಳ ಮೇಲೆ ನಾಲ್ಕು ಶೈಲಿಗಳಿರುವ ಶಿವನ ಮೂರ್ತಿ ಇರುತ್ತದೆ. ತ್ರಿಶೂಲ, ಡಮರು, ಕಮಂಡಲ ಮತ್ತು ಪಾಶಗಳನ್ನು ಹಿಡಿದುಕೊಂಡಿದ್ದು ನಾಲ್ಕು ಸುತ್ತಿನ ಪ್ರಭಾವಳಿಯಿಂದ ಯುಕ್ತವಾಗಿದೆ. ಕನಿಷ್ಕನ ಕಾಲದ ನಾಣ್ಯದಲ್ಲಿಯೂ ಶಿವನ ಮೂರ್ತಿಯ ಎರಡು ಕೈಗಳಲ್ಲಿ ಒಂದರಲ್ಲಿ ತ್ರಿಶೂಲ, ಇನ್ನೊಂದರಲ್ಲಿ ಕಮಂಡಲ ಇರುವದು ತಿಳಿದುಬರುತ್ತದೆ. ಇವೆಲ್ಲದರಿಂದ ಸಿದ್ಧವಾಗುವದೇನೆಂದರೆ ಯವನರೆಂದು ಹೆಸರು-ಗೊಂಡಿದ್ದ ವಿದೇಶಿಯರೂ ಕೂಡ ಕ್ರಿ. ಪೂ. ೨ ನೆಯ ಶತಮಾನದಷ್ಟು ಹಿಂದೆಯೇ ಶೈವಮತವನ್ನೇ ತಮ್ಮ ಮತವನ್ನಾಗಿ ಅಂಗೀಕರಿಸಿದ್ದರೆಂದೂ ಮಾನವಾಕಾರದ ಶಿವನ ಪೂಜೆ ಜನರಲ್ಲಿ ಬಳಕೆಯಲ್ಲಿ ಇತ್ತೆಂದೂ ಸಿದ್ಧವಾಗುತ್ತದೆ. ಮತ್ತು ಮುಂಚಿನ ಕಾಲಕ್ಕೆ ಸೇರಿದ್ದೆಂದು ಗೊತ್ತುಮಾಡಿರುವ ಒಂದು ನಾಣ್ಯದಲ್ಲಿ ಪೀಠದ ಮೇಲೆ ಸ್ಥಾಪಿತವಾಗಿರುವ ಲಿಂಗದ ಆಕೃತಿ ಇದೆ. ಈ ಲಿಂಗವು ಸುಮಾರು ಕ್ರಿ. ಪೂ. ೩ ನೇ ಶತಮಾನದ್ದೆಂದು ಟಿ. ಎ. ಗೋಪಿನಾಥರಾವ್ ನಿರ್ಧರಿಸಿದ್ದಾರೆ. ಅದಕ್ಕೂ ಹಿಂದಿನ ಕಾಲಕ್ಕೆ ಸೇರಿದ ಎಷ್ಟೋ ಲಿಂಗಗಳೂ ಮ್ಯೂಸಿಯಂನಲ್ಲಿ ಈಗಲೂ ನೋಡಲು ಸಿಗುತ್ತವೆ. ಕ್ರಿ. ಶ. ೭ ನೇ ಶತಮಾನದ್ದೆಂದು ಹೇಳಲಾದ ಶಾಸನದಲ್ಲಿ ವಾಕಾಟಕರೊಡನೆ ವಿವಾಹ ಸಂಬಂಧ ಮಾಡಿ-ಕೊಂಡಿದ್ದ ಭರಶಿವರು ಶಿವನ ಅನುಗ್ರಹದಿಂದ ತಮಗೆ ರಾಜ್ಯ ದೊರೆಯಿತೆಂದೂ ಶಿವನ ಚಿಹ್ನೆಯಿಂದ ಲಿಂಗವನ್ನು ತಾವು ತೋಳುಗಳಲ್ಲಿ ಧರಿಸುತ್ತಿದ್ದರೆಂದೂ ಹೇಳಿಕೊಳ್ಳುತ್ತಾರೆ. ಇದರಿಂದ ಕ್ರಿ. ಪೂ. ಮೂರನೇ ಶತಮಾನದಿಂದಲೂ ಭಾರತದಲ್ಲೆಲ್ಲಾ ಲಿಂಗಪೂಜೆಯು ಪ್ರಚಾರದಲ್ಲಿದೆಯೆಂಬುದನ್ನೂ ಈ ನಾಣ್ಯ ಮತ್ತು ಶಾಸನಗಳು ಸಿದ್ಧಮಾಡಿ ಕೊಡುತ್ತವೆ.

ಹೀಗೆ ಶಿವಪೂಜೆಯು ಲಿಂಗರೂಪದಲ್ಲಿ ಮತ್ತು ಮೂರ್ತಿರೂಪದಲ್ಲಿ ಕ್ರಿ. ಪೂ. ಕಾಲದಿಂದಲೂ ಭಾರತದಲ್ಲಿ ಜನಪ್ರಿಯವಾಗಿತ್ತೆಂದು ಸ್ಪಷ್ಟವಾಗುತ್ತದೆ. ಐತಿಹಾಸಿಕ ಹಿನ್ನಲೆಗಳನ್ನು ಸೂಚಿಸುವ ರಾಮಾಯಣ ಮಹಾಭಾರತಗಳು, ವೇದಗಳು, ಪುರಾಣಗಳು ಆಗಮಗಳು, ಉಪನಿಷತ್ತುಗಳು ವೀರಶೈವ ಮತದ ಸನಾತನತ್ವಕ್ಕೆ ಸ್ಪಷ್ಟವಾದ ಉಲ್ಲೇಖನಗಳಾಗಿವೆ. ಇವು ದ್ವಾಪರ ಯುಗದ ಧರ್ಮಗಳನ್ನು ಕೂಡ ಸ್ಪಷ್ಟವಾಗಿ ಪ್ರತಿ-ಬಿಂಬಿಸುತ್ತವೆ. ರಾಮಾಯಣ ಕಾಲದ ರಾವಣನು ತನ್ನ ತಾಯಿಯ ಲಿಂಗಪೂಜೆಗೆ ಶಿವನ ಪ್ರಾಣಲಿಂಗ-ವನ್ನೇ ತಂದುಕೊಡಲು ಘೋರ ತಪಸ್ಸನ್ನು ಮಾಡಿ ಶಿವನ ಅನುಗ್ರಹದಿಂದ ಪಡೆದುಕೊಂಡು ಬರುವಾಗ ಸಾಧ್ಯವಾಗದೆ ಗೋಕರ್ಣದಲ್ಲಿಯೇ ಭೂಮಿಯಲ್ಲಿ ಸ್ಥಾಪಿತವಾಗಿ ಮಹಾಬಲೇಶ್ವರ ನಾಮದಿಂದ ಪ್ರಸಿದ್ಧಿ ಹೊಂದಿರುವ ವಿಷಯ ಇಂದಿಗೂ ಜನವಾಡಿಕೆಯಲ್ಲಿದೆ. ಭಾರತದ ಇತರ ಭಾಗಗಳಲ್ಲಿ ಆಳುತ್ತಿದ್ದ ಗುಪ್ತರು, ಭರಶಿವರು, ವಾಕಾಟಕರು, ತ್ರೈಕೂಟಕರು ಈ ಆದಿ-ಕಾಲದ ರಾಜವಂಶಗಳು ಮತ್ತು ಕರ್ನಾಟಕದಲ್ಲಿ ಧಾರವಾಡ ಜಿಲ್ಲೆಯ ಗಡುಗಿನಲ್ಲಿ ಒಂದು ಭವ್ಯವಾದ ಶಿಲಾಮಯ ದೇವಾಲಯವಿದೆ. ಅಲ್ಲಿ ತ್ರಿಕೂಟೇಶ್ವರ ಎಂಬ ಲಿಂಗವು ಈಗಲೂ ವಿರಾಜಮಾನವಾಗಿದೆ. ಶಾತವಾಹನರು, ಪಲ್ಲವರು ಕದಂಬರು, ಆಳುತ್ತಿದ್ದ ಕಾಲದಲ್ಲಿ ಶೈವ ಮತಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಡುತ್ತಿದ್ದು ಶೈವಮತವು ಸರ್ವಪ್ರಧಾನವಾಗಿತ್ತೆಂದು ಬೃಹತ್ಕಥಾ ಪರಿತ್ಯಾಗದಿಂದ ತಿಳಿದುಬರುತ್ತದೆ. ರಾಮಾಯಣ ಕಾಲದಲ್ಲಿದ್ದ ಅಗಸ್ತ್ಯರು ವೈಯಾಕರಣ ಭಾಷ್ಯವನ್ನು ರಚಿಸಿದ್ದರೆಂದು ಶ್ರೀಕರ ಭಾಷ್ಯದ ಕರ್ತೃ ಶ್ರೀಪತಿ ಪಂಡಿತರು ಸೋದಾಹರಣಪೂರ್ವಕ ವಿವರಿಸಿದ್ದಾರೆ. ಆದರೆ ಅವರ ಕೃತಿ ಅಸ್ತಿತ್ವದಲ್ಲಿಲ್ಲ. ಮತ್ತು ರೇಣುಕ ಭಗವತ್ಪಾದರ ಶಿವಸಿದ್ಧಾಂತೋಪ-ದೇಶದಿಂದ ಶಿವಭಕ್ತಿನಿಷ್ಠೆಯನ್ನು ಜಗತ್ತಿನಲ್ಲಿ

ಬೆಳೆಸಿದುದು ಅದ್ಭುತ ಸಾಧನೆಯಾಗಿದೆ. ಇಂತಹ ಮಹನೀಯರ ಮಾರ್ಗದರ್ಶನದಲ್ಲಿ ಅನೇಕ ಶಿವಶರಣರು ನಡೆದುಕೊಂಡು ಭರತಭೂಮಿಯನ್ನು ಪಾವನವನ್ನಾಗಿ ಮಾಡಿದ್ದಾರೆ. ಸುಮಾರು ೫ ನೇ ಶತಮಾನದಲ್ಲಿ ಶಿರುತ್ತುಂಡನೆಂಬ ಶೈವ ಶರಣನು ಇದ್ದನೆಂದು ತಿಳಿಯುತ್ತದೆ. ಚೋಳರು, ಪಲ್ಲವರು ಮೊದಲಾದವರು ಶೈವಧರ್ಮಾನುಯಾಯಿಗಳಾಗಿದ್ದರೆಂದು ಐತಿಹಾಸಿಕ ಮೂಲದಿಂದ ತಿಳಿದುಬರುತ್ತದೆ. ಅತಿ ಪುರಾತನವೆಂದು ಹೇಳಲಾದ ತಾಳಗುಂದ ಶಾಸನವು "ನಮಃಶಿವಾಯ" ಎಂದು ಪ್ರಾರಂಭವಾಗಿರುವದು ಗೋಚರವಾಗುತ್ತದೆ. ಬಾದಾಮಿಪಟ್ಟ ಶಿಸವೊಳಲು, ಮಹಾಕೂಟ, ಐಹೊಳೆ ಮುಂತಾದವುಗಳಲ್ಲಿ ಶೈವಮತವು ವಿಶೇಷ ಜನಪ್ರಿಯವಾಗಿತ್ತೆಂದು ಬೇಕಾದಷ್ಟು ಸಾಕ್ಷಿಗಳಿವೆ. ಅಥರ್ವಶಿರೋಪನಿಷತ್ಪ್ರತಿಪಾದಿತವಾದ ಪಾಶುಪತ ಪಂಥವು ರುದ್ರನಿಂದುಪದೇಶಿಸಲ್ಪಟ್ಟು ವರ್ಣಾಶ್ರಮ ಧರ್ಮಕ್ಕೆ ಅನುಗುಣವಾಗಿತ್ತೆಂದು ಮಹಾಭಾರತದಲ್ಲೇ ಹೇಳಿದೆ. ಈ ಪಂಥದಿಂದಲೇ ನಾನಾ ಪಂಥಗಳು ಬೆಳೆದವೆಂದೂ, ನ್ಯಾಯ ವೈಶೇಷಿಕಯೋಗ ದರ್ಶನಗಳು ಕವಲೊಡೆದ ಶಾಖೆಗಳೆಂದು ಉಪನಿಷತ್ತು ಮಹಾಭಾರತಗಳಿಂದ ತಿಳಿಯುತ್ತದೆ.ಈ ಶೈವಪಂಥಗಳಲ್ಲಿ ಲಾಬಹಳ ಹಳೆಯದೆಂದು ಹೇಳಲಾದ ಲಕುಲೀಶ ಪಾಶುಪತವು ತನ್ನದೇ ಆದ ತತ್ವಗಳನ್ನು ಒಳಗೊಂಡಿರುವುದು ತೋರುತ್ತದೆ. ಹಾಗೂ ಇದು ಕರ್ನಾಟಕದಲ್ಲಿ ಜನಪ್ರಿಯವಾದ ಶೈವಮತವಾಗಿತ್ತು. ಆ ಬಗ್ಗೆ ೬ ನೇ ಶತಮಾನದಿಂದ ೧೫ ನೇ ಶತಮಾನದವರೆಗೆ ಬೇಕಾದಷ್ಟು ಶಾಸನಾಧಾರಗಳು ದೊರೆತಿವೆ. ಈ ಪಂಥಗಳು ಪ್ರಧಾನ ಆಚಾರ್ಯರುಗಳನ್ನು ಹೊಂದಿದ್ದವೆಂದು ಗೊತ್ತಾಗುತ್ತದೆ. ಇಂಥವರನ್ನು ವಿಜಯನಗರ ಅರಸರವರೆಗೂ ಎಲ್ಲಾ ರಾಜ್ಯ ವಂಶಗಳ ದೊರೆಗಳು ಗೌರವಿಸಿ ಆಶ್ರಯ ನೀಡುತ್ತಿದ್ದರು. ಶಾಸನಗಳಲ್ಲಿ ;ಇವರನ್ನು ;ರಾಜಗುರುಗಳೆಂದು ವರ್ಣಿಸಿದ್ದಾರೆ. ಇಂದು ವೀರಶೈವ ಮತ ಸ್ಥಾಪನಾಚಾರ್ಯರಲ್ಲೊಬ್ಬರಾದ ಕೇದಾರ ಪೀಠಾಧೀಶ್ವರರನ್ನು 'ರಾವಲ್' ಎಂಬ ಪದವಿಯಿಂದ ಗೌರವಿಸುತ್ತಿರುವದನ್ನು ನೋಡಬಹುದು. ಆ ಪೀಠದ ಮೂಲಗುರುಗಳಾದ ಏಕೋರಾಮ ಭಗವತ್ಪಾದರು ಕೂಡ ವೀರಶೈವ ಭಾಷ್ಯವನ್ನು ರಚಿಸಿರುವರೆಂಬುದಾಗಿ ಶ್ರೀಕರ ಭಾಷ್ಯಕಾರರು ಅನುಮೋದಿಸಿದ್ದಾರೆ. ಇವರೆಲ್ಲ ಈ ಮತಗಳ ಮಹಾಚಾರ್ಯರೆಂದು ಪ್ರಸಿದ್ಧರಾಗಿದ್ದಾರೆ. ಈ ಮಹಾಚಾರ್ಯರ ಮಾರ್ಗದರ್ಶನವನ್ನು ಇಲ್ಲಿಯವರೆವಿಗೂ ಮೈಗೂಡಿಸಿಕೊಂಡು ಬಂದ ಅನೇಕ ಶಿವಶರಣರು ಆಗಿ ಹೋಗಿದ್ದಾರೆ. ದೇವರದಾಸಿಮಯ್ಯ, ಮೊಗ್ಗೆಯ ಮಾಯಿದೇವ, ಬಸವಣ್ಣ, ಅಲ್ಲಮಪ್ರಭು ಮೊದಲಾದವರು ಅಕ್ಕಮಹಾದೇವಿ ಮೊದಲಾದ ಮಹಿಳಾ ಶರಣೆಯರು ಭಾರತಿಯ ಜನರಿಗೆ ಚಿರಪರಿಚಿತರಾಗಿದ್ದಾರೆ.

ಕೆಲವರು ಬಸವಣ್ಣನವರಿಂದಲೇ ವೀರಶೈವ ಮತವು ಅಸ್ತಿತ್ವಕ್ಕೆ ಬಂದಿತೆಂದು ಅವರೇ ಆದಿಪ್ರವರ್ತಕರೆಂದು ಇಲ್ಲದ ಸಲ್ಲದ ದುರಾಭಿಪ್ರಾಯವನ್ನು ಸಮಾಜದಲ್ಲಿ ಬೆಳೆಸುತ್ತಿದ್ದಾರೆ. ಇದು ವ್ಯರ್ಥ ಪ್ರಯಾಸವಾಗದೆ ಇರದು. ಬಸವಣ್ಣನವರು ಹೇಳುವಂತೆ "ಆದ್ಯರ ವಚನ ಪರುಷ ಕಂಡಯ್ಯ" ಎಂದು ಹೇಳುವಲ್ಲಿ ಯಾರೂ ಸಮಂಜಸವಾದ ಅರ್ಥವನ್ನು ಮಾಡಿಲ್ಲ. ಆದ್ಯರೆಂದರೆ ಪರಮಾರಾಧ್ಯರಾದ ಜಗದ್ಗುರುಗಳೇ ಆಗಿದ್ದಾರೆ. ಈ ದೃಷ್ಟಿಯಿಂದ ವೀರಶೈವ ಮತವು ಸನಾತನ ಮತವೆಂದು ಕರೆಯಲು ಯೋಗ್ಯವಾಗಿರುತ್ತದೆ. ಇನ್ನೂ ಹಲವಾರು ಕಾರಣಗಳನ್ನು ಕೊಡಬಹುದು. ಗ್ರಂಥ ವಿಸ್ತಾರ ಭಯದಿಂದ ಸಂಕ್ಷೇಪಗೊಳಿಸಲಾಗಿದೆ. ಒಟ್ಟಿನಲ್ಲಿ ವೀರಶೈವ ಮತವು ೧೨ನೇ ಶತಮಾನದಿಂದೀಚಿನದು ಎಂಬುದನ್ನು ಮತ್ತು ಆಚಾರ್ಯರಿಂದ ಸ್ಥಾಪಿತವಲ್ಲವೆಂಬುದನ್ನು ಸಾಧಾರಗಳಿಂದ ಖಂಡಿಸಬಹುದಾಗಿದೆ. ಹೀಗೆ ವೀರಶೈವ ಮತವು ಆದಿವಾಸಿಗಳಿಂದ ಆಧುನಿಕ ಜನಾಂಗದವರೆಗೂ

ತನ್ನ ಸಂಸ್ಕೃತಿಯನ್ನು ವಿವಿಧ ರೀತಿಯಲ್ಲಿ ಮುಂದುವರಿಸಿಕೊಂಡು ಬಂದಿರುವದನ್ನು ನೋಡಿದರೆ ಭಯಂಕರವಾದ ಕಾಡುಸಂಸ್ಕೃತನಾಡಾಗಿ ಮಾರ್ಪಟ್ಟಂತ್ತಿದೆ. ದೇಶದಲ್ಲಿನ ಯಾವುದೇ ಸಂಸ್ಕೃತಿಯು ತನ್ನ ಉಜ್ವಲ ಪರಂಪರೆಯನ್ನು ಬೆಳಗಿಸಬೇಕಾಗಿದ್ದಲ್ಲಿ ಆಯಾಮತದ ಚೌಕಟ್ಟಿನಲ್ಲಿರುವ ಸುವ್ಯವಸ್ಥಿತ ಸಾಮಾಜಿಕ ಪರಿಸರವೇ ಮುಖ್ಯ ಕಾರಣವೆಂದು ತೋರುತ್ತದೆ. ಈ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಬಹುಹಿಂದೆಯೇ ಅರಿಸ್ಟಾಟಲ್‌ನು ಒಂದು ಹೇಳಿಕೆಯನ್ನು ಕೊಟ್ಟಿದ್ದಾನೆ. ಏನಂದರೆ ಮಾನವ ಸಮಾಜ ಜೀವಿ. ಮತ್ತು ಒಂದು ಸಾಮಾನ್ಯ ಜೀವನದಲ್ಲಿ ಪಾಲುಗೊಳ್ಳಲಾರದವನು ದೇವರಾಗಿರಬೇಕು, ಇಲ್ಲವೇ ಪ್ರಾಣಿಯಾಗಿರಬೇಕು ಎಂಬುದಾಗಿ ಹೇಳಿ ಸಮಾಜ ಇಲ್ಲದಿದ್ದರೆ, ವ್ಯಕ್ತಿ ಬಾಳಲಾರ, ಬೆಳೆಯಲಾರ ಮತ್ತು ಬೆಳಗಲಾರ ಎಂಬ ಸತ್ಯವನ್ನು ಬಹು ಸುಂದರವಾಗಿ ವಿವರಿಸಿದ್ದಾರೆ. ಪರಿಸರಕ್ಕೆ ಪ್ರತಿಕ್ರಿಯೆ ತೋರುವ ಸಹಜ ಪ್ರವೃತ್ತಿ ಮತ್ತು ಅನುಭವಗಳನ್ನು ಸಂಕೇತ ರೂಪದಲ್ಲಿ ವ್ಯಕ್ತಪಡಿಸುವ ಹಾಗೂ ವ್ಯವಸ್ಥಿತಗೊಳಿಸುವ ಸಾಮರ್ಥ್ಯವನ್ನು ಒಳಗೊಂಡಿರುವ ಅವನ ಮೂಲಭೂತ ಸ್ವಭಾವ ಸಮಾಜದಲ್ಲೇ ಮಾನವ ಸ್ವರೂಪವಾಗಿ ಮಾರ್ಪಡುತ್ತದೆ. ಅವನ ವ್ಯಕ್ತಿತ್ವ ಅರಳುವುದು. ಸಾಮಾಜಿಕ ಪರಿಸರದಲ್ಲೇ ಇತರರೊಂದಿಗೆ ನಿರಂತರ ಸಂಪರ್ಕವಿಲ್ಲದಿದ್ದರೆ ಮಾನವನಿಗೆ ಪ್ರಾಣಿಗಳಿಂದ ತನ್ನನ್ನು ಪ್ರತ್ಯೇಕಿಸಿ ವಿಕ್ರಮಜೀವಿಯನ್ನಾಗಿಸುವ ಗುರುಲಕ್ಷಣಗಳನ್ನು ಬೆಳೆಸಿಕೊಳ್ಳುವುದು ಸಾಧ್ಯವೇ ಇಲ್ಲ. ಇದು ಸಮಾಜದಲ್ಲಿ ಮಾತ್ರ ಸಾಧ್ಯ. ಆದುದರಿಂದ "ಸಮೂಹ ಸಂಘಟಿತ" ಸಂಸ್ಕೃತಿಯಲ್ಲಿ ಪಾಲುಗೊಳ್ಳುವುದರ ಮೂಲಕ ಮಾನವ ವ್ಯಕ್ತಿಯಾಗುತ್ತಾನೆ. ಸಮಾಜದಲ್ಲೇ ಒಂದು ಅಂತಸ್ತನ್ನುಳ್ಳ ಮನುಷ್ಯನೇ ವ್ಯಕ್ತಿ ಎಂಬುದಾಗಿ ವಿವರಿಸಲಾಗಿದೆ.

"ವಿದ್ಯಾ ಮಿತ್ರಂ ಪ್ರವಾಸೇಷು, ಭಾರ್ಯಾ ಮಿತ್ರಂ ಗೃಹೇಷುಚ
ವ್ಯಥಿತಸ್ಯ ಔಷಧಂ ಮಿತ್ರಂ ಧರ್ಮಃ ಮಿತ್ರಂ ಮೃತಸ್ಯಚ"

ಎನ್ನುವ ಆರ್ಯವಾಣಿಯಂತೆ ಸಮಾಜ ಹುಟ್ಟಿನಿಂದ ಸಾವಿನವರೆಗೆ ಮಾನವನ ಮೇಲೆ ನಿರಂತರ ಪ್ರಭಾವವನ್ನು ಬೀರಿ ವ್ಯಕ್ತಿತ್ವವನ್ನು ರೂಪಿಸುತ್ತದೆ. ಇಲ್ಲಿ ಒಂದು ಮಾತನ್ನು ಗಮನಿಸಬೇಕಾಗಿದೆ — ಕುಂಬಾರ ಚಕ್ರದ ಮೇಲೆ ನಿಷ್ಕ್ರಿಯವಾದ ರೀತಿಯಲ್ಲಿ ಮಡಿಕೆ ರೂಪುಗೊಳ್ಳುವ ತರದಲ್ಲಿ ಸಮಾಜ ಯಾವುದೇ ವ್ಯಕ್ತಿಯನ್ನು ರೂಪಿಸುವುದಿಲ್ಲ. ಅವನು ತನ್ನದೇ ಆದ ಸ್ವಭಾವವನ್ನು ಹೊಂದಿರುವ ಸ್ವತಂತ್ರ ಜೀವಿ. ಅವನ ವ್ಯಕ್ತಿತ್ವ ಸಮಾಜೀಕರಣ ಹಾಗೂ ವ್ಯಕ್ತೀಕರಣ ಪ್ರಕ್ರಿಯೆಗಳ ಫಲ ಎಂದು ಹೇಳಬಹುದು. ಆದುದರಿಂದ ವೀರಶೈವ ಸಮಾಜ ಬಹು ಪುರಾತನ ಕಾಲದಿಂದಲೂ ಮಾನವ ಪ್ರಗತಿಗೆ ಅವಶ್ಯಕವಾದ ಸಾಮಾಜಿಕ ಪರಿಸರವನ್ನು ರಚಿಸಿ ಉನ್ನತಮಟ್ಟದ ವ್ಯಕ್ತಿತ್ವವನ್ನು ಹೊಂದಲು ಸಹಾಯಕವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಈ ದೃಷ್ಟಿಯಲ್ಲಿ ವೀರಶೈವ ಸಮಾಜವು ಇತರೇ ಸಮಾಜಗಳಂತೆ ಕುಟುಂಬ ಹಾಗೂ ಬಂಧುತ್ವ ಮತ್ತು ವಿವಾಹಗಳ ಮೂಲಕ ಸಾಮಾಜಿಕ ಸಂಬಂಧಗಳನ್ನು ಬೆಳೆಸುವುದರಿಂದಲೂ ಮತ್ತು ರಾಜಕೀಯ ಹಾಗೂ ಶಾಸನಬದ್ಧ ಸಂಸ್ಥೆಗಳು ಶೈಕ್ಷಣಿಕ ಮತ್ತು ವೈಜ್ಞಾನಿಕ ಸಂಸ್ಥೆಗಳು, ಮನೋರಂಜಕ ಹಾಗೂ ಕಲ್ಯಾಣ ಸಾಧಕ ಸಂಸ್ಥೆಗಳು ಸೌಂದರ್ಯಾತ್ಮಕ ಅಥವಾ ಕಲಾತ್ಮಕವಾದ ಸಂಸ್ಥೆಗಳು ಮುಂತಾದ ಪ್ರಧಾನವಾದ ಸಾಮಾಜಿಕ ಸಂಸ್ಥೆಗಳಿಂದ ವ್ಯಕ್ತಿತ್ವವನ್ನು, ಸಾಮಾಜಿಕ ಸಮೂಹಗಳನ್ನು ಆಚಾರಾದಿ ಲೋಕನೀತಿಗಳನ್ನು ರೂಪಿಸುವುದರಮೂಲಕ ಮಾನವನ ಸಂಸ್ಕೃತಿ ಮತ್ತು ನಾಗರಿಕತೆಯನ್ನು ಪ್ರಕಾಶಗೊಳಿಸುತ್ತಾ ವಿಶ್ವಧರ್ಮವೆಂದು ವಿಖ್ಯಾತಗೊಂಡಿರುತ್ತದೆ. ಪ್ರಯುಕ್ತ ಅನಂತ ಸಂಘ ಸಂಸ್ಥೆಗಳ ಮೂಲಕ ವಿವಿಧ ರೀತಿಯ ಸಾಮಾಜಿಕ ಪರಿಸರವನ್ನು ರಚಿಸಿ ವೀರಶೈವ ಧರ್ಮವು ಪರಿಪಾಲನಾತ್ಮಕ ಕ್ರಿಯೆಯನ್ನು ನ್ಯಾಯಬದ್ಧವಾಗಿ ಕಾಪಾಡಿಕೊಂಡು ಬಂದಿರುತ್ತದೆ. ಇದು ಲೋಕದಲ್ಲಿಯ ಸಕಲ ಮಾನವ

ಜೀವಿಗಳಿಗೆ ಕಲ್ಯಾಣವನ್ನೇ ಬಯಸುವುದೇ ಮುಖ್ಯ ಉದ್ದೇಶವನ್ನಾಗಿ ಮಾಡಿಕೊಂಡಿದೆ. ಬಸವಣ್ಣನವರು ಹೇಳುವ —

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಅನ್ಯರಿಗೆ ಅಸಹ್ಯಪಡಬೇಡ, ಇದಿರು ಹಳಿಯಲು ಬೇಡ, ತನ್ನ ಬಣ್ಣಿಸಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗನ ಶರಣರನೊಲಿಸುವ ಪರಿ."

ಎಂಬ ವಚನವು ಜಗದ್ಗುರು ರೇಣುಕ ಭಗವತ್ಪಾದರು ಸಿದ್ಧಾಂತ ಶಿಖಾಮಣಿಯಲ್ಲಿ ಅಪ್ಪಣೆ ಕೊಡಿಸಿರುವ—

"ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾ ದಯಾಕ್ಷಮಾ ದಾನಂ ಪೂಜಾ ಜಪೋಧ್ಯಾನಂ ಇತಿ ಧರ್ಮಸ್ಯ ಸಂಗ್ರಹಃ

ಎಂಬ ವಾಕ್ಯವನ್ನೇ ಆಧರಿಸಿ ಬಂದಿರುತ್ತದೆ ಎನ್ನುವುದು ಗಮನಾರ್ಹವಾದ ವಿಷಯ. ಆದುದರಿಂದ ವೀರಶೈವ ಧರ್ಮ ಸಾಕ್ಷಾತ್ ಶಿವಧರ್ಮವೇ ಆಗಿರುವುದರಿಂದ ಸಮಸ್ತ ಮಾನವಕೋಟಿಗೆ ಕಲ್ಯಾಣವನ್ನು ಬಯಸುವುದು ವೀರಶೈವಧರ್ಮದ ಪ್ರಮುಖ ಗುಣವಾಗಿರುತ್ತದೆ. ಇಂತಹ ಶಿವಧರ್ಮವನ್ನು ಜಗತ್ತಿನಲ್ಲಿ ಪ್ರಸಾರಗೊಳಿಸಲು ಶಿವನು ತನ್ನ ಆಸ್ಥಾನ ಗಣಾಧೀಶ್ವರರನ್ನು ಅಯೋನಿಜರನ್ನಾಗಿ ಮತಸ್ಥಾಪನಾಚಾರ್ಯರೆಂಬಭಿಧಾನದಿಂದ ಶ್ರೀಶೈಲಾದಿ ಕ್ಷೇತ್ರಗಳಲ್ಲಿ ಪ್ರಸಿದ್ಧವಾದ ಜ್ಯೋತಿರ್ಲಿನ ಗರ್ಭಾವಿರ್ಭೂತರಾಗುವಂತೆ ಆಜ್ಞಾಪಿಸಿ ಕಳಿಸಿರುವ ವಿಚಾರ ಶಿವೋಕ್ತಿಗಳೇ ಆದ ಆಗಮಾದಿಗಳಲ್ಲಿ ವಿದಿತವಾಗುತ್ತದೆ. ಏಕೆಂದರೆ ಶಿವಧರ್ಮವನ್ನು ಜನಸಾಮಾನ್ಯರು ಅರಿಯುವುದು ಸಾಧ್ಯವಿಲ್ಲ. ಆದಕ್ಕೆ ಶ್ರೀಪತಿ ಪಂಡಿತರು —

"ಶಿವಸ್ಯ ತತ್ವಂ ಶಿವಶಿವ ವೇತ್ತಿ ನಂದೀಶ ವಿಷ್ಣುರ್ನ ಗಜಾರುನಾರಃ। ಶಿವಪ್ರಸಾದಾಚ್ಛಿವ ತತ್ವಮಾಹುಃ ತೇಭ್ಯೋ ನಮಃ ಶಂಕರ ತತ್ವ ವಿದ್ಭ್ಯಃ।

ಅಂದರೆ ಶಿವನ ತತ್ವಗಳನ್ನು ಶಿವನೇ ಬಲ್ಲ. ಅನ್ಯರಾದ ನಂದಿ ವಿಷ್ಣುವೇ ಮೊದಲಾದವರು ಅವನ ಚರಣಸನ್ನಿಧಿಯಲ್ಲಿದ್ದರೂ ಶಿವತತ್ವಗಳ ಜ್ಞಾನ ಆಗಲಿಲ್ಲ. ಆದರೆ ಶಿವನ ಪ್ರಸಾದದಿಂದ ಅಂದರೆ 'ಪ್ರಸನ್ನ ತಾಸ್ತು ಪ್ರಸಾದಃ' ಅವನ ಪ್ರಸನ್ನತೆಯ ಮೂಲಕವೇ ಅರಿಯಲು ಸಾಧ್ಯವಾಗುವದರಿಂದ ಆ ಪ್ರಸನ್ನತೆಗೊಳಗಾದವರು ಪಂಚಗಣಾಧೀಶ್ವರರು ಮಾತ್ರ. ಆದುದರಿಂದ ಅವರು ಶಿವತತ್ವ ವಿವೇಕವುಳ್ಳವರಾದ ಪ್ರಯುಕ್ತ ಶಿವರೂಪಲಿಂಗದಿಂದಲೇ ಅವರ ಜನನವಾಗಿ ಶಿವವಾಣಿಯಿಂದಲೇ ಅನೇಕ ಮಹರ್ಷಿಗಳಿಗೆ ತತ್ವೋಪದೇಶಮಾಡಿ ನಿತ್ಯ ಕ್ರಿಯಾದಿಗಳಲ್ಲಿ ನಿರತರಾಗುವಂತೆ ಮಾಡಿದ್ದಾರೆ. ಅವರು ಹಾಕಿಕೊಟ್ಟ ಪಂಕ್ತಿ ಬಹು ಉನ್ನತಮಟ್ಟದ್ದಾಗಿರುತ್ತದೆ. ಮತ್ತು ಸಾಮಾಜಿಕ ವ್ಯವಸ್ಥೆಯು ಸುಭದ್ರವಾಗಿದೆ. ಪ್ರತಿಯೊಂದು ಮತವು ಅಬಾಧಿತವಾಗಿ ನಡೆಯಲೆಂಬ ಉದ್ದೇಶದಿಂದ ಆಯಾ ಮತಸ್ಥಾಪಕರು ಧರ್ಮಕ್ಕೆ ಅನುಗುಣವಾಗಿ ಅನೇಕ ಕಟ್ಟಳೆಗಳನ್ನು ಹಾಕಿಕೊಟ್ಟಿದ್ದಾರೆ. ಧರ್ಮರಕ್ಷಕರು ಬಂಧುರರಾಗಿದ್ದರೆ ಯಾವುದೇ ಧರ್ಮವು ಸುಸೂತ್ರವಾಗಿ ಸಾಗುತ್ತದೆ. ಅವರು ಸುಧಾರಿಸದಿದ್ದರೆ ಯಾವ ಧರ್ಮವೂ ಸುಧಾರಣಾಶಿಖರಕ್ಕೆ ಏರಲಾರದು. ಇದರಂತೆಯೇ ನಮ್ಮ ಮತಸ್ಥಾಪಕರಾದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಪ್ರತಿ ಹಳ್ಳಿಗೂ ಕೂಡ ಮಠ, ಮಠಪತ್ತಿ, ಸ್ಥಾವರ ಗಣಾರಿ, ಕೌಮಾರಾದಿಗಳನ್ನು ಧರ್ಮಸುಧಾರಣೆಯ ದೆಶೆಯಿಂದ ನಿಯಮಿಸಿರುತ್ತಾರೆ.

ಅಲ್ಲದೆ ಸಂಚಾರ ಕ್ರಮದಿಂದ ಘಂಟೆ ಕಾಯಕ, ಗದ್ದಿಗೆ ಕಾಯಕ, ಮುಳ್ಳು ಹಾವಿಗೆ ಕಾಯಕ, ಮಂಗಲ ಕಾಯಕ, ಇತ್ಯಾದಿಯವರನ್ನು ನೇಮಿಸಿರುತ್ತಾರೆ. ಇವರ ಮೇಲ್ವಿಚಾರಣೆಗೆ ಅಲ್ಲಲ್ಲಿ ಪೀಠಗಳ ಶಾಖಾಮಠಗಳನ್ನು ಸ್ಥಾಪಿಸಿ ಪಟ್ಟಾಚರಾಧಿಕಾರಿಗಳನ್ನು ನಿಯಮಿಸಿ ಇವರನ್ನು ವಿಚಾರಿಸಲಿಕ್ಕೆ ಗುರುಸಾರ್ವಭೌಮರಾದ ಜಗದ್ಗುರುಗಳು ತಾವೇ ಇರುತ್ತಾರೆ. ಈ ಎಲ್ಲ

ಮಹನೀಯರುಗಳು ತಮ್ಮ ತಮ್ಮ ಕರ್ತವ್ಯದ ಹೊಣೆಯನ್ನು ಅರಿತುಕೊಂಡು ಧರ್ಮ ಸುಧಾರಣೆಗಾಗಿ ಹೋರಾಡಿದರೆ ಧರ್ಮವು ಕ್ಷಿಪ್ರದಲ್ಲಿಯೇ ಸುಧಾರಿಸುವದರಲ್ಲಿ ಸಂಶಯವಿಲ್ಲ. ಇತ್ತೀಚೆಗೆ ವೀರಶೈವ ಧರ್ಮ ಹೇಗೆ ಸುಧಾರಿಸಿತು ಎನ್ನುವ ಪ್ರತಿಯೊಬ್ಬರ ಮನೋಂತರ್ಗತ ಪ್ರಶ್ನೆಗೆ ಉತ್ತರ ಕುಂಠಿತವಾಗಿದೆ ಎಂದರೆ ಆಶ್ಚರ್ಯವಾಗಬಹುದು. ಕಾರಣ ಮತ ಸುಧಾರಣೆಗೆ ನಿಯಮಿತರಾದ ಶಾಖಾ ಮಠಾಧಿಕಾರಿಗೂ ಎಲ್ಲಾ ಕಾಯಕದವರೂ ಕಲಿಯುಗದ ದೋಷಪೂರಿತಬುದ್ಧಿಯ ನ್ಯೂನ್ಯತೆಯಿಂದಾಗಿ ಗುರುಸಾರ್ವಭೌಮರಸ್ಥಾನವನ್ನು ಆಕ್ರಮಣಮಾಡುವ ದುರಾಭ್ಯಾಸದಿಂದ ಕೂಡಿರುತ್ತಾರೆ ಆದುದರಿಂದ ಮತ್ಯಕ್ರಮತಾಚರಣೆಗಳು ಸ್ತಬ್ಧವಾಗಿರುವವು. ಪ್ರಯುಕ್ತ ಪ್ರತಿಯೊಂದು ಕಾರ್ಯದವರು ತಾವು ಸುಧಾರಿಸಿ ನಮ್ಮ ಕರ್ತವ್ಯವೇನು ಎಂಬುದನ್ನು ಅರಿತು ಪೂರ್ವಾಚಾರ್ಯರಿಂದ ನಿಯಮಿಸಲ್ಪಟ್ಟ ಕಾರ್ಯದಲ್ಲಿ ಆಸಕ್ತರಾದರೆ ವೀರಶೈವ ಧರ್ಮ ಸುಧಾರಣೆಗೆ ತಡವಾಗುವುದೇ ? ಅಸ್ತು ಆದುದರಿಂದ ಧರ್ಮ ಸುಧಾರಕರು ವರ್ತಿಸುವ ಬಗೆಯನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಲಾಗುತ್ತದೆ.

ಕಾಯಕದಯ್ಯನವರ ಕರ್ತವ್ಯ–ಘಂಟೆಕಾರ್ಯದವನು ಪ್ರತಿಯೊಂದು ಹಳ್ಳಿಗೆ ಹೋಗಿ ಅಲ್ಲಿರುವ ಮಠದವರು, ಮಠಪತ್ತಿಯವರಿಂದ ಊರಿನ ಆಚಾರ ವಿಚಾರದ ಬಗ್ಗೆ ಮಾಹಿತಿತೆಗೆದುಕೊಂಡು ಆ ಊರಲ್ಲಿ ಏನೇನೂ ಸದಾಚಾರವಿಲ್ಲವೆಂದು ಕಂಡುಬಂದರೆ ಆಗ್ಗ ಈ ಘಂಟೆಕಾಯಕದವನು ಭಸ್ಮ, ರುದ್ರಾಕ್ಷಿ ಕಾಷಾಯಂಬರಾದಿಗಳಿಂದಲಂಕೃತನಾಗಿ ಸಿಂಹಾಸನಾಧಿಪತಿಗಳಿಂದ ದಯಪಾಲಿಸಲ್ಪಟ್ಟ ಆರು ಶಾಸನ ಸಮೇತ ಘಂಟೆಗಳೆರಡನ್ನು ಹಸ್ತಗಳಲ್ಲಿ ಹಿಡಿದು ಬಾರಿಸುತ್ತಾ "ಶ್ರೀ ಜಗದ್ಗುರು ರೇವಣಸಿದ್ಧೇಶ್ವರ ಪ್ರಭೋ ಹರಹರ" ಎಂದು ನುಡಿಯುತ್ತ ಊರ ತುಂಬೆಲ್ಲಾ ಸಂಚರಿಸಬೇಕು ಭಕ್ತರು ಬಂದು ಮಾತಾಡಿಸದ ಹೊರತು ಮಾತಾಡದೆ ಎಷ್ಟು ದಿವಸಗಳಾದರು ಕುಳಿತುಕೊಳ್ಳದೆ ಒಂದೇ ಸ್ಥಳದಲ್ಲಿ ನಿಂತುಕೊಳ್ಳದೆ ಮೇಲಿನ ವಾಕ್ಯವನ್ನು ನುಡಿಯುತ್ತಲೇ ಸಂಚರಿಸುತ್ತಿರಬೇಕು. ಅನಂತರ ಗ್ರಾಮಸ್ಥರು ಬಂದು ಕೈಜೋಡಿಸಿ ಸ್ವಾಮಿ ನಮ್ಮ ಅಪರಾಧಗಳಿದ್ದರೆ ಕ್ಷಮಿಸಬೇಕೆಂದು ಕೇಳಲು ನಿಮ್ಮೂರಲ್ಲಿ ವೀರಶೈವಾಚಾರಕ್ಕನುಸರಿಸಿ ಒಬ್ಬರೂ ವರ್ತಿಸುವದಿಲ್ಲ. ನೀವು ಆಷ್ಟಾವರಣಕ್ಕೆ ಸರಿಯಾಗಿ ವರ್ತಿಸುತ್ತೇವೆಂದು ವಚನ ಕೊಟ್ಟಹೊರತು ನಾನು ನನ್ನ ಕಾಯಕವನ್ನು ನಿಲ್ಲಿಸುವುದಿಲ್ಲವೆಂದು ಸ್ಪಷ್ಟವಾಗಿ ಹೇಳಬೇಕು. ಅವರು ಒಪ್ಪಿದ ನಂತರ ಮಠಕ್ಕೆ ಕರೆದೊಯ್ದು ವೀರಶೈವಾಚಾರ ಪದ್ಧತಿಯನ್ನು ಬೋಧಿಸಿದ ನಂತರ ಗ್ರಾಮದವರು ಕಾಯಕದಯ್ಯನನ್ನು ಭೋಜನ ಮಾಡಿಸಿ ದಕ್ಷಣೆಯನ್ನು ಕೊಡಬೇಕು. ಅದನ್ನು ತೆಗೆದುಕೊಂಡು ಮತ್ತೊಂದು ಗ್ರಾಮಕ್ಕೆ ಹೋಗಬೇಕು-

ಘಂಟೆ ಕಾಯಕದವನು ಹೋದ ಮೇಲೆ ಗದ್ದಿಗೆ ಕಾಯಕದವನು ಬರುವನು. ಈತನು ಆ ಊರಿನ ಅಯ್ಯನವರನ್ನು ವಿಚಾರಿಸಲು ಅವರು ಊರಲ್ಲಿ ಎರಡು ಓಣಿಗಳಿದ್ದು ಒಂದು ಸುಧಾರಿಸಿದೆ, ಇನ್ನೊಂದು ಸುಧಾರಿಸಿಲ್ಲ ಎನ್ನುವರು. ಆಗ ಕಾಯಕದಯ್ಯನು ಸುಧಾರಿಸಿದ ಓಣಿಯಲ್ಲಿ ಪ್ರಶಸ್ತ ಸ್ಥಳದಲ್ಲಿ ಗದ್ದುಗೆಯನ್ನು ಹಾಕಿ ಅದರ ಮೇಲೆ ಕುಳಿತು ಉಜ್ಜಯನಿ ಸದ್ಧರ್ಮ ಸಿಂಹಾಸನಾಧಿಪತಿಗಳಿಂದ ದಯಪಾಲಿಸಿದ ಆಜ್ಞಾ ಪತ್ರ ಸಮೇತ ಘಂಟೆಗಳನ್ನು ಬಾರಿಸುತ್ತಾ ಶ್ರೀ ಜಗದ್ಗುರು ಮರುಳಸಿದ್ದೇಶ್ವರಪ್ರಭೋ ಹರಹರ" ಎಂದು ನುಡಿಯುತ್ತ ಶಿವಭಕ್ತಿ ಪದಗಳಾದ ವಚನ ಹಾಡುಗಳನ್ನು ಹೇಳುತ್ತಲಿರುತ್ತಾನೆ. ಊರವರು ಬಂದು ಕಾರಣವನ್ನು ಕೇಳಲಾಗಿ ಹಿಂದೆ ಘಂಟೆ ಕಾರ್ಯದವರು ಬಂದಾಗ ನೀವು ಕೊಟ್ಟ ವಚನದ ಪ್ರಕಾರ ನಿಮ್ಮಲ್ಲಿ ಕೆಲವರು ಸುಧಾರಿಸಿಲ್ಲ. ಆದುದರಿಂದ

ನೀವು ಸುಧಾರಿಸುತ್ತೇವೆಂದು ಹೇಳದ ಹೊರತು ನನ್ನ ಕಾಯಕವನ್ನು ನಿಲ್ಲಿಸುವದಿಲ್ಲ ಎನ್ನುತ್ತಾನೆ. ಭಕ್ತರು ಒಪ್ಪಿಕೊಂಡ ಮೇಲೆ ಮಠಕ್ಕೆ ಕರೆದುಕೊಂಡು ವೀರಶೈವಾಚಾರವನ್ನು ಅರಿತು ಕಾಯಕದವರಿಗೆ ದಕ್ಷಣೆ ಕೊಡಬೇಕು. ಇವನು ಹೋದ ಒಂದು ತಿಂಗಳ ಮೇಲೆ ಮುಳ್ಳುಹಾವುಗೆ ಕಾಯಕದವನು ಬರುವನು. ಮಠದಯ್ಯನವರಿಂದ ಊರ ಪರಿಸ್ಥಿತಿ ತಿಳಿದುಕೊಂಡು ಸುಧಾರಿಸಿದ ಮನೆಗಳ ಮುಂದೆ ರುದ್ರವೇಷಧಾರಿಯಾಗಿ ಮುಳ್ಳುಹಾವುಗೆಯ ಮೇಲೆ ನಿಂತು ಕೇದಾರದ ವೈರಾಗ್ಯಸಿಂಹಾಸನಾಧಿಪತಿಗಳಿಂದ ಆಜ್ಞಪ್ತನಾಗಿರುವುದರಿಂದ " ಶ್ರೀ ಜಗದ್ಗುರು ಏಕೋರಾಮೇಶ್ವರಪ್ರಭೋ ಹರಹರ " ಎಂದು ನುಡಿಯುತ್ತಲೇ ನಿಲ್ಲಬೇಕು. ಮನೆಯವರು ಸದಾಚಾರದಿಂದ ನಡೆಯುತ್ತೇವೆಂದು ಹೇಳಿದ ನಂತರ ಮಠದಯ್ಯನವರಿಂದ ವೀರಶೈವ ಸದಾಚಾರವನ್ನೂ ಬೋಧಿಸಿದ ಮೇಲೆ ೧। ರೂ ದಕ್ಷಣೆ ಕೊಡಬೇಕು.

ನಂತರ ಒಂದು ತಿಂಗಳ ಮೇಲೆ ತೆಕ್ಕಿಕಾಯಕದವನು ಬರುವನು. ಮಠದಯ್ಯನವರಿಂದ ಊರ ಪರಿಸ್ಥಿತಿ ತಿಳಿದು ಯಾವ ಮನೆಯು ಸುಧಾರಿಸಿಲ್ಲವೋ ಆ ಮನೆಗೆ ಹೋಗಿ ಮನೆಯಲ್ಲಿಯ ಕಂಬಕ್ಕೆ ತೆಕ್ಕಿಬಡಿದು " ಶ್ರೀ ಜಗದ್ಗುರು ಪಂಡಿತಾರಾಧ್ಯೇಶ್ವರ ಪ್ರಭೋ ಹರಹರ " ಎನ್ನುತ್ತಾ ನಿಲ್ಲಬೇಕು. ಆ ಮನೆಯವರು ಸದಾಚಾರದಿಂದ ಇರಲು ಒಪ್ಪಿದ ಮೇಲೆ ಕಾಯಕ ಬಿಟ್ಟು ಭೋಜನ ಮಾಡಿದನಂತರ ದಕ್ಷಣೆಕೊಡಬೇಕು.

ಇವನು ಹೋದ ಮೇಲೆ ಕಾಶಿ ಜ್ಞಾನಸಿಂಹಾಸನಾಧೀಶ್ವರರಿಂದ ಆಜ್ಞಪ್ತನಾದ ಮಂಗಲಕಾಯಕದವನು ಬರುವನು. ಆ ಊರ ಮಠದಯ್ಯನವರಿಂದ ಸದಾಚಾರವನ್ನು ತಿಳಿದು ಕೈಯಲ್ಲಿ ಮಂಗಲಾರುತಿಯನ್ನು ಹಿಡಿದು ವೀರಶೈವರ ಮನೆಗೆ ಹೋಗಿ " ಶ್ರೀ ಜಗದ್ಗುರು ವಿಶ್ವಾರಾಧ್ಯೇಶ್ವರ ಪ್ರಭೋ ಹರಹರ " ಎನ್ನುತ್ತಾ ಮಂಗಲಾಶೀರ್ವಾದವನ್ನು ಮಾಡಿ ಸದಾಚಾರದಿಂದ ವರ್ತಿಸಿರಿ, ಇಲ್ಲದಿದ್ದರೆ ಜಗದ್ಗುರುಗಳ ಕಡೆಯಿಂದ ಬಹಿಷ್ಕಾರ ಹಾಕಿಸಬೇಕಾದೀತು, ಎಂದು ಹೇಳಿ ದಕ್ಷಣೆ ತಗೆದುಕೊಂಡು ಹೋಗಬೇಕು.

ಈ ಕಾಯಕದಯ್ಯನವರಿಂದ ಪ್ರಯೋಜನವಾಗದಿದ್ದರೆ ಆ ಊರ ಮಠದಯ್ಯ ಇಲ್ಲವೇ ಮಠಪತ್ತಿಯು ಮೂರನೇ ದಿನಕ್ಕೆ ಹತ್ತಿರವಿದ್ದ ಚರಪಟ್ಟಾಧಿಕಾರಿಗಳಿಗೆ ತಿಳುಹಿಸಬೇಕು. ಅವರು ಸಿಂಹಾಸನಾಧಿಪತಿಗಳಿಗೆ ಪ್ರಾರ್ಥನಾಪತ್ರಿಕೆಯಲ್ಲಿ ನಡೆದ ವೃತ್ತಾಂತವನ್ನೂ ಸವಿಸ್ತಾರವಾಗಿ ಬರೆದು ಕಳುಹಿಸಬೇಕು. ಅವರ ಆಜ್ಞಾನುಸಾರ ಬಹಿಷ್ಕಾರ ಹಾಕಬೇಕು. ಸದಾಚಾರದಿಂದಿರಲು ಒಪ್ಪಿದಲ್ಲಿ ತಪ್ಪು ತೆಗೆದುಕೊಳ್ಳಬೇಕು. ಈ ಕಾಯಕದಯ್ಯನವರು ಜಗದ್ಗುರು ಪಂಚಾಚಾರ್ಯರಿಂದ ಅಪ್ಪಣೆ ಪಡೆದಿರಬೇಕು. ಮತ್ತು ತಮ್ಮ ಕಷ್ಟನಷ್ಟಗಳನ್ನು ಮಹಾಪಾದದಲ್ಲಿ ಬಿನ್ನವಿಸಿಕೊಳ್ಳಬೇಕು. ಧರ್ಮ ಸುಧಾರಣೆಯ ದಿಶೆಯಿಂದ ಯಾವತ್ತೂ ಕಾಯಕದಯ್ಯನವರು ಜಾಗ್ರತರಾಗಿರಬೇಕು.

## ಮಠ ಮಠಪತ್ತಿಗಳ ಕರ್ತವ್ಯ :

ಆ ಊರ ಮಠದಯ್ಯನವರು ಮಠಪತ್ತಿಗಳು ಧರ್ಮ ಸುಧಾರಣೆಗಾಗಿಯೇ ನಿಯಮಿಸಲ್ಪಟ್ಟಿರುತ್ತಾರೆ. ಮೊದಲು ಮಠಪತ್ತಿಯು ಗುಪ್ತಪೋಲೀಸನಂತೆ ಮನೆಗೆ ಸಪ್ಪಳ ಮಾಡದೆ ಹೋಗಿ ವಿಭೂತಿ, ರುದ್ರಾಕ್ಷಿ, ಲಿಂಗಾದಿಗಳನ್ನು ಧರಿಸಿರುವರೋ ಇಲ್ಲವೋ ಪರೀಕ್ಷಿಸಬೇಕು. ಧರಿಸಿರದಿದ್ದರೆ ಧರಿಸಲಿಕ್ಕೆ ಹೇಳಿ ಭಿಕ್ಷೆಯನ್ನು ತೆಗೆದುಕೊಂಡು ಹೋಗಬೇಕು. ಮಠದಯ್ಯನವರು ಪಂಚಾಚಾರ್ಯ ದ್ಯೋತಕಗಳಾದ ಐದು ಜಂಗುಳಿಗಳನ್ನು ಕಟ್ಟಿ ಸಪ್ಪಳ ಮಾಡುತ್ತ ಮನೆಗೆ ಹೋಗಿ ಅನಾಚಾರ ಕಂಡಲ್ಲಿ ಸದಾಚಾರ ಬೋಧಿಸಿ ೫ ಆಣೆ ದಂಡ ತೆಗೆದುಕೊಂಡು ಬರಬೇಕು. ಹೊಲದಲ್ಲಿ ರಾಶಿಯ ಕಾಲಕ್ಕೆ ನಮ್ಮ ವೀರಶೈವರು ಅನಾಚಾರಿಗಳಾದಾರೆಂದು

ಸದಾಚಾರವನ್ನು ಬೋಧಿಸಬೇಕಾಗುತ್ತದೆ. ಇವನ್ನೆಲ್ಲ ನೋಡಿದರೆ ಪೂರ್ವಾಚಾರ್ಯರು ವೀರಶೈವ ಸಂಸ್ಕೃತಿಯನ್ನು ಕಾಪಾಡಲು ಎಷ್ಟು ವಿಚಾರ ವಿನಿಮಯಗಳಿಂದ ನಿಯಮಗಳನ್ನುಹಾಕಿದ್ದಾರೆನ್ನುವುದು ಗೊತ್ತಾಗುತ್ತದೆ. ನಮ್ಮ ವೀರಶೈವ ವ್ಯಕ್ತಿಗೆ ಎಲ್ಲಿ ಹೋದಲ್ಲಿ ಧರ್ಮ ಬೋಧಕರು ಸಿದ್ಧರೆ! ಇತ್ತೀಚೆಗೆ ತದ್ವಿರುದ್ಧವಾಗಿದೆ.

"ಯಾಚಕೋ ಯಾಚಕಂ ದೃಷ್ಟ್ವಾ ಶ್ವಾನವತ್ ಗುರ್ಗುರಾಯತೆ" ಊರಲ್ಲಿ ಇಬ್ಬರು ಮೂವರು ಜಂಗಮರಿದ್ದರೆ ಎರಡು ಮೂರು ಪಂಗಡಗಳಿರುವುದೆಂದೇ ತಿಳಿಯಬೇಕು. ಆದುದರಿಂದ ಪಂಗಡಗಳನ್ನು ಮರೆತು ಧರ್ಮ ಸುಧಾರಣೆಗೆ ನಿಲ್ಲುವುದು ಮುಖ್ಯವಾಗಿದೆ.

## ಪಟ್ಟಚರಾಧಿಕಾರಿಗಳ ಕರ್ತವ್ಯ :

ಈ ಪಟ್ಟಚರಮೂರ್ತಿ ಸ್ವಾಮಿಗಳವರು ಮೇಲಿನ ಅಯ್ಯನವರಿಗಿಂತಲೂ ಹೆಚ್ಚಿನ ಶ್ರಮವುಳ್ಳವರು. ಪ್ರಾಪಂಚಿಕ ವ್ಯವಹಾರಗಳನ್ನು ಬಿಟ್ಟು ಅಹೋರಾತ್ರಿ ಭಕ್ತೋದ್ಧಾರಕ್ಕಾಗಿಯೇ ದುಡಿಯಬೇಕು. ಇವರಿಗೆ ಸದ್ಬುದ್ಧಿಯೇ ಪತ್ನಿಯು, ಸದಾಚಾರಗಳೇ ಮಕ್ಕಳು, ಸದ್ಧರ್ಮವೇ ತಂದೆಯು, ಧರ್ಮಸುಧಾರಣೆಯೇ ತಾಯಿಯು. ಶಮೆದಮೆಗಳೇ ಅಕ್ಕ ತಂಗಿಯರು, ಕಾಮಾದಿಗಳೇ ಷಡ್ವೈರಿಗಳು. ಈ ವೈರಿಗಳನ್ನು ಇಂದ್ರಿಯನಿಗ್ರಹ, ಪರಶಿವಭಕ್ತಿಗಳೆಂಬ ಖಡ್ಗಗಳಿಂದ ಜಯಿಸಬೇಕು. ಪೂರ್ವಾಚಾರ್ಯರು ಇವರಿಗೆ ಇಂತಿಷ್ಟು ಶಿಷ್ಯರ ಮನೆಗಳು ನಿಮಗೆ ಎಂದು ನಿರ್ದೇಶಿಸಿ ಆ ಶಿಷ್ಯರು ಮೇಲೆ ಆಯಾ ಗುರುವರ್ಗದವರಿಗೆ ಸಂಪೂರ್ಣ ಅಧಿಕಾರವನ್ನು ಕೊಟ್ಟಿರುತ್ತಾರೆ. ಪ್ರಯುಕ್ತ ಇಂತಹ ಮಹಾಸ್ವಾಮಿಗಳು, ದೇಶಸೇವೆಯೇ ಈಶ ಸೇವೆಯು ಭಕ್ತೋದ್ಧಾರವೇ ನಮ್ಮ ಶಿವಪೂಜೆಯು, ಭಕ್ತರ ಕಲ್ಯಾಣವೇ ನಮ್ಮ ಅನುಷ್ಠಾನವು. ಭಕ್ತರು ಧರ್ಮಾಚಾರ ಪ್ರವರ್ತಕರಾಗುವಂತೆ ಮಾಡುವುದೇ ನಮ್ಮ ತಪಸ್ಸು. ಧರ್ಮಾಚಾರ ಬೋಧೆಯೇ ನಮ್ಮ ಮಂತ್ರಜಪವು ಎಂದು ಸದ್ಧರ್ಮಸುಧಾರಣಾ ಯುದ್ಧದಲ್ಲಿ ಆಸಕ್ತರಾಗಿ ಧರ್ಮಜಾಗೃತಿಯನ್ನು ಮಾಡಬೇಕು. ಹೀಗೆ ವೀರಶೈವ ಸಮಾಜದಲ್ಲಿ ಇನ್ನೂ ಆಂತರಿಕ ಸುಧಾರಣಾ ವಿಧಾನಗಳು ಅದೆಷ್ಟೋ ಇವೆ. ಒಟ್ಟಿನಲ್ಲಿ ಪೂರ್ವಾಚಾರ್ಯರು ಹಾಕಿಕೊಟ್ಟ ಮಾರ್ಗವು ಈ ವರೆಗೂ ಅನೂಚಾನವಾಗಿ ಬಂದಿರುವುದನ್ನು ನೋಡಿದರೆ ವೀರಶೈವ ಸಂಸ್ಕೃತಿ ಜನಪ್ರಿಯವಾಗಿರುವುದನ್ನು ನೋಡಿದರೆ ಅದು ತನ್ನಲ್ಲಿರುವ ತತ್ವಗಳನ್ನು ಜನಸಾಮಾನ್ಯರಿಗೆ ಸಹೃದಯತೆಯಿಂದ ಅರ್ಪಿಸುವುದರ ಮೂಲಕ ಅವರನ್ನು ಸನ್ಮಾರ್ಗಗಾಮಿಗಳನ್ನಾಗಿ ಮಾಡಿರುವುದು ವ್ಯಕ್ತವಾಗುತ್ತದೆ. ಆದುದರಿಂದ ವೀರಶೈವ ಮತ, ಮತಧರ್ಮ, ಸಮಾಜ ಹಾಗೂ ಸಂಸ್ಕೃತಿಗಳು ಆದಿವಾಸಿಗಳಿಂದ ಆರಂಭವಾಗಿದ್ದು ಕ್ರಮೇಣ ಸುಧಾರಣೆಯನ್ನು ಹೊಂದಿ ಆಧುನಿಕಯುಗದಲ್ಲಿ ತನ್ನ ವೈಶಿಷ್ಟ್ಯವನ್ನು ಕಾದುಕೊಂಡಿರುವುದು ಸ್ತುತ್ಯರ್ಹವಾಗಿದೆ. ಅಲ್ಲದೆ ಅದರ ವಿಕಾಸವು ಇನ್ನೂ ಉಜ್ವಲ ಭವಿಷ್ಯವನ್ನು ಕಾಣಬಹುದು ಎಂದು ಸಂತೋಷದಿಂದ ಹೇಳಬಹುದು.

*********



॥ ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ವೀರಶೈವ ಧರ್ಮದ ಕಾಲ ನಿರ್ಣಯ

ಲೇಖಕರು: ಕಲಬುರ್ಗಿ ಚವದಾಪುರಿ ಹಿರೇಮಠದ ಶ್ರೀಗಳು.

...............

ಶ್ರೀಮದ್ವೇದ ವೇದಾಂತಾಗಮ ಪುರಾಣೇತಿಹಾಸಂಗಳಲ್ಲಿ ಪ್ರತಿಪಾದಿತಮಾದ ವೀರಶೈವಧರ್ಮಕ್ಕೆ ಶಿವಾಗಮಗಳೇ ಪ್ರಸಿದ್ಧ ಪ್ರಮಾಣ ಗ್ರಂಥಗಳಾಗಿವೆ. ಸುಪ್ರಬೋಧಾಗಮ, ವೀರಾಗಮ, ಸ್ವಯಂಭುವಾಗಮ ಸೂಕ್ಷ್ಮಾಗಮ, ಪಾಶುಪತಾಗಮಾದಿ ಶಿವಾಗಮಗಳಲ್ಲಿ ಪ್ರತಿಪಾದಿತಮಾದ ವಿಷಯಗಳನ್ನೇ ಸಂಕ್ಷಿಪ್ತ ಸಂಗ್ರಹಿಸಲಾಗಿದೆ.

ಜಗದಾದಿಯಲ್ಲಿ ಶಿವಶಕ್ತಿಯರು ನಿರಾಕಾರ ನಿರಂಜನಮಾಗಿರುವಾಗ ಶಕ್ತಿಸ್ಫುರಣೆಯಿಂದ ಒಳಗಡಗಿರುವ ಸತ್ವ, ರಜ, ತಮೋಗುಣಗಳು ಬ್ರಹ್ಮ ವಿಷ್ಣು ರುದ್ರರೆಂದು ಮೂರು ಮೂರ್ತಿಗಳಾಗಿ ಉದ್ಭವರಾದರು ಈ ಗುಣಭೇದಗಳ ತಾರತಮ್ಯವನ್ನು ವಿಸ್ತರಿಸಲು ಲೇಖನಿಯು ಬೆಳೆಯುತ್ತಿದೆ. ನಿರಂಜನಮಾದ ಶಿವಶಕ್ತಿಯರು ತಾದಾತ್ಮ್ಯರೂಪದಿಂದ ಸದಾಶಿವನೆನಿಸಿದಾಗ ಬ್ರಹ್ಮನಿಗೆ ಸೃಷ್ಟಿಯನ್ನೂ, ವಿಷ್ಣುವಿಗೆ ಸ್ಥಿತಿಯನ್ನೂ, ರುದ್ರನಿಗೆ ಲಯವನ್ನೂ ಮಾಡಲು ಅಪ್ಪಣೆ ಮಾಡಿದನು. ಮೊದಲು ಬ್ರಹ್ಮನು ತನ್ನ ದಿವ್ಯ ತೇಜೋಮಯ ಬುದ್ಧಿಯ ಬಲದಿಂದ ವಿಚಾರಿಸಿದಾಗ ಜಗತ್ತಿನಲ್ಲಿ ಸಕಲ ಸಚರಾಚರ ಪ್ರಾಣಿಗಳನ್ನರಿದು ಆಚರಿಸುವ ಶಕ್ತಿಯು ಸ್ತ್ರೀಪುರುಷರಾದ ಮಾನವರಿಗಿದೆ ಎಂದು, ಅವರನ್ನು ಸೃಷ್ಟಿಸುವದಕ್ಕಾಗಿ ಹಲವು ಆಲೋಚನೆಯನ್ನು ಮಾಡಿ ನೋಡಿದ. ಬುದ್ಧಿಯಲ್ಲಿ ಹೊಳೆಯಲಿಲ್ಲ. ಚಿಂತಿಸಿ ಪರಶಿವನನ್ನು ಪ್ರಾರ್ಥಿಸಿದಾಗ ಶಿವನು ಪ್ರಸನ್ನನಾಗಿ ಬ್ರಹ್ಮನ ಇಂಗಿತವನ್ನರಿತು, ತನ್ನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನವೆಂಬ ಪಂಚಮುಖಗಳಿಂದ ವೀರ, ನಂದಿ, ವೃಷಭ, ಭೃಂಗಿ, ಸ್ಕಂದರೆಂಬ ಐವರಾಚಾರ್ಯರನ್ನು ಸೃಜಿಸಿ, ಎಲೌ ಪ್ರಮಥರೇ ನೀವೀಗ ಬ್ರಹ್ಮನಿಗೆ.ಸ್ತ್ರೀ ಪುರುಷರನ್ನು ಸೃಷ್ಟಿಸುವ ರೀತಿಯನ್ನು ತಿಳಿಸಿರೆಂದು ಅಪ್ಪಣೆ ಮಾಡಿದನು. ಆಗ ಅವರು ತಮ್ಮ ಯೋಗ ಬಲದಿಂದರಿತು, ಮಹಾ ಪಂಚಭೂತಗಳನ್ನು ಎರಡೆರಡು ಭಾಗವನ್ನು ಮಾಡಿ ಮಹಾಭೂತಗಳ ಅರ್ಧ ಭಾಗಗಳನ್ನು ಹಾಗೆಯೇ ಕಾಯ್ದಿಟ್ಟು ಉಳಿದರ್ಧ ಭಾಗಗಳಲ್ಲಿ ಐದೈದು ಭಾಗಗಳನ್ನಾಗಿ ಮಾಡಿ, ಕಾಯ್ದಿಟ್ಟ ಅರ್ಧ ಭಾಗಗಳಲ್ಲಿ ಬೆರಕೆಮಾಡಿದಾಗ ಸಕಲ ಇಂದ್ರಿಯಗಳು, ವಾಯುಗಳು, ಕರಣಗಳ ಉತ್ಪತ್ತಿಯಿಂದ ಸ್ತ್ರೀ ಪುರುಷರೆಂಬ ಅನಂತ ಮಾನವ ಜಾತಿಗಳನ್ನು ಸೃಜಿಸಿ ತೋರಿಸಿದರು. ಬ್ರಹ್ಮನು ಅದನ್ನು ಕಲಿತು ಭೂತಗಳ ಆಧಾರದಿಂದಲೇ ಅನಂತಾನಂತ ಸ್ತ್ರೀ ಪುರುಷರನ್ನು ಸೃಜಿಸಿ ಜಗತ್ತಿನಲ್ಲಿ ತುಂಬಿದನು. ಮಹಾಚಾರ್ಯರಾದ ಐವರು ತಾವು ಸೃಜಿಸಿರುವ ಸ್ತ್ರೀ ಪುರುಷರಲ್ಲಿ ಪೂಜ್ಯ ಪೂಜಕರೆಂಬ ಎರಡು ಭಾಗವನ್ನು ಮಾಡಿ, ಅವರಿಗೆ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಪಾದೋದಕ, ಪ್ರಸಾದ, ಮಂತ್ರವೆಂಬ ಅಷ್ಟಾವರಣಗಳೇ ಅಂಗವನ್ನಾಗಿ ಲಿಂಗಾಚಾರ, ಸದಾಚಾರ, ಶಿವಾಚಾರ, ಭೃತ್ಯಾಚಾರ, ಗಣಾಚಾರಗಳೆಂಬ ಪಂಚಾಚಾರಗಳೇ ಪ್ರಾಣಂಗಳಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂಬ ಷಟ್‌ಸ್ಥಲಾಚಾರಂಗಳಾಗಿ ಅಳವಡಿಸಿ ನಡೆಯಲು ಕಲಿಸಿದರು. ಇವರೇ ವೀರಶೈವರು. ಇವರ ಆಚಾರಭೇದದಿಂದ ಸಾಮಾನ್ಯ ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವರೆಂದು ಮೂರು ಭಾಗಗಳಾಗಿವೆ. ಅಷ್ಟಾವರಣಗಳಲ್ಲಿ ಕೆಲವನ್ನೇ ಅಂಗೀಕರಿಸಿ ಸಾಮಾನ್ಯವಾಗಿ ವರ್ತಿಸುವರು, ಸಾಮನ್ಯ ವೀರಶೈವರು

ಅಷ್ಟಾವರಣ ಪಂಚಾಚಾರ ಷಟಸ್ಥಲಾಚರಣೆಗಳನ್ನು ಸಂಪೂರ್ಣ ಅಳವಡಿಸಿಕೊಂಡು ವರ್ತಿಸುವ ಭಕ್ತ ಮಾಹೇಶ್ವರರೆಲ್ಲರೂ ವಿಶೇಷ ವೀರಶೈವರು. ಇವನ್ನೆಲ್ಲಾ ತಪ್ಪದೇ ನಡೆಯುತ್ತ, ವಿಷಯದಲ್ಲಿ ವೈರಾಗ್ಯ ಹುಟ್ಟಿ, ಸರ್ವಸಂಗ ಪರಿತ್ಯಾಗಿಯಾಗಿ ಪಟ್ಟಣಕ್ಕೆ ಪಂಚರಾತ್ರಿ, ಹಳ್ಳಿಗೆ ಏಕರಾತ್ರಿಯಂತೆ ಪಾದಚಾರಿಯಾಗಿ ಸಂಚರಿ-ಸುತ್ತ ಏಳುಮನೆಯ ಭಿಕ್ಷಾನ್ನವನ್ನುಂಡು ಕೇವಲಾನಂದ ದಿಂದ ವರ್ತಿಸುವಾತನೇ ನಿರಾಭಾರಿ ವೀರಶೈವನೆಂದು ಅನಂತ ಪ್ರಮಾಣಗಳು ಸಾರುತ್ತಿವೆ. ಇವಕ್ಕೆ ಆಗಮ ಪ್ರಮಾಣಗಳೇ ಸಾಕ್ಷಿ. ಇತ್ತಬ್ರಹ್ಮನು ಸೃಷ್ಟಿಸಿರುವ ಸ್ತ್ರೀ ಪುರುಷ ಸಂದೋಹದಲ್ಲಿ ಪೂಜ್ಯ ಪೂಜಕರೆಂದು ಭಾಗ ಮಾಡಿ ಅವರಿಗೆ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ರೆಂಬ ಚಾತುರ್ವರ್ಣ್ಯವನ್ನೂ, ಹದಿನೆಂಟು ಜಾತಿಗ-ಳನ್ನೂ, ನೂರಾಒಂದು ಕುಲಗಳನ್ನೂ ನಿರ್ಮಿಸಿ ಅವ ರವರ ಆಚರಣೆ ಅಧಿಕಾರಗಳ ತಾರತಮ್ಯಗಳನ್ನು ವಿಂಗಡಿಸಿರುವಂತೆ ಬ್ರಹ್ಮಾಂಡಪುರಾಣದ ಪ್ರಮಾಣವಿದೆ.

ಪ್ರಮಾಣ ಪುರಸ್ಸರವಾದ ನಿಜವಾದ ಸಂಗತಿ ಯನ್ನು ಸುಜ್ಞಹೃದಯರಾದ ಬುದ್ಧಿವಂತರು, ವೀರ-ಶೈವರ ಉಗಮವನ್ನರಿತು ಆಚರಿಸಬೇಕೆಂದು ಸೂಚಿ-ಸುವೆ.

---

ಹಿರೇಜೇವರಗಿಯ ಶ್ರೀ ಶಾಂತಲಿಂಗೇಶ್ವರ ಶಿಕ್ಷಣ ಪ್ರಸಾರಕ ಮಂಡಳಿ ವತಿಯಿಂದ ನಡೆಯುತ್ತಿರುವ

## ಶ್ರೀ ಸಿದ್ಧೇಶ್ವರ ಹೈಸ್ಕೂಲ, ದುಧನಿ. ( ಜಿ. ಸೋಲಾಪೂರ. )

### ಮ್ಯಾನೇಜಿಂಗ್ ಕಮೀಟಿ :

ಅಧ್ಯಕ್ಷರು : ಶ್ರೀ. ಷ. ಬ್ರ. ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳು.
ಉಪಾಧ್ಯಕ್ಷ : ಶ್ರೀ. ಹಣಮಂತರಾವ ದೇಸಾಯಿ ವಕೀಲ.
ಸದಸ್ಯರು : ಶ್ರೀ. ಮಲಕಣ್ಣ ಬಿರೇದಾರ. ಶ್ರೀ. ಗುರುಶಾಂತಪ್ಪ ಹಾವಶೆಟ್ಟಿ.
ಸೆಕ್ರೆಟರಿ : ಶ್ರೀ. ಸಿ. ಜಿ. ಸಮಗೊಂಡ ( ಮುಖ್ಯಾಧ್ಯಾಪಕ )

### ಶಿಕ್ಷಕರು ಮತ್ತು ಸೇವಕ ವೃಂದ :

( ೧೯೭೫—೭೬ )

| | | |
|---|---|---|
| ೧. | ಶ್ರೀ. ಸಿ. ಜಿ. ಸಮಗೊಂಡ, M. A., B. Ed. | ಮುಖ್ಯೋಪಾಧ್ಯಾಯ. |
| ೨. | ಶ್ರೀ. ಎಸ್. ಕೆ. ಹೊನ್ನುಂಗರ, M. A., B. Ed. | ಸಹ–ಶಿಕ್ಷಕ. |
| ೩. | ಕುಮಾರಿ ಜಿ. ಎಮ್. ನಿಂಬರಗಿ, M. A., B. Ed. | ಸಹ–ಶಿಕ್ಷಕಿ. |
| ೪. | ಶ್ರೀ. ಎಮ್. ಎಸ್. ಇಕ್ಕಳಕಿ, B. Sc., B. Ed. | ಸಹ–ಶಿಕ್ಷಕ. |
| ೫. | ಶ್ರೀ. ಎಸ್. ಆರ್. ಹಾರಕೂಡ, B. A., B. Ed. | ,, |
| ೬. | ಶ್ರೀ. ಎಸ್. ಎಸ್. ತೊದಲಬಾಗಿ, B. A., B. Ed. | ,, |
| ೭. | ಶ್ರೀ. ಎಸ್. ಜಿ. ಹಿಟ್ನಳ್ಳಿ, B. Sc. B. Ed. | ,, |
| ೮. | ಶ್ರೀ. ಎಮ್. ಬಿ. ಸುತಾರ, B. A., D. T. C. | ,, |
| ೯. | ಶ್ರೀ. ಬಿ. ಬಿ. ಭತ್ತಾ, S.T.C., C.P.Ed. N.D.S. | ,, |
| ೧೦. | ಶ್ರೀ. ಎಮ್. ಎಸ್. ಹೌದೆ, S. S. C. | ,, |
| ೧೧. | ಶ್ರೀ. ಸಿ. ಸಿ. ಅಮೋಣೆ, S. S. C. | ಲೇಖನಿಕ. |
| ೧೨. | ಶ್ರೀ. ಸಿ. ಎಸ್. ಕುಂಬಾರ | ಸೇವಕ. |
| ೧೩. | ಶ್ರೀ. ಎ. ಎಸ್. ಪಾಟೀಲ | ,, |
| | | ,, |



ಪರಮ ಪೂಜ್ಯ ಗುರುಗಳವರ ಶಾಖಾ ಹಿರೇಮಠ ದುಧನಿ. (ತಾ. ಅಕ್ಕಲಕೋಟ)
ಮತ್ತು ನೂತನ ಗುರುಗಳವರ ಜನ್ಮಸ್ಥಾನ.





ಶಿಕ್ಷಕ ವೃಂದ ಶ್ರೀ ಸಿದ್ಧೇಶ್ವರ ಹೈಸ್ಕೂಲ ದುಧನಿ. (ತಾ. ಅಕ್ಕಲಕೋಟ)



ಲಿಂ. ಗುರುಗಳ ಸಮಾಧಿ ದೃಶ್ಯ, ಹಿರೇಜೇವರಗಿ.




ಶಿಕ್ಷಕ ವೃಂದ ಶ್ರೀ ಶಾಂತಲಿಂಗೇಶ್ವರ ಹೈಸ್ಕೂಲ ಹಿರೇಜೇವರಗಿ.

॥ ಶ್ರೀ ಜಗದ್ಗುರು ಪಂಡಿತಾರಾಧ್ಯೋ ವಿಜಯತೆ ॥

## ಪ್ರಾತಃ ಸ್ಮರಣೀಯ

# ಬಾಲಶಿವಯೋಗಿಗಳು



ಧರ್ಮವು ಅಖಂಡ ಪ್ರಪಂಚಕ್ಕೆ ಆಧಾರವಾಗಿದೆ. ಧರ್ಮದ ಆಧಾರವನ್ನು ತಪ್ಪಿಸಿಕೊಂಡು ಯಾವ ವಸ್ತುವೂ ನಿಲ್ಲಲು ಸಾಧ್ಯವಿಲ್ಲ. ಪಂಚತತ್ವಗಳೂ ಸೂರ್ಯಚಂದ್ರಾದಿಗಳೂ ಧರ್ಮನಿಯಮಗಳನ್ನು ಉಲ್ಲಂಘಿಸದೇ ವರ್ತಿಸುತ್ತಲಿವೆ. ಭಾರತೀಯರಾದ ನಾವು ಧರ್ಮಕ್ಕೆ ಬಹಳ ಪ್ರಾಧಾನ್ಯತೆಯನ್ನು ಕೊಟ್ಟಿರುವೆವು. ಧರ್ಮದಿಂದಲೇ ಮಾನವನಿಗೆ ಸುಖ ಶಾಂತಿ ದೊರಕುವದು. ಪುರಾತನ ಕಾಲದಿಂದಲೂ ಜ್ಞಾನಿಗಳು "ಸ್ವಧರ್ಮೇ ನಿಧನಂ ಶ್ರೇಯಃ" ಎಂದು ಹೇಳಿರುವರು. ಧರ್ಮವನ್ನು ತುಳಿದರೆ ಅದು ನಮ್ಮನ್ನು ದುಃಖಕ್ಕೀಡು ಮಾಡುತ್ತದೆ. ಅದನ್ನು ಪರಿಪಾಲಿಸಿದರೆ ನಮ್ಮನ್ನು ಕಾಪಾಡುತ್ತದೆ. ಆದ್ದರಿಂದ ಧರ್ಮವು ಮಾನವನಿಗೆ ಮುಖ್ಯ ಪುರುಷಾರ್ಥವಾಗಿದೆ. "ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೆ ಯುಗೆ" ಎಂಬ ಭಗವಂತನ ಉಕ್ತಿಯಂತೆ ಅನೇಕ ಮಹಾತ್ಮರು ಭಾರತ ಭೂಮಿಯಲ್ಲಿ ಅವತರಿಸಿ ಮಾನವ ಜನಾಂಗದ ಮನೋಭೂಮಿಯನ್ನು ಹಸನ ಮಾಡಿರುತ್ತಾರೆ. ಮಾನವನಿಗೆ ವಿಶ್ರಾಂತಿ ದೊರಕುವದು ಧರ್ಮದಿಂದಲೇ. ಆದ್ದರಿಂದ ಮನುಷ್ಯನಿಗೆ ಧರ್ಮವು ಪರಮಪುರುಷಾರ್ಥವಾಗಿದೆ. ಮಾನವನ ಇಹ-ಪರ ಸುಖ ಸಾಧನೀಭೂತವಾದ ಧರ್ಮವು ಅಳಿದಾಗ ಧರ್ಮೋದ್ಧಾರಕ್ಕಾಗಿ ಮಹಾತ್ಮರು ಅವತರಿಸುತ್ತಾರೆ.

ಇಂತಹ ಪವಿತ್ರ ಶ್ರೇಣಿಯಲ್ಲಿ ಧರ್ಮವನ್ನು-ದ್ಧರಿಸಲು ಅವತರಿಸಿದ ಪುಣ್ಯ ಪುರುಷರಲ್ಲಿ "ಬಾಲಶಿವಯೋಗಿ" ಶ್ರೀ ಷ. ಬ್ರ. ಗುರುಶಾಂತಶಿವಾಚಾರ್ಯರೊಬ್ಬರು.

ಶ್ರೀಗಳು ಹಿರೇಜೇವರಗಿ ಹಿರೇಮಠದ ಪಟ್ಟಾಧಿಕಾರವನ್ನು ಬಾಲ್ಯದಲ್ಲಿಯೇ ವಹಿಸಿಕೊಂಡರು. ಅಕ್ಕಲಕೋಟಿ, ದುಧನಿ ಹಿರೇಮಠಗಳು ಈ ಮಠದ ಶಾಖಾ ಮಠಗಳು. ಈ ಮಠಗಳು ಶ್ರೀ ಜಗದ್ಗುರು ಪಂಚಪೀಠಗಳಲ್ಲೊಂದಾದ ಶ್ರೀಶೈಲ ಸೂರ್ಯಸಿಂಹಾಸನಕ್ಕೆ ಸೇರಿದ ಮಠಗಳು. ಈ ಮಠಗಳು ಸಾಂಪತ್ತಿಕ ಸ್ಥಿತಿಯಿಂದ ಕೂಡಿದವುಗಳಲ್ಲ. ಶ್ರೀಗಳಿಗೆ ಸಂಪತ್ತಿನ ಬಗ್ಗೆ ವ್ಯಾಮೋಹವಿಲ್ಲ. ಕ್ಷಣಿಕ ಸಂಪತ್ತನ್ನು ತೃಣೀಕರಿಸಿದ ಶ್ರೀಗಳು ತಪೋಧನರಾಗಿ ತಮ್ಮ ತಪೋನುಷ್ಠಾನಗಳಿಂದಲೇ ವೀರಶೈವ ಸಮಾಜದಲ್ಲಿ ನೂತನ ಚೈತನ್ಯವನ್ನು ಹುಟ್ಟಿಸಿ ಜಾಗ್ರತೆ ಮಾಡುತ್ತಿರುವರು. ಅಲ್ಲದೇ ತ್ಯಾಗಮಯವಾದ ಜೀವನದಿಂದ ಆ ಭಾಗದ ಗುರುವರ್ಗಕ್ಕೆ ಮಾರ್ಗದರ್ಶಕರಾಗಿರುವರು.

ವೀರಶೈವರಲ್ಲಿ ಗುರುವಿಗೆ ಬಹಳ ಮಹತ್ವ ಸ್ಥಾನವಿದೆ. ಆದ್ದರಿಂದಲೇ ಅಷ್ಟಾವರಣದಲ್ಲಿ ಗುರುವಿಗೆ ಪ್ರಥಮ ಸ್ಥಾನ ಕಲ್ಪಿಸಿದೆ. ಜೀವಾತ್ಮನು ನಿತ್ಯ-ಮುಕ್ತನಾಗಲು ಹಂಬಲಿಸುತ್ತಾನೆ. ಅವನ ಈ ಹಂಬಲ ಈಡೇರಬೇಕಾದರೆ ಸದ್ಗುರುವಿನ ಸಹಾಯ ಬೇಕೇ ಬೇಕು. "ಮುಕ್ತಿನಾಸ್ತಿ ಗುರುಂ ವಿನಾ" ಎಂಬ ಉಕ್ತಿಯಂತೆ ಗುರುವಿನ ಸರ್ವವಿಧ ಸಹಾಯವಿಲ್ಲದಿದ್ದರೆ ಮುಕ್ತಿ ಅಸಾಧ್ಯವೆಂಬ ಧರ್ಮ ತಿರುಳನ್ನರಿತ ಶ್ರೀಗಳು ಶ್ರೀ ಜಗದ್ಗುರು ಪಂಚಾಚಾರ್ಯರಲ್ಲಿ ಅನನ್ಯ ಭಕ್ತಿಯುಳ್ಳವರಾಗಿರುವರು. ಅಲ್ಲದೆ ಇಹಪರದಲ್ಲಿ ಮನುಷ್ಯನಿಗೆ ಸುಖ ಶಾಂತಿಯನ್ನು ಕೊಡುವ ವೀರವೃತ್ತಿ, ಧಾರ್ಮಿಕ ವರ್ತನೆ, ಸಮದೃಷ್ಟಿ, ವಿವೇಚನೆ, ವೈರಾಗ್ಯ ಈ ಐದು ಬಗೆಯ ವರ್ತನೆಗಳನ್ನು ಮೂಲ ಪೀಠಾಚಾರ್ಯರಿಂದ ಪಡೆದವರಾಗಿ,

ಬಗ್ಗೆ ಕಳಕಳಿಯಿದ್ದವರು ಎಷ್ಟು ಜನ ? ನಿರ್ಪ್ರಪಂಚಕರು, ನಿಸ್ಪೃಹಿಗಳಾದವರು ಎಷ್ಟು ಜನ? ಅಂತರಂಗ ಮತ್ತು ಬಹಿರಂಗದಲ್ಲಿ ಶುದ್ಧರಾದವರು ಎಷ್ಟು ಜನ? "ಸ್ವಾಮಿಗಳು" ಎನ್ನಿಸಿಕೊಳ್ಳುವ ಕೆಲವರಲ್ಲಿ ಅವರಿಗೇನೆ ತಮ್ಮ ಕಾಯಕದಲ್ಲಿ ನಂಬುಗೆಯಿಲ್ಲ, ಆಸಕ್ತಿಯಿಲ್ಲ ಮತ್ತು ಮನಸ್ಸಿಲ್ಲ. ಹೊಟ್ಟೆಯ ಪಾಡಿಗಾಗಿ ಕಾವಿಯ ಬಟ್ಟೆಯೊಂದನ್ನು ಸುತ್ತಿಕೊಂಡು, ತಮ್ಮ ಜೀವನದ ಜೋಕಾಲಿಯನ್ನು ಹೇಗ್ಹೇಗೊ ಜೀಕುತ್ತಲಿದ್ದಾರೆ ಅತ್ತೊಮ್ಮೆ ಇತ್ತೊಮ್ಮೆ !

ಆನೆಯನೇರಿಕೊಂಡು ಹೋದಿರಿ ನೀವು,
ಕುದುರೆಯನೇರಿಕೊಂಡು ಹೋದಿರಿ ನೀವು,
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ಅಣ್ಣಾ
ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಲ್ಲ
ಅಹಂಕಾರವೆಂಬ ಮದಗಜವನೇರಿ....ಕೆಟ್ಟು ಹೋದಿರಲ್ಲ

ಮಹಾನುಭಾವಿಯಾದ ಬಸವಣ್ಣನವರ ಹೃದಯಾಂತರಾಳದಿಂದ ಬಂದ್ದ ವಚನವಿದು. ಆ ನೆಯ ಶತಮಾನದ ಕೆಲವು ಬಿಂಕದ ಭೀಮಣ್ಣರಿಗೆ ಇದು ಒಮ್ಮಡಿಯಾಗಿ ಅನ್ವಯಿಸುತ್ತಿದ್ದರೆ ಇಂದಿನ ಅನೇಕ ಅಹಂಕಾರಿಗಳಿಗೆ ಇದು ಒಮ್ಮಡಿ, ಮುಮ್ಮಡಿ, ನೂರ್ಮಡಿಯಾಗಿ ಹೊಂದಿಕೊಳ್ಳುವದು.

ಪ್ರಗಲ್ಭವಾದ ಪಾಂಡಿತ್ಯ ಹಾಗೂ ವಾಕ್ಪಟುತ್ವಗಳಿಂದ ಸಮಾಜದ ಮೇಲೆ ಕೆಲವರು ಪ್ರಭಾವ ಬೀರುತ್ತಾರೆ. ಆಸೆ-ಆಮಿಷಗಳಿಗೆ ಬಲಿಬಿದ್ದು ಧನಕನಕಾದಿಗಳನ್ನು ಸೂರೆಮಾಡಿ ಆಡಂಬರದ ಜೀವನ ಸಾಗಿಸಿ ಕೆಲವರು ಮುಗ್ಧ ಮತ್ತು ಭಾವಿಕ ಭಕ್ತರನ್ನು ಒಲಿಸಿಕೊಳ್ಳುತ್ತಾರೆ. ಆಧುನಿಕ ಸಮಾಜದಲ್ಲಿ ಇನ್ನೊಂದು ವರ್ಗ ಉಂಟು. ಅವರು ಮುಗ್ಧ ಮುಗುವಿನಂಥವರು. ಅವರಿಗೆ ಸ್ತುತಿ-ನಿಂದೆಗಳು ಬೇಕಾಗಿಲ್ಲ; ಧನಕನಕಾದಿಗಳ ವ್ಯಾಮೋಹವೂ ಇರುವುದಿಲ್ಲ. ದರಿದ್ರ ಧನಿಕರನ್ನು, ಪಂಡಿತ ಪಾಮರರನ್ನು, ಕುಲಜ-ಕುಲಹೀನರನ್ನು, ಸ್ತ್ರೀ ಪುರುಷರನ್ನು ಒಂದೇ ದೃಷ್ಟಿಯಿಂದ ಕಾಣುವ ಹೊಸದೊಂದು ಜ್ಞಾನದ ಕಣ್ಣು ಅವರಿಗೆ ಲಭಿಸಿರುತ್ತದೆ. ಅವರು ಜಪ-ತಪಗಳಲ್ಲಿ, ಶಿವಚಿಂತನ ಅನುಷ್ಠಾನಗಳಲ್ಲಿ, ಅನ್ನದಾನ ವಿದ್ಯಾದಾನಗಳಲ್ಲಿ ತಮ್ಮ ಜೀವನ ಕಳೆಯುತ್ತಾರೆ. ಇಂಥವರಿಂದ ಸಮಾಜಕ್ಕೆ ಕ್ಷೇಮವಿದೆ, ಲೋಕಕ್ಕೆ ನೆಮ್ಮದಿ ಸಿಗುತ್ತದೆ. ಮಾನವನಲ್ಲಿದ್ದ ದೈವೀಶಕ್ತಿಯನ್ನು ಹೊರಗೆ ಪ್ರಕಟಿಸುವಲ್ಲಿ ಇವರದು ಪ್ರಮುಖ ಪಾತ್ರ. ಶಿವನು ನೇರವಾಗಿ ನರರಿಗೆ ಕಾಣಿಸುವದಿಲ್ಲ. ಆದರೆ ಇಂತಹ ಪವಿತ್ರಾತ್ಮರ ಮುಖಾಂತರ ಜಗವನ್ನು ಆಸುರೀಶಕ್ತಿಯಿಂದ ರಕ್ಷಿಸುತ್ತಾನೆ. ಈ ಸತ್ಪುರುಷರ ಮಾಲಿಕೆಯಲ್ಲಿ ಪೂಜ್ಯ ಗುರುಶಾಂತ ಶಿವಾಚಾರ್ಯರೂ ಒಬ್ಬರು.

ಮನುಜನಾಗಿ ಹುಟ್ಟಿದ ಯಾರಿಗೂ ಸಿಟ್ಟು ಬಿಟ್ಟಿಲ್ಲ. ಶಿವಯೋಗಿಗಳೂ ಸಿಟ್ಟಿಗೆ ಬರುತ್ತಾರೆ. ಯಾರ ಮೇಲೆ ? ಅಧರ್ಮಿಗಳ ಮೇಲೆ ಮತ್ತು ಅನ್ಯರ ನೆಮ್ಮದಿಯನ್ನು ಕೆಡಿಸುವ ಕುಹಕಿಗಳ ಮೇಲೆ. ಶಿವಯೋಗಿಗಳ ಬಾಳಿನಲ್ಲಿ ಸಂಕಟಗಳೂ ಬಹಳ ಬಂದಿವೆ. ಅವುಗಳನ್ನು ಶಾಂತಚಿತ್ತದಿಂದ ನುಂಗಿಕೊಂಡಿದ್ದಾರೆ. ನಂಜುಂಡನಂತೆ ಸಾತ್ವಿಕ ಶಕ್ತಿಯ ಆತ್ಮಬಲದ ಮುಂದೆ ತಾಮಸ ಶಕ್ತಿಯು ಶರಣಾಗತ ಆಗಬೇಕಾಗುತ್ತದೆ!

ಮಾನವನ ಸಿಟ್ಟನ್ನು ಜ್ಞಾನಿಗಳು ಮೂರು ತೆರನಾಗಿ ವಿಂಗಡಿಸಿದ್ದಾರೆ. ತಾಮಸ ಸಿಟ್ಟು, ರಾಜಸ ಸಿಟ್ಟು ಮತ್ತು ಸಾತ್ವಿಕ ಸಿಟ್ಟು ಇವೇ ಆ ಪ್ರಕಾರಗಳು. ದುಷ್ಟರ ಪ್ರಕೃತಿಯಿಂದ ಹೊರಡುವ ಸಿಟ್ಟು ತಾಮಸ ಸಿಟ್ಟು. ವಿಲಾಸಿ ವಿದ್ವಾನ ಹಾಗೂ ವಿಶಾಲದೃಷ್ಟಿಯವರ ಸಿಟ್ಟು ರಾಜಸ ಸಿಟ್ಟು. ಸತ್ಪುರುಷರ ಲಿಂಗಮಯ ದೇಹದಿಂದ ಹೊರಬರುವ ಸಿಟ್ಟು ಸಾತ್ವಿಕ ಸಿಟ್ಟು.

ತಾಮಸ ಸಿಟ್ಟು, ಕಾಯ್ದ ಕಬ್ಬಿಣದ ಮೇಲೆ ಎಳೆದ ಗೆರೆಯಂತೆ ಇರುತ್ತದೆ. ಒಮ್ಮೆ ಮೂಡಿದರೆ ತೀರಿತು ಅಸುನೀಗುವತನಕ ಅಳಿಯದೆ ಉಳಿಯುತ್ತದೆ. ರಾಜಸ ಸಿಟ್ಟು ಉಸುಕಿನಲ್ಲಿ ಎಳೆದ ಗೆರೆಯಂತೆ ಹುಟ್ಟುತ್ತದೆ. ಉಸುಕಿನ ಮೇಲಿನ ಗೆರೆಯು ಗಾಳಿಗೆ ಮಳೆಗೆ ಮಾಯವಾಗುತ್ತದೆ ಆದರೆ ಸಾತ್ವಿಕ ಸಿಟ್ಟಿನ ಸ್ವರೂಪ ಎಂತಹದು ? ಅದು ನೀರಿನ ಮೇಲೆ ಎಳೆದ

ಗೆರೆಯಂತೆ ಕ್ಷಣ ಭಂಗುರ. ನೀರಿನ ಮೇಲೆ ಎಳೆದ ಗೆರೆಯು ಎಳೆಯುತ್ತ ಹೋದಂತೆ ತಕ್ಷಣವೇ ಅಳಿಯುತ್ತ ಬರುತ್ತದೆ. ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯರ ಸಿಟ್ಟು ಸಾತ್ವಿಕ ಪ್ರಕಾರದ್ದು.

ಕರ್ನಾಟಕದಲ್ಲಿ ವಿದ್ಯಾಪ್ರಸಾರ ಮಾಡಿದ ಅನೇಕ ಜನ ವಿದ್ಯಾಪ್ರೇಮಿಗಳಲ್ಲಿ ವೀರಶೈವ ಸ್ವಾಮಿಗಳವರು ಅಗ್ರಗಣ್ಯರು. ಹಿರೇಜೇವರಗಿಯ ಶ್ರೀ ಗುರುಶಾಂತ ಶಿವಾಚಾರ್ಯರೂ ಸಹ ತಮ್ಮ ಪಾಲಿನ ಕರ್ತವ್ಯ ಮಾಡಿ ಸಮಾಜದ ಋಣವನ್ನು ತೀರಿಸಿದ್ದಾರೆ. ಹಿರೇಜೇವರಗಿಯಲ್ಲಿ ಶ್ರೀ ಶಾಂತಲಿಂಗೇಶ್ವರ ಮಾಧ್ಯಮಿಕ ಶಾಲೆಯನ್ನು ೧೯೫೫ ರಲ್ಲಿ ಸ್ಥಾಪಿಸಿದರು. ಸೋಲಾಪೂರ ಜಿಲ್ಲೆಯ ದುಧನಿಯಲ್ಲಿ ೧೯೬೦ ರಲ್ಲಿ ಸ್ಥಾಪಿತವಾದ ಶ್ರೀ ಸಿದ್ಧೇಶ್ವರ ಹೈಸ್ಕೂಲವು ಪೂಜ್ಯ ಶಿವಯೋಗಿಗಳವರ ಹಾಗೂ ಅವರ ಶಿಷ್ಯರಾದ ಶ್ರೀ ಹನುಮಂತರಾವ ದೇಸಾಯಿ ವಕೀಲರ ಪರಿಶ್ರಮದ ಫಲವಾಗಿ ಬೆಳೆದು ಬಂದಿದೆ.

ಶಿಕ್ಷಣ ಸಂಸ್ಥೆಗಳು ನಿರ್ವಿಘ್ನವಾಗಿ ನಡೆಯಬೇಕು. ಶಿಕ್ಷಕರು ನೆಮ್ಮದಿಯಿಂದ ಬದುಕಬೇಕು ಎಂಬ ಕಳಕಳಿ ಶಿವಯೋಗಿಗಳ ಧಮನಿ ಧಮನಿಗಳಲ್ಲ ಮಿಡಿಯುತ್ತಿದೆ. ಅವರು ಶಿಕ್ಷಣ ಸಂಸ್ಥೆಯ ಪ್ರಮುಖರಾದಾಗ್ಯೂ ಸಹ ತಮ್ಮ ಅಧಿಕಾರದ ಚಲಾವಣೆಯನ್ನು ತಪ್ಪಿ ಸಹ ಮಾಡಿದವರಲ್ಲ. ಪರಿಶ್ರಮವು ಅವರಿಗೆ ಆದರೆ, ಫಲವು ಅನ್ಯರಿಗೆ. ಶ್ರಮವು ಶಿವಯೋಗಿಗಳಿಗೆ ಶ್ರೇಯಸ್ಸು ಶಿಷ್ಯರಿಗೆ. ಇಂಥ ಉದಾತ್ತ ಜೀವನ ಸಾಗಿಸುವವರು ಈ ಸಮಾಜದಲ್ಲಿ ಅನ್ಯರು ಇದ್ದಾರೆಯೋ ಎಂಬ ಪ್ರಶ್ನೆ ಬರುತ್ತದೆ.

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಚತೇ।

ಇದು ಗೀತೆಯ ಸಂದೇಶ. ಇದಕ್ಕನುಸರಿಸಿ ಶ್ರೀಗಳವರು ವಾಕ್‌ತಪಸ್ಸನ್ನು ಗೈದು ವಾಕ್‌ಸಿದ್ಧಿಯನ್ನು ಸಾಧಿಸಿದ್ದಾರೆ. ವಿನಯ, ಸೌಜನ್ಯ, ಸಹನೆ, ಸಮಾಧಾನ, ನಿರ್ಪ್ರಂಚನೆ ಹಾಗೂ ನಿರಪೇಕ್ಷೆ ಇತ್ಯಾದಿ ಸದ್ಗುಣಗಳ ಸಾಕಾರ ಸ್ವರೂಪವೇ ಶಿವಯೋಗಿಗಳು ಎಂಹರೆ ಸತ್ಯಕ್ಕೆ ದೂರಲ್ಲ.

ಇಂದು ನಮ್ಮ ಸಮಾಜದಲ್ಲಿ ಎಲ್ಲಕ್ಕೂ ಬಡತನ ಉಂಟು. ಆದರೆ ಅಲ್ಪವಿದ್ಯಾ ಮಹಾಗರ್ವಿಗಳಿಗೆ, ಅಧಿಕಾರ ದುರುಪಯೋಗಿಗಳಿಗೆ ಸ್ವಜನ ಪಕ್ಷಪಾತಿಗಳಿಗೆ, ವಿಷಯಲಂಪಟರಿಗೆ ಮತ್ತು ಕಾಳಸಂತೆಯ ಕದೀಮರಿಗೆ ಮಾತ್ರ ಬಡತನವಿಲ್ಲ. ಇಂಥವರ ಮಧ್ಯದಲ್ಲಿದ್ದ ಕೆಲವೇ ಕೆಲವು ಜನ ಸತ್ಪುರುಷರಿಗೆ ದಿಕ್ಕುಗಾಣದಾಗಿದೆ. ಅವರ ಹೃದಯಗಳು ತಳಮಳಗೊಂಡಿವೆ. ಅಂತೇನೆ ನಾವಿಂದು ಈ ಪ್ರಪಂಚದಲ್ಲಿ ಕೊಲೆ, ಸುಲಿಗೆ, ಅಶಾಂತಿ, ರೋಗ, ದಂಗೆ, ಯುದ್ಧ ಹಾಗೂ ಅನ್ನ-ಅರಿವೆಗಳ ಅಭಾವಗಳನ್ನು ಕಾಣುತ್ತಿದ್ದೇವೆ.

ಕಗ್ಗತ್ತಲೆಯಲ್ಲಿ ನಡೆಯುವವನಿಗೆ ದಾರಿದೀಪದ ಅವಶ್ಯಕತೆ ಇರುತ್ತದೆ. ಅದರಂತೆ ಈ ಜೀವನಸರಣಿಯಲ್ಲಿ ನಡೆಯುವ ಪ್ರತಿಯೊಬ್ಬ ವ್ಯಕ್ತಿಗೆ ಸಚ್ಚಾರಿತ್ರ್ಯದ ಅವಶ್ಯಕತೆಯುಂಟು. ಶೀಲಗೆಟ್ಟವರಿಗೆ ಮತ್ತು ದುರ್ಮಾರ್ಗಿಗಳಿಗೆ ಶ್ರೀಗಳವರ ಸನ್ನಿಧಿಯಲ್ಲಿ ಸ್ಥಳವಿಲ್ಲ. ಒಕ್ಕಲಿಗರನ್ನು ಮತ್ತು ಶಿಕ್ಷಕರನ್ನು ಕಂಡರೆ ಅವರಿಗೆ ಆನಂದ. ದುಡಿದು ಉಣ್ಣುವ ಕಷ್ಟಜೀವಿಗಳನ್ನು ಕಂಡಾಗ ಹೃದಯ ಉಕ್ಕಿ ಬರುತ್ತದೆ.

ಇಂದಿನ ಶಿಕ್ಷಕರಿಂದ ವಿದ್ಯಾರ್ಥಿಗಳು ಮತ್ತು ಸ್ವಾಮಿಗಳಿಂದ ಶಿಷ್ಯರು ದೂರ ಸರಿಯುತ್ತಿದ್ದಾರೆ. ಭಕ್ತಿ ಬಡವಾಗುತ್ತನಡೆದಿದೆ. ಮತ್ತು 'ಕ್ರತು' ಶಕ್ತಿ ಕಡಿಮೆ ಆಗುತ್ತಲಿದೆ. ಶಿಕ್ಷಕರ ಬಗ್ಗೆ ವಿದ್ಯಾರ್ಥಿಗಳಲ್ಲಿ ಭಕ್ತಿಯಿಲ್ಲ, ಪಾಲಕರಲ್ಲಿ ಗೌರವವಿಲ್ಲ ಹಾಗೂ ಸಮಾಜದಲ್ಲಿ ಸನ್ಮಾನವಿಲ್ಲ. ಹರ-ಗುರು ಚರಮೂರ್ತಿಗಳ ಸ್ಥಿತಿಯೂ ಸಹ ಇಂದಿನ ಶಿಕ್ಷಕರಂತೆ ಆಗಿದೆ. ನವೀನ ಸಂತಾನಕ್ಕೆ ವಿದ್ಯೆ ಬಂದಿದೆ ವಿನಯ ಹೋಗಿದೆ; ಧನವು ಲಭಿಸಿದೆ ಗುಣವು ಲಯವಾಗಿದೆ. ಇದರಿಂದ ನಿರಾಶೆಗೊಂಡ ಗಣ್ಯವಂತರಾದ ಕೆಲ ಶಿಕ್ಷಕರು ಮತ್ತು ಪುಣ್ಯವಂತರಾದ ಕೆಲ ಸತ್ಪುರುಷರು ಅನ್ಯರಿಗೆ ಉಪದೇಶ

ಮಾಡುವವನ್ನು ಬಿಟ್ಟು ಅಂತರ್ಮುಖಿಗಳಾಗಿ ಆತ್ಮ ಪರೀಕ್ಷೆ ಮಾಡಿಕೊಳ್ಳುತ್ತಿದ್ದಾರೆ.

ನಿಸರ್ಗದ ಪ್ರತಿಯೊಂದು ಹುಲ್ಲುಕಡ್ಡಿಯಲ್ಲಿಯೂ ಸಹ ಭಗವಂತನ ಅಸ್ತಿತ್ವವನ್ನು ಕಾಣುವ ಕಣ್ಣು ಅಪ್ಪಗಳವರದು. ಅವರು ನಿಸರ್ಗಪ್ರಿಯರು. ಭಾರತದ ಅನೇಕ ಪವಿತ್ರ ನದಿಗಳಲ್ಲಿ ಮಿಂದು ಬಂದಿದ್ದಾರೆ; ಹಲವಾರು ಪುಣ್ಯ ಸ್ಥಳಗಳನ್ನು ಕಂಡು ಬಂದಿದ್ದಾರೆ. ನಿಸರ್ಗ ರಮಣೀಯವಾದ ತಾಣಗಳಲ್ಲಿ ಮನವನ್ನು ಆಕರ್ಷಿಸುವ ಶಕ್ತಿ ಇರುತ್ತದೆ. ಸೃಷ್ಟಿಕರ್ತನಾದ ಭಗವಂತನ ಬಗ್ಗೆ ಬಲವಾದ ನಂಬುಗೆ ಮೂಡಿ ಬರುವದು ಇಂತಹ ಸ್ಥಾನಗಳಲ್ಲಿಯೆ. ಶ್ರೀಗಳವರು ಹಲವಾರು ಸಲ ಉಗ್ರ ಜಪಾನುಷ್ಠಾನಗಳನ್ನು ಮಾಡಿ ದೇಹದಂಡಿಸಿದ್ದಾರೆ; ಆತ್ಮಬಲವನ್ನು ಬೆಳೆಸಿಕೊಂಡಿದ್ದಾರೆ.

ಅಪ್ಪನವರ ಮಠದಲ್ಲಿ ಪುಣ್ಯತಿಥಿ, ಜಯಂತಿ, ಪುರಾಣ ಸಮಾಪ್ತಿ, ಶಿವರಾತ್ರಿ ಇತ್ಯಾದಿ ಪ್ರಸಂಗಗಳಲ್ಲಿ ಶರಣ–ಶರಣೆಯರು ಹಾಗೂ ಅನೇಕ ಸದ್ಭಕ್ತರು ನೆರೆಯುತ್ತಾರೆ. ಗುರುವಿನ ಸೇವೆ ಮಾಡಿ ಶಿವನ ಕೃಪೆಗೆ ಪಾತ್ರರಾಗಬೇಕೆಂದು ಬಂದವರ ಅಭಿಲಾಷೆಯಿರುವದು ಸ್ವಾಭಾವಿಕ. ಆದರೆ ಹಿರೇಜೇವರಗಿ ಸ್ವಾಮಿಗಳವರದು ವಿಚಿತ್ರ ಸ್ವಭಾವ. ಅವರಿಗೆ ಸೇವೆ ಮಾಡಿಸಿಕೊಳ್ಳುವದರಲ್ಲಿ ತಿಲಮಾತ್ರವೂ ಲಕ್ಷವಿರುವದಿಲ್ಲ; ಹಾಗೂ ಮನಸ್ಸು ಇರುವುದಿಲ್ಲ. ಪ್ರತಿಯಾಗಿ ಭಕ್ತರ ಸೇವೆ ಹಾಗೂ ಯೋಗಕ್ಷೇಮ ಮಾಡುವುದರಲ್ಲಿಯೇ ಅವರಿಗೆ ಆನಂದ ಎನಿಸುತ್ತಿದೆ. ಸಾಂಸಾರಿಕ ತಂದೆಗೆ ತನ್ನ ಮಕ್ಕಳ ಸೌಖ್ಯದ ಕಾತರತೆ ಇರುವಂತೆ ಈ ಧಾರ್ಮಿಕ ತಂದೆಗೆ ತನ್ನೆಲ್ಲ ಭಕ್ತರ ಏಳಿಗೆಯ ಚಿಂತೆ ಸದಾಕಾಲ ಇರುತ್ತದೆ.

ಹಿರೇಜೇವರಗಿ, ಅಕ್ಕಲಕೋಟ, ದುಧನಿ ಇತ್ಯಾದಿ ಕಡೆಗಳಲ್ಲಿ ಶಿವಾಚಾರ್ಯರ ಮಠಗಳಿವೆ. ಆಗಾಗ ಧಾರ್ಮಿಕ ಕಾರ್ಯಗಳನ್ನು ನಡೆಸುತ್ತಾರೆ. ಕವಿಗಳನ್ನು, ಲೇಖಕರನ್ನು, ವಾಗ್ಮಿಗಳನ್ನು ಹಾಗೂ ಸಮಾಜ ಸೇವಕರನ್ನು ಕಂಡಾಗ ಅಪ್ಪಗಳವರ ಆನಂದಕ್ಕೆ ಪಾರವೇ ಇಲ್ಲ. ಕಲಾವಂತರ ಕೇರಿಯನ್ನು ಬೆಳೆಯಿಸುತ್ತಾರೆ. ಆದರೆ ತಾವು ಮಾತ್ರ ಎಲೆಯ ಮರೆಯ ಕಾಯಿಯಂತೆ ಕಾಣದೆ ಇರುತ್ತಾರೆ. ಆತ್ಮ ಪ್ರತಿಷ್ಠೆ ಮಾಡಿಕೊಳ್ಳುವದೆಂದರೆ ಅವರಿಗೆ ಅಸಹ್ಯವೆನಿಸುತ್ತದೆ. "ಜಗವೆಲ್ಲ ನಗುತಿರಲಿ ಜಗದಳವು ನನಗಿರಲಿ" ಎಂಬ ಕವಿವಾಣಿ ಗುರುಶಾಂತರ ಬಾಳಿನ ಉಸಿರಾಗಿದೆ.

ಹಿರೇಜೇವರಗಿ ಹೆಸರಿಗೆ ಮಾತ್ರ ಹಿರಿಯದು ಆದರೆ ಜನಸಂಖ್ಯೆಯ ದೃಷ್ಟಿಯಿಂದ ಕಿರಿಯದು. ಆ ಕಿರಿವೂರಲ್ಲಿ ಗುರುಶಾಂತರು ಉದಯಿಸಿ ಅದಕ್ಕೆ ಹಿರಿಯ ಸ್ಥಾನವನ್ನು ತಂದಿದ್ದಾರೆ. ಅಲ್ಲಿಯ ಜನರು ರಸಿಕರು, ವಿದ್ಯಾಪ್ರೇಮಿಗಳು ಮತ್ತು ಸಂಗೀತ ಹಾಗೂ ನಾಟ್ಯ ಕಲೆಗಳಲ್ಲಿ ನಿಪುಣರು. ಇವರ ಹಿನ್ನೆಲೆಯಲ್ಲಿ ಅಪ್ಪನವರದು ಪ್ರೋತ್ಸಾಹವಿದೆ, ಉದಾರ ಆಶ್ರಯವಿದೆ.

ಅನ್ಯಾಯ, ಅಸತ್ಯದ ಪ್ರಸಂಗಗಳನ್ನು ಎದುರಿಸುವಲ್ಲಿ ಶಿವಯೋಗಿಗಳು ಬಲು ನಿಷ್ಠುರರಾಗುತ್ತಾರೆ. ಧರ್ಮಲಂಡರನ್ನು, ನೀತಿಬಾಹಿರರನ್ನು, ವ್ಯರ್ಥವಾಚಾಳಿಗಳನ್ನು ಮತ್ತು ಡಾಂಭಿಕರನ್ನು ಕಂಡರೆ ಅವರ ಹೃದಯ ತಳಮಳಿಸುತ್ತದೆ. "ಮಾತು ಬೇಡ ಕೃತಿಯಾಗಲಿ, ಘೋಷಣೆ ಬೇಡ ಸಿದ್ಧಿಯಾಗಲಿ" ಎಂಬುವ ಶ್ರೀ ಅರವಿಂದರ ಮಂತ್ರ ಅಪ್ಪನವರ ಜೀವನದ ಉಸಿರಾಗಿದೆ.

ನಾನು ದುಧನಿಯ ಹೈಸ್ಕೂಲದ ಮುಖ್ಯಾಧ್ಯಾಪಕನಾಗಿದ್ದೇನೆ. ಇದೇ ಶಾಲೆಯ ಸಂಚಾಲಕ ಸಮಿತಿಯ ಪ್ರಮುಖರು (President) ಶ್ರೀ ಗುರುಶಾಂತ ಶಿವಾಚಾರ್ಯರು. ಅಧಿಕಾರದ ಗದ್ದುಗೆಯು ಗುಲಾಬಿಯ ಕಂಟಿ ಇದ್ದಂತೆ. ಪುಷ್ಪದ ರಂಗ, ಸುಗಂಧ ಬೇಕೆನ್ನುವವನಿಗೆ ಆ ಕಂಟಿಯ ಮುಳ್ಳುಗಳ ಕಂಟಕ ತಪ್ಪಲಾರದು. ಸಮಾಜ ಹಾಗೂ ಸರಕಾರಗಳಿಂದ ನನಗೆ ಕಂಟಕಗಳು ಬಾರದೆ

ಹೋಗಿಲ್ಲ. ಅಪ್ಪನವರ ಮಂಗಲ ಆಶೀರ್ವಾದದ ಕರುಣೆಯ ಕೈ ನನ್ನ ತಲೆಯ ಮೇಲೆ ಇದ್ದುದರಿಂದ ನನ್ನ ಹಾಗೂ ನಮ್ಮೆಲ್ಲ ಶಿಕ್ಷಕ, ವಿದ್ಯಾರ್ಥಿಗಳ ಜೀವನ ನಿರ್ವಿಘ್ನವಾಗಿ ಸಾಗಿವೆ ಎಂಬುದು ನನ್ನ ದೃಢನಂಬುಗೆ. ಇದಲ್ಲದೆ ಅಂತಹ ಸತ್ಪುರುಷರ ಕೃಪಾ ಛತ್ರದಲ್ಲಿ ನನ್ನ ಕರ್ತವ್ಯ ನಿರ್ವಹಿಸುತ್ತ ಬಂದುದು ನನ್ನ ಪುಣ್ಯವೆಂದೇ ಹೇಳಬಲ್ಲೆ.

ಪವಿತ್ರವಾದ ವಿದ್ಯಾಮಂದಿರಗಳು ಅವುಗಳಲ್ಲಿ ವಿಶೇಷವಾಗಿ ಹಲವು ಮಾಧ್ಯಮಿಕ ಶಾಲೆಗಳು ಕೆಲವು ಜನ ಧನಪಿಶಾಚಿಗಳ ಕಪಿಮುಷ್ಟಿಯಲ್ಲಿ ಸಿಕ್ಕು ಈಗ ವ್ಯಾಪಾರಿ ಕೇಂದ್ರಗಳಾಗಿವೆ. ಪುಂಡರ, ಗುಂಡಾಗಳ ಹಾಗೂ ಲಂಚಖೋರ ಮೇಲಾಧಿಕಾರಿಗಳ ಸ್ವಾರ್ಥದ ಪ್ರತೀಕವಾಗಿ ಕೆಲವು ಮಾಧ್ಯಮಿಕ ಶಾಲೆಗಳು ಹುಟ್ಟಿವೆ. ಹಾಗೂ ನಾಯಿಗಳ ಕೊಡೆಗಳಂತೆ ಹುಟ್ಟುತ್ತಲೇ ಸಾಯಹತ್ತಿವೆ. ನಮ್ಮೀ ಭಾರತದಲ್ಲಿ ಉದಾತ್ತ ಗುರಿಗಾಗಿ ಕಳಕಳಿಯ ಸಮಾಜ ಸೇವೆ ಗಾಗಿ ಬೆಳೆದುಬಂದ ಶಾಲೆಗಳು ಎಷ್ಟೋ ಉಂಟು. ಇಂಥವುಗಳ ಪಂಕ್ತಿಯಲ್ಲಿ ಸೇರಿದ್ದು ನಮ್ಮ ಶ್ರೀಗಳವರ ಶಾಲೆ! ಈ ಕಳೆದ ೧೫ ವರುಷಗಳಲ್ಲಿ ಆ ಶಾಲಾ ಶಿಶುವನ್ನು ಪೂಜ್ಯರು ತನು ಮನ ಧ ನ ಗ ಳ ನ್ನು ಧಾರೆಯೆರೆದು ಪೋಷಿಸಿದ್ದಾರೆ.

ಪೂಜ್ಯಪಾದರು ತಮ್ಮ ಪವಿತ್ರವಾದ ಜೀವನ ವನ್ನು ಸಾಗಿಸುತ್ತ ಇದ್ದಾಗಲೆ ಅರವತ್ತು ಯುಗಾದಿ ಗಳನ್ನು ಕಳೆದಿದ್ದಾರೆ. ಪಾವನ ಚರಿತರ ಪವಿತ್ರ ಮಾರ್ಗದರ್ಶನದ ಅವಶ್ಯಕತೆ ಭಕ್ತರ ನಿಕರಕ್ಕೆ ಇನ್ನೂ ಅತ್ಯಧಿಕವಿದೆ.

ಈ ಪ್ರಪಂಚದಲ್ಲಿ ಹುಟ್ಟಿ ಬಂದ ಮೇಲೆ ಪ್ರತಿಯೊಬ್ಬನು ತನಗೆ ಜನುಮ ಕೊಟ್ಟ ತಂದೆಯ ಋಣವನ್ನು, ಜ್ಞಾನದ ಕಣ್ಣು ಕೊಟ್ಟ ಋಷಿಯ ಋಣವನ್ನು ತೀರಿಸಲೇಬೇಕಾಗುತ್ತದೆ. ಈ ನಿಯಮಕ್ಕೆ ಅನುಗುಣವಾಗಿ ನಾವು ಭಾವಿಕರಾದ ಭಕ್ತರು ಹಿರೇ-ಜೇವರಗಿಯ ಶ್ರೀ ಷ|| ಬ್ರ|| ಗುರುಶಾಂತ ಶಿವಾಚಾರ್ಯರ "ಷಷ್ಟ್ಯಬ್ದಿ" ಸಮಾರಂಭದಲ್ಲಿ ಪಾಲುಗೊಳ್ಳುವದು ನಮ್ಮ ಕರ್ತವ್ಯ.

ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ೨೫, ೫೦ ಹಾಗೂ ೬೦ ವರುಷಗಳಿಗೆ ಅನುಕ್ರಮವಾಗಿ ಬೆಳ್ಳಿಯ ಹಬ್ಬ (Silver Jubilee) ಚಿನ್ನದಹಬ್ಬ (Golden Jubilee) ಹಾಗೂ ರನ್ನದ ಹಬ್ಬ (Diamond Jubilee) ಎಂದು ಹೆಸರಿಟ್ಟು ಆಚರಿಸುತ್ತ ಬಂದಿದ್ದಾರೆ. ಧಾರ್ಮಿಕ ಹಾಗೂ ಶೈಕ್ಷಣಿಕ ಸಂಘ ಸಂಸ್ಥೆ ಗಳ ಸ್ಥಾಪನೆಗಳ ಅಥವಾ ಆದರ್ಶ ರಾಜ-ರಾಣಿ ಯರ ಇಲ್ಲವೆ ಪ್ರಸಿದ್ಧ ಕವಿ, ಸಾಹಿತಿ, ಸತ್ಪುರುಷರ ಜನ್ಮಗಳ ಆಯಾಕಾಲ ಮಿತಿಗಳಿಗೆ ಅನುಗುಣವಾಗಿ ಬೆಳ್ಳಿ, ಚಿನ್ನ ಹಾಗೂ ರನ್ನ ಮಹೋತ್ಸವಗಳನ್ನು ಆಚ ರಿಸುವದು ಒಪುತರ ಈಗ ಜಾಗತಿಕ ಪರಿಪಾಠವಾಗಿದೆ.

ನಮ್ಮ ಈ ನಾಡಿನ ಹಿರಿಯರು ಹಾಗೂ ಹಿತೈಷಿಗಳು ಹಮ್ಮಿಕೊಂಡ ಈ ಸುಮಂಗಲ ಪ್ರಸಂಗ ದಲ್ಲಿ ಭಕ್ತವೃಂದ ತನು, ಮನ, ಧನಗಳಿಂದ ಶಿವ ಯೋಗಿಯ ಸೇವೆ ಮಾಡಬೇಕಾಗಿದೆ. ಏಕೆಂದರೆ

"ಶಿವಯೋಗಿನ ಸಂತೃಪ್ತೋ ತೃಪ್ತೋ ಭವತಿ ಶಂಕರಃ
ತತೃಪ್ತ್ಯಾತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಂ.

ಎಂಬುದು ಋಷಿವಾಣಿಯ ಉಕ್ತಿಯಿಲ್ಲವೆ?

ಹರ, ಗುರು ಚರಮೂರ್ತಿಗಳ ಅಭ್ಯುದಯ ವಾಗಲಿ. ಭಕ್ತಕೋಟಿಗೆ ಗುರು ಕೃಪೆ ಲಭಿಸಲಿ. ಶಿವನು ಸರ್ವರಿಗೆ ಮಂಗಲವನ್ನುಂಟು ಮಾಡಲಿ.

ಓಂ ಶಾಂತಿ

ಲೇಖಕರು :

— ಸಿ. ಜಿ. ಸವುಗೊಂಡ, M. A., B. Ed.
ಮುಖ್ಯಾಧ್ಯಾಪಕರು,
ಶ್ರೀ ಸಿದ್ಧೇಶ್ವರ ಮಾಧ್ಯಮಿಕ ಶಾಲೆ, ದುಧನಿ.

# ಶ್ರೀ ಗುರುಶಾಂತನ ಸ್ಮರಣ

★

ಜನಹಿತ ಸೂಚಕ ಭಕ್ತರ ರಕ್ಷಕ ।
ಶ್ರೀ ಗುರುಶಾಂತನ ತಿರುಳೇನೋ ?
ಉದಾತ್ತ ಹೃದಯ ಲೋಕ ಕಲ್ಯಾಣ ।
ಸಮತಾ ಭಾವನೆಯಲ್ಲೇನೋ ? ॥ ೧ ॥

ಶಾಂತಿಯ ದೂತ ಕರುಣಾಸಾಗರ ।
ತ್ಯಾಗ ಯೋಗಿಯ ಗುರುತೇನೋ ?
ಮಾಯದ ತ್ಯಾಗ ಶಾಂತಿಯ ಯಾಗ ।
ಇವೇ ಕುರುಹುಗಳಲ್ಲೇನೋ ? ॥ ೨ ॥

ಶಿಕ್ಷಣ ಪ್ರೇಮಿ ಶಿಕ್ಷಾವಂತ ।
ಪ್ರಣವಸ್ವರೂಪಿಯ ಮರ್ಮೇನೋ ?
ದುಧನಿ ಜೇವರಗಿ ಹೈಸ್ಕೂಲಗಳ ।
ಸ್ಥಾಪಿತ ಸ್ಥಿರತೆಗಳಲ್ಲೇನೋ ? ॥ ೩ ॥

ಶ್ರೀ ಗುರು ಮಹಾತ್ಮ ಬಾಲ ತಪಸ್ವಿ ।
ನಿಷ್ಠಾವಂತರ ನೆನಪೇನೋ ?
ಕಾಳಿ ಭವಾನಿ ವಾಡೆತೋಟದ ।
ಉಗ್ರ ತಪಸ್ಸುಗಳಲ್ಲೇನೋ ? ॥ ೪ ॥

ವೀರ ವಿವೇಕಿ ಬಡಕಲು ದೇಹ ।
ಜೇವರಗೀಶನ ಅರಿವೇನೋ ?
ಬ್ರಹ್ಮಚರ್ಯ ವ್ರತ ಮಿತ ಭಾಷೆಗಳು ।
ನೆಮ್ಮದಿ ನಿಷ್ಠೆಗಳಲ್ಲೇನೋ ? ॥ ೫ ॥



ಲೇಖಕರು :

ಶ್ರೀ ಷ. ಬ್ರ. ಷಡಕ್ಷರ ಶಿವಾಚಾರ್ಯರು
ಸಂಸ್ಥಾನ ಮಠ, ಶಿರಾಢೋಣ.

# ನಾ ಕಂಡ ನನ್ನ ಗುರುದೇವ



ಲೇಖಕರು :
ಪಂ. ಶಾಂತಶರ್ಮಾ ಹಿರೇಮಠ, M. A.
'ಕಾವ್ಯ ತೀರ್ಥ' 'ಸಾಹಿತ್ಯ ವೇದಾಂತಾಚಾರ್ಯ'

ಜಗತ್ತಿನಲ್ಲಿ ಸ್ವಸುಖ ಸುಖಿತ್ವದ ಜನರೇ ಬಹು ಸಂಖ್ಯಾಕರಿರುವರಲ್ಲದೆ ತಾವು ಸ್ವತಃ ಕಷ್ಟಪಟ್ಟು ಮತ್ತೊಬ್ಬರಿಗೆ ಸುಖವನ್ನುಂಟು ಮಾಡುವ ಪರಸುಖ ಸುಖಿತ್ವದ ಭಾವನೆಯುಳ್ಳ ಮಹಾನ್ ವ್ಯಕ್ತಿತ್ವದ ಮಹಾತ್ಮರೆಷ್ಟು ಜನ ? ಅಂಗುಲಿ ಗಣನಿಯರೇ ಸರಿ. ಇಂತಹ ಉದಾರ ವಿಶಾಲ ಮತ್ತು ಸದುಹೃದಯ ಉಳ್ಳವರಿಗೇನೇ ಮಹಾತ್ಮರೆಂದು ಕರೆಯುತ್ತಾರೆ. ಇವರೇ ಗುರುಪದಕ್ಕೆ ಅರ್ಹರು. ಅವರನ್ನು ಸಕಲ ಶಾಸ್ತ್ರಗಳು ಮುಕ್ತಕಂಠದಿಂದ ಸ್ತುತಿಸಿವೆ. ಅಂತಹ ಮಹಾನ್ ಪುಣ್ಯಪುರುಷರ ಪಂಕ್ತಿಯಲ್ಲಿ ನನ್ನ ದೈವಿ ಭಕ್ತಿ-ಶಕ್ತಿಗೂ ಆದ್ಯಕಾರಣರಾದ ನನ್ನ ಶ್ರೀ ಪರಮ ಪೂಜ್ಯಪಾದರಾದ ಪ್ರಾತಃಸ್ಮರಣೀಯ ಗುರುದೇವ "ಬಾಲ ಶಿವಯೋಗಿ" ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯರೊಬ್ಬರು. "ಕುಲಂ ಪವಿತ್ರಂ ಜನನೀ-ಕೃತಾರ್ಥ ವಸುಂಧರಂ ಪುಣ್ಯವತೀಚ ಏನ" ಎಂದು ಸ್ಮೃತಿ ಸ್ಮರಿಸಿದಂತೆ ಈ ಮಹಾತ್ಮರು ಸೊಲ್ಲಾಪುರ ಜಿಲ್ಲೆಯ ಅಕ್ಕಲಕೋಟ ತಾಲೂಕಿಗೆ ಸಂಬಂಧಿಸಿದ "ರುದ್ರವಾಡಿ" ಗ್ರಾಮದಲ್ಲಿ ಹಿರೇಮಠದ ದಂಪತಿಗಳ ಪವಿತ್ರ ಉದರದಲ್ಲಿ ೧೯೧೩ ರಲ್ಲಿ ಜನಿಸಿದರು. ಶ್ರೀಗಳವರ ತಂದೆಯ ಹೆಸರು ಶ್ರೀ ಗುರುಸಿದ್ದಯ್ಯ ಸ್ವಾಮಿ, ತಾಯಿ ಶ್ರೀಮತಿ ದಾನಮ್ಮ. ಮಠದ ಮಹತ್ತ ಮೊಳಕೆಯಲ್ಲಿ ತೋರುವಂತೆ ಶ್ರೀಗಳವರ ಭಾವೀ ಜೀವನದಲ್ಲಿ ಆಗತಕ್ಕ ಮಹಾನ್ ಕಾರ್ಯಗಳು ಬಾಲ್ಯ ದಲ್ಲಿಯೇ ಬಯಲಿಗೆ ಬಂದವು. ಅವರ ನೋಟ ನುಡಿಗಳಿಂದಲೇ ನಾನಾಪ್ರಕಾರವಾದ ರೋಗಗಳಿಂದ ಪೀಡಿತರಾದ ಜನರು ರೋಗಮುಕ್ತರಾಗಿ ಸುಖ, ಶಾಂತಿಯನ್ನು ಹೊಂದಿದ್ದಾರೆ.

ಚಿಕ್ಕವರಿರುವಾಗಲೇ ಜೊಕ್ಕ ಸ್ವಭಾವದ ಶ್ರೀಗಳು ಸ್ವಗ್ರಾಮದಲ್ಲಿ ಮರಾಠಿ ಶಿಕ್ಷಣವನ್ನು ಪಡೆಯಲಾರಂಭಿಸಿದರು. ಸಮವಯಸ್ಸಿನ ಸಕಲ ಬಾಲಕರಲ್ಲಿ ಪಾಠ್ಯ ಪಂದ್ಯಗಳೆರಡಕ್ಕೂ ಮುಂದಾ-ಗಿದ್ದರು. ಕಾಲಕ್ಕನುಗುಣವಾಗಿ ಬಹುದಿನ ಅಧ್ಯಯನ ಮುಂದೊರೆಯದೇ ಹೋಯಿತು. ಶ್ರೀಗಳ ಚಿಕ್ಕವಯ ಜೊಕ್ಕ ಮನ, ಹಿತಮಿತ ಭಾಷಣ ಇವೆಲ್ಲಕ್ಕೂ ಮನ ಸೋತು ಹಿರೇಜೇವರಗಿಯ ಬೃಹನ್ಮಠಾಧ್ಯಕ್ಷರಾದ ಲಿಂ. ಶ್ರೀ ಷ॥ ಬ್ರ॥ ಸಿದ್ಧರಾಮ ಶಿವಾಚಾರ್ಯ ಮಹಾ ಸ್ವಾಮಿಗಳು ತಮ್ಮಯ ಪುತ್ರ ವರ್ಗಿಯ ಮಠಕ್ಕೆ ಉತ್ತರಾಧಿಕಾರಿಗಳನ್ನಾಗಿ ನೇಮಿಸಿಕೊಂಡರು. "ವಿದ್ವಾನ್ ಸರ್ವತ್ರ ಪೂಜ್ಯತೆ" ಎಂಬ ವಾಕ್ಯದ ಇಂಗಿತಾರ್ಥವನ್ನರಿತ ಶ್ರೀಗಳವರು ಪ್ರಾಕೃತಭಾಷೆ ಯಿಂದ ಮಾತ್ರ ಸಂತುಷ್ಟರಾಗದೇ ಸಂಸ್ಕೃತ ಅಧ್ಯ ಯನಕ್ಕೆ ಹವಣಿಸಿದರು. ಸಂಸ್ಕೃತವು ಜನಸಾಮಾನ್ಯ ರಿಗೆ ಅಷ್ಟೊಂದು ಸರಸವಾಗದಿದ್ದರೂ ಈ ಸುರ ಭಾಷೆಯ ಸವಿ ಸವಿಯಲು ಇಚ್ಛಿಸಿದರು. ತತ್ಕಾಲ ದಲ್ಲಿ ವಟುಗಳ ಅಧ್ಯಯನಕ್ಕಾಗಿ ಸಿಂಧಗಿ, ಸೊಲ್ಲಾಪುರ ಯಾದಗಿರಿ ಹಾಗೂ ಶಿವಯೋಗ ಮಂದಿರ ಇವೇ ಮೊದಲಾದ ಸ್ಥಾನಗಳಲ್ಲಿ ಸಂಸ್ಕೃತ ಪಾಠಶಾಲೆಗಳು ನಡೆಯುತ್ತಿದ್ದವು. ಸಿಂಧಗಿ ಮತ್ತು ಸೊಲ್ಲಾಪುರ ಇವೇ ಸಮೀಪದ ಊರುಗಳಾದ್ದರಿಂದ ಮೊದಲು ಕೆಲವು ದಿನ ಸಿಂಧಗಿ ಪಾಠಶಾಲೆಯಲ್ಲಿ ಅಧ್ಯಯನ ಮುಗಿಸಿದರು. ಭಕ್ತರ ಆಗ್ರಹದ ಮೂಲಕ ಶ್ರೀಗಳವರ ಪಟ್ಟಾಭಿಷೇಕ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತು. ಇಷ್ಟು ಅಲ್ಪವಿದ್ಯೆಗೆ ಸಂತೃಪ್ತಸದೆ ಅವರು ಪುನಃ ಸೊಲ್ಲಾಪುರದ ವಾರದ ಸಂಸ್ಕೃತ ಪಾಠಶಾಲೆಗೆ ಆಗಮಿಸಿದರು. ಅಲ್ಲಿ ಸರ್ವಶಾಸ್ತ್ರಗಳಲ್ಲಿ ಪಾರಂಗತರಾದ

ಲಿಂ. ವೇ. ಪಂ. ಜಗದೀಶ ಶಾಸ್ತ್ರಿಗಳು ನಾಲವಾರ ಇವರು ಅಧ್ಯಾಪನ ಕಾರ್ಯವನ್ನು ಮಾಡುತ್ತಿದ್ದರು. ಶ್ರೀಗಳವರು ಅವರ ಮೆಚ್ಚುಗೆಗೆ ಪಾತ್ರರಾಗಿ ಸಂಸ್ಕೃತ ಮತ್ತು ವೈದಿಕ ಅಭ್ಯಾಸವನ್ನು ಆಮೂಲಾಗ್ರವಾಗಿ ಅಭ್ಯಸಿಸಿದರು.

ಶ್ರೀಗಳವರು ಈಗಿನಂತೆ ಅಧ್ಯಯನ ಕಾಲ–ದಲ್ಲಿಯೂ ಎಲ್ಲರಿಗೆ ಬೇಕಾದವರು. "ಆಚಾರಹೀನಂ ನಪುನಂತಿ ವೇದಃ" ಎಂಬುಕ್ತ್ಯರ್ಥವನ್ನು ಅರಿತ ಶ್ರೀಗಳು ಬಾಲ್ಯಕಾಲದಿಂದಲೂ ಇಲ್ಲಿಯವರೆಗೆ ತಮ್ಮ ಆಚಾರಕ್ಕೆ ಚಾಚೂ ತಪ್ಪದಂತೆ ನಡೆದುಕೊಂಡಿದ್ದಾರೆ. ಅವರ ಈ ವರ್ತನಕ್ಕೆ ಭಕ್ತಸಮೂಹವೇ ಪ್ರತ್ಯಕ್ಷ ಸಾಕ್ಷಿಯಾಗಿದೆ.

ಬಹುಮುಖ ವ್ಯಕ್ತಿತ್ವ ಇವರದು. ಶ್ರೀಗಳು ಅಧ್ಯಾತ್ಮ ಮತ್ತು ಸಾಮಾಜಿಕ ಎರಡರಲ್ಲಿಯೂ ಪಳಗಿದವರು. ಅಧ್ಯಾತ್ಮ ಜೀವನಕ್ಕೆ ಆತ್ಮಶಾಂತಿ ಪ್ರಧಾನ, ಆತ್ಮಶಾಂತಿಗೆ ಇಂದ್ರಿಯ ನಿಗ್ರಹವೇ ಮೂಲಕಾರಣ. "ಕರಣಗಳನ್ನು ಖಂಡಿಸದೇ ಮನಸ್ಸು ವಶವಾಗದು." ಅಂತೆಯೇ "ಚಿತ್ತವೃತ್ತಿ ನಿರೋಧಸ್ತಪಃ" ಎಂದು ಮಹಾತ್ಮರು ನುಡಿದಿದ್ದಾರೆ. ಶ್ರೀಗಳವರಿಗೆ ತಪವೇ ತಾಪತ್ರಯ ಹರಣಕ್ಕೆ ಮೂಲವೆಂಬುದು ಹೊಳೆಯದಿರಲಿಲ್ಲ. "ಮಾಡಲಿಲ್ಲವೇ ತಪವನು ಮಾಡಲಿಲ್ಲವೆ ಕೂಡೆ ಸುಗುಣದೊಡನೆ ತಿಳಿದುನೋಡಿ ತ್ರಿವಿಧ ಕರಣದಲ್ಲಿ" ಎಂಬ ನಿಜಗುಣರ ನಿಜೋಕ್ತಿಯಂತೆ ಶ್ರೀಗಳು ಮನಮುಟ್ಟಿ ತಪವನ್ನಾರಂಭಿಸಿದರು. ಮೊದಲು ತಮ್ಮದೇ ಆದ ಹಿರೇಜೇವರಗಿಯ ಶ್ರೀಮಾನ್ ಶಿವರಾಯ ಪಾಟೀಲ ಇವರ 'ವಾಡೆತೋಟ' ಎಂಬ ಹೆಸರಿನ ಬಿಲ್ವವನದಲ್ಲಿ ೧೯೩೭ ರಲ್ಲಿ ಕಠೋರ ತಪವಗೈದರು. ಅನಂತರ ೧೯೩೮ ರಲ್ಲಿ ಅಕ್ಕಲಕೋಟದ ಶ್ರೀಮಾನ್ ಪತ್ತೆಸಿಂಹ ಮಹಾರಾಜರ ಉದ್ಯಾನದಲ್ಲಿರುವ ಜಗನ್ಮಾತಾ ಕಾಳಿಕಾ ಭವಾನಿ ಮಂದಿರದಲ್ಲಿ ನಿರಾಹಾರ ಉಳ್ಳವರಾಗಿ ನಿರಂತರ ೪೧ ದಿನಗಳವರೆಗೆ ಉಗ್ರ ಅನುಷ್ಠಾನಗೈದರು. ಈ ಅನುಷ್ಠಾನ ಸಮಾಪ್ತಿಗೆ ಲಿಂ. ವೀರತಪಸ್ವಿ ಶ್ರೀ ಷ॥ ಬ್ರ॥ ಚನ್ನವೀರ ಶಿವಾಚಾರ್ಯ ಮಹಾಸ್ವಾಮಿಗಳು ಬೃಹನ್ಮಠ ಹೊಟಗಿ ಇವರು ಆಗಮಿಸಿದ್ದರು. ಶ್ರೀಗಳವರ ಆಧ್ಯಾತ್ಮಿಕ ಜೀವನದಲ್ಲಿ ಇದೊಂದು ಮರೆಯಲಾಗದ ಸಂಗತಿ.

ಹಿರೇಜೇವರಗಿ ಗ್ರಾಮ ಸಣ್ಣದಾದರೂ ಸರ್ವ ವಿಧದಿಂದ ಸ್ವಚ್ಛ–ಸುಂದರ ಮತ್ತು ಪವಿತ್ರವಾಗಿರಲು ಶ್ರೀಗಳೇ ಕಾರಣರೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಎರಡು ಸಾವಿರಕ್ಕೂ ಕಡಿಮೆ ಜನಸಂಖ್ಯೆ ಇರುವ ಈ ಗ್ರಾಮದಲ್ಲಿ ಶ್ರೀಗಳವರ ಪ್ರಯತ್ನ ಮತ್ತು ಆಶೀರ್ವಾದಗಳಿಂದಲೇ ಊರಲ್ಲಿ ಗ್ರಾಮಪಂಚಾಯತ, ಪೋಸ್ಟ ಆಫೀಸ ಮತ್ತು ವಿದ್ಯುದ್ದೀಪಗಳು ಲಭ್ಯವಾಗಿವೆ. ಇವೆಲ್ಲವುಗಳಲ್ಲಿ ಶ್ರೀಗಳವರ ಸಾಮಾಜಿಕ ಕಾರ್ಯಕ್ಕೆ ಸಾಕ್ಷಿಯಾಗಿವೆ.

ಶ್ರೀಗಳವರು "ವಿದ್ಯಾಧನಂ ಸರ್ವಧನ ಪ್ರಧಾನಂ" ಎಂಬುದನ್ನರಿತು ವಿದ್ಯಾಪ್ರೇಮಿಗಳಾಗಿದ್ದಾರೆ. ಪ್ರಾಥಮಿಕ ಶಿಕ್ಷಣ ಮುಗಿದ ನಂತರ ಬಡ ಮಕ್ಕಳು ಮುಂದಿನ ಶಿಕ್ಷಣಕ್ಕಾಗಿ ಪರಗ್ರಾಮಗಳಿಗೆ ಹೋಗಿ ಅಧ್ಯಯನ ಮಾಡುವದು. ಸುಲಭ ಸಾಧ್ಯವಲ್ಲ ಎಂಬ ಬಡವರ ಈ ಕಡುದುಃಖವನ್ನು ಅರಿತ ಶ್ರೀಗಳು ಮಾಧ್ಯಮಿಕ ಶಿಕ್ಷಣದಿಂದ ವಂಚಿತರಾಗುವ ಮಕ್ಕಳಿಗಾಗಿ ಹಿರೇಜೇವರಗಿಯಲ್ಲಿ "ಶ್ರೀ ಶಾಂತಲಿಂಗೇಶ್ವರ ಹೈಸ್ಕೂಲ" ಪ್ರಾರಂಭಿಸಿದರು. ಅದರಂತೆ ದುಧನಿ ಗ್ರಾಮದಲ್ಲಿಯೂ "ಶ್ರೀ ಸಿದ್ಧೇಶ್ವರ ಹೈಸ್ಕೂಲ" ಸ್ಥಾಪಿಸಿದರು. ಈಗಲೂ ಈ ಸಂಸ್ಥೆಗಳು ಬಡ ಮಕ್ಕಳಿಗಾಗಿ ದಾರಿದೀಪಗಳಾಗಿವೆ. ಇವರ ಈ ಶೈಕ್ಷಣಿಕ ಕಾರ್ಯಗಳು ಶ್ರೀಗಳ ಶೈಕ್ಷಣಿಕ ಪ್ರೇಮವನ್ನು ಸೂಚಿಸುತ್ತವೆ.



ಧರ್ಮಧ್ವಜ ಹಿಡಿದ ಪೂಜ್ಯ ತಪಸ್ವಿಗಳು.




‘ ಬಾಲ ಶಿವಯೋಗಿಗಳು ’

ಹಿರೇಮಠ ಕುಂಬಾರಗಲ್ಲಿ ಅಕ್ಕಲಕೋಟೆ.



ಅಕ್ಕಲಕೋಟ ಜನರ ಶ್ರದ್ಧಾ ಸ್ಥಾನದಲ್ಲಿಯ
ಪೂಜ್ಯ ಸಮರ್ಥ ಸ್ವಾಮಿ ಮಹಾರಾಜ.

" ಧರ್ಮೋ ರಕ್ಷತಿ ರಕ್ಷಿತಃ " ಎಂಬಂತೆ ವೀರಶೈವ ಧರ್ಮದ ಪರಂಪರಾಗತ ಕಾರ್ಯಗಳನ್ನು ಅನ್ಯೋನ್ಯ ವಾಗಿ ನಡೆಯಿಸಿಕೊಂಡು ಬಂದಿದ್ದಾರೆ ಶ್ರೀಗಳು. ಸ್ವಧರ್ಮ ನಿಷ್ಠೆ, ಪರಧರ್ಮ ಸಹಿಷ್ಣುತೆ ಸ್ವಭಾವ ಇವರದು. ಸಹಾನುಭೂತಿಯ ಜೊತೆಗೆ ಸಮಾನು ಭೂತಿಯಿಂದಲೂ ಅಲಂಕೃತರಾಗಿದ್ದಾರೆ. ಸರ್ವರಿಗೂ ಸರ್ವೇಶ್ವರ ಸಾಕ್ಷಾತ್ ಕಾರವಾಗಲೆಂದು ಪ್ರತಿ ಶ್ರಾವಣ ಮಾಸದಲ್ಲಿ ಪುರಾಣ, ಪ್ರವಚನ ಇತ್ಯಾದಿ ಶಿವಾನುಭವ ಗೋಷ್ಠಿಗಳನ್ನು ಅಕ್ಕಲಕೋಟೆಯ ತಮ್ಮ ಶಾಖಾ ಮಠದಲ್ಲಿ ನಡೆಸಿಕೊಡುವರು. ಅದರಂತೆ ಮೂಲ ಮಠದಲ್ಲಿ ಚೈತ್ರಮಾಸದಲ್ಲಿ ಕಾರ್ಯಕ್ರಮಗಳನ್ನು ನಡೆಸುವರು. ಈ ಕಾರ್ಯಗಳಲ್ಲಿ ಅಪಾರ ಭಕ್ತಸಮು-ದಾಯ ಭಾಗವಹಿಸಿ ತೃಪ್ತಿಹೊಂದುವರು. ಶ್ರೀಗಳವರ ಇನ್ನೊಂದು ಧರ್ಮ ಪ್ರಚಾರದ ಮಹಾನ್‌ಕಾರ್ಯ ವೆಂದರೆ ೧೯೫೮ ರಲ್ಲಿ ಅಫಜಲಪೂರ ತಾಲೂಕಿನ ವೀರಶೈವ ಅಧಿವೇಶನವನ್ನು ಹಿರೇಜೇವರಗಿಯಲ್ಲಿ ನೆರವೇರಿಸಿದರು. ಇವೇ ಮೊದಲಾದ ಕಾರ್ಯಗಳಿಂದ ಧರ್ಮ ಸುಧಾರಕರಿಗೆ ಮಾರ್ಗದರ್ಶಕರಾಗಿದ್ದಾರೆ.

ಸರ್ವರಿಗೂ ತಿಳಿದಂತೆ ವೀರಶೈವ ಧರ್ಮವು ವಿಶಾಲ ಮತ್ತು ಪವಿತ್ರವೂ ಆಗಿದೆ. ಇದರ ವ್ಯಾಪಕತೆಗೆ ಭಾರತದ ಭಿನ್ನ ಭಿನ್ನ ಪ್ರದೇಶಗಳಲ್ಲಿ ಪ್ರತಿಷ್ಠಾಪನೆ ಗೊಂಡ ಪಂಚಪೀಠಗಳೇ ನಿದರ್ಶನಗಳಾಗಿವೆ. ಭಕ್ತಾದಿ ಗಳಲ್ಲಿ ಧರ್ಮಜಾಗೃತಿ ಬರುವದಕ್ಕಾಗಿ ಶ್ರೀಗಳವರು ಪೀಠಾಚಾರ್ಯರನ್ನು ಆಗಾಗ ಸ್ವಗ್ರಾಮಕ್ಕೆ ಬರಮಾಡಿ ಕೊಳ್ಳುತ್ತಲಿದ್ದಾರೆ. ಹಿರೇಜೇವರಗಿಯ ಬೃಹನ್ಮಠವು ಶ್ರೀಶೈಲ ಶಾಖೆಗೆ ಸಂಬಂಧಿಸಿದ್ದರಿಂದ ಶ್ರೀಗಳವರು ೧೯೬೧ ರಲ್ಲಿ ಶ್ರೀಶೈಲಪೀಠಾಧೀಶ್ವರರನ್ನು ಬರಮಾಡಿ ಕೊಂಡು ಮಠದಲ್ಲಿ ಶ್ರೀ ಜ. ಪಂಡಿತಾರಾಧ್ಯಮೂರ್ತಿ ಪ್ರತಿಷ್ಠಾಪನೆ ಮತ್ತು " ಪಂಡಿತಾರಾಧ್ಯ ಗುಹಾ " ಶಿಲಾನ್ಯಾಸವನ್ನು ಶ್ರೀ ಸನ್ನಿಧಿಯವರ ಅಮೃತಹಸ್ತ ದಿಂದ ನೆರವೇರಿಸಿದರು. ಮರುವರ್ಷವೇ ಶ್ರೀ ಕಾಶೀ ಪೀಠಾಧೀಶ್ವರರನ್ನು ಶ್ರೀ ಜ. ಪಂಡಿತಾರಾಧ್ಯ ಗುಹಾದ ಉದ್ಘಾಟನಾ ಸಮಾರಂಭವನ್ನು ಅವರ ಅಮೃತಹಸ್ತ ದಿಂದ ಸಂಪನ್ನಗೊಳಿಸಿದರು.

ಇವೇ ಮೊದಲಾದ ಧಾರ್ಮಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಕಾರ್ಯಕಲಾಪಗಳನ್ನವಲೋಕಿಸಿ ಸರ್ವಧರ್ಮೀಯ ಭಕ್ತರು ಶ್ರೀಗಳಿಗೆ ಚಿರಋಣಿಯಾ ಗಿದ್ದಾರೆ. ಗುರುಗಳ ಗುರುತರ ಉಪಕಾರವು ತೀರಿಸಲು-ಸಾಧ್ಯವಾದರೂ ಅವರ ಅಸಾಧಾರಣ ಜೀವನ ಘಟನೆ ಗಳನ್ನು ಪುನಃ ಸ್ಮೃತಿಪಟಲಕ್ಕೆ ತರುವ ನಿಮಿತ್ತವಾಗಿ ಭಕ್ತಾದಿಗಳು ಷಷ್ಠ್ಯಬ್ಧಿ ಸಮಾರಂಭವನ್ನು ನೆರವೇರಿ ಸಿದ್ದು ಅಪಾರ ಸಂತೋಷದ ವಿಷಯ. ದಯಾಘನನಾದ ದೇವನು ಭಕ್ತರ ಕಲ್ಯಾಣಕ್ಕಾಗಿ, ಸಮಾಜದ ಉನ್ನತಿ ಗಾಗಿ, ಧರ್ಮದ ಏಳಿಗೆಗಾಗಿ ಮತ್ತು ವಿದ್ಯಾಭಿವೃದ್ಧಿ ಗಾಗಿ ಚಿರಾಯುರಾರೋಗ್ಯವನ್ನು ಶ್ರೀಗಳಿಗೆ ದಯ ಪಾಲಿಸಲೆಂದು ಪ್ರಾರ್ಥಿಸುತ್ತೇನೆ.

**ಸತ್ಯಂ ಶಿವಂ ಸುಂದರಮ್**



" ಧರ್ಮೋ ರಕ್ಷತಿ ರಕ್ಷಿತಃ " ಎಂಬಂತೆ ವೀರಶೈವ ಧರ್ಮದ ಪರಂಪರಾಗತ ಕಾರ್ಯಗಳನ್ನು ಅನ್ಯೋನ್ಯ ವಾಗಿ ನಡೆಯಿಸಿಕೊಂಡು ಬಂದಿದ್ದಾರೆ ಶ್ರೀಗಳು. ಸ್ವಧರ್ಮ ನಿಷ್ಠೆ, ಪರಧರ್ಮ ಸಹಿಷ್ಣುತೆ ಸ್ವಭಾವ ಇವರದು. ಸಹಾನುಭೂತಿಯ ಜೊತೆಗೆ ಸಮಾನು ಭೂತಿಯಿಂದಲೂ ಅಲಂಕೃತರಾಗಿದ್ದಾರೆ. ಸರ್ವರಿಗೂ ಸರ್ವೇಶ್ವರ ಸಾಕ್ಷಾತ್‌ಕಾರವಾಗಲೆಂದು ಪ್ರತಿ ಶ್ರಾವಣ ಮಾಸದಲ್ಲಿ ಪುರಾಣ, ಪ್ರವಚನ ಇತ್ಯಾದಿ ಶಿವಾನುಭವ ಗೋಷ್ಠಿಗಳನ್ನು ಅಕ್ಕಲಕೋಟೆಯ ತಮ್ಮ ಶಾಖಾ ಮಠದಲ್ಲಿ ನಡೆಸಿಕೊಡುವರು. ಅದರಂತೆ ಮೂಲ ಮಠದಲ್ಲಿ ಚೈತ್ರಮಾಸದಲ್ಲಿ ಕಾರ್ಯಕ್ರಮಗಳನ್ನು ನಡೆಸುವರು. ಈ ಕಾರ್ಯಗಳಲ್ಲಿ ಅಪಾರ ಭಕ್ತಸಮು-ದಾಯ ಭಾಗವಹಿಸಿ ತೃಪ್ತಿಹೊಂದುವರು. ಶ್ರೀಗಳವರ ಇನ್ನೊಂದು ಧರ್ಮ ಪ್ರಚಾರದ ಮಹಾನ್‌ಕಾರ್ಯ ವೆಂದರೆ ೧೯೫೮ ರಲ್ಲಿ ಅಫಜಲಪೂರ ತಾಲೂಕಿನ ವೀರಶೈವ ಅಧಿವೇಶನವನ್ನು ಹಿರೇಜೇವರಗಿಯಲ್ಲಿ ನೆರವೇರಿಸಿದರು. ಇವೇ ಮೊದಲಾದ ಕಾರ್ಯಗಳಿಂದ ಧರ್ಮ ಸುಧಾರಕರಿಗೆ ಮಾರ್ಗದರ್ಶಕರಾಗಿದ್ದಾರೆ.

ಸರ್ವರಿಗೂ ತಿಳಿದಂತೆ ವೀರಶೈವ ಧರ್ಮವು ವಿಶಾಲ ಮತ್ತು ಪವಿತ್ರವೂ ಆಗಿದೆ. ಇದರ ವ್ಯಾಪಕತೆಗೆ ಭಾರತದ ಭಿನ್ನ ಭಿನ್ನ ಪ್ರದೇಶಗಳಲ್ಲಿ ಪ್ರತಿಷ್ಠಾಪನೆ ಗೊಂಡ ಪಂಚಪೀಠಗಳೇ ನಿದರ್ಶನಗಳಾಗಿವೆ. ಭಕ್ತಾದಿ ಗಳಲ್ಲಿ ಧರ್ಮಜಾಗೃತಿ ಬರುವದಕ್ಕಾಗಿ ಶ್ರೀಗಳವರು ಪೀಠಾಚಾರ್ಯರನ್ನು ಆಗಾಗ ಸ್ವಗ್ರಾಮಕ್ಕೆ ಬರಮಾಡಿ ಕೊಳ್ಳುತ್ತಲಿದ್ದಾರೆ. ಹಿರೇಜೇವರಗಿಯ ಬೃಹನ್ಮಠವು ಶ್ರೀಶೈಲ ಶಾಖೆಗೆ ಸಂಬಂಧಿಸಿದ್ದರಿಂದ ಶ್ರೀಗಳವರು ೧೯೬೧ ರಲ್ಲಿ ಶ್ರೀಶೈಲಪೀಠಾಧೀಶ್ವರರನ್ನು ಬರಮಾಡಿ ಕೊಂಡು ಮಠದಲ್ಲಿ ಶ್ರೀ ಜ. ಪಂಡಿತಾರಾಧ್ಯಮೂರ್ತಿ ಪ್ರತಿಷ್ಠಾಪನೆ ಮತ್ತು " ಪಂಡಿತಾರಾಧ್ಯ ಗುಹಾ " ಶಿಲಾನ್ಯಾಸವನ್ನು ಶ್ರೀ ಸನ್ನಿಧಿಯವರ ಅಮೃತಹಸ್ತ ದಿಂದ ನೆರವೇರಿಸಿದರು. ಮರುವರ್ಷವೇ ಶ್ರೀ ಕಾಶೀ ಪೀಠಾಧೀಶ್ವರರನ್ನು ಶ್ರೀ ಜ. ಪಂಡಿತಾರಾಧ್ಯ ಗುಹಾದ ಉದ್ಘಾಟನಾ ಸಮಾರಂಭವನ್ನು ಅವರ ಅಮೃತಹಸ್ತ ದಿಂದ ಸಂಪನ್ನಗೊಳಿಸಿದರು.

ಇವೇ ಮೊದಲಾದ ಧಾರ್ಮಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಕಾರ್ಯಕಲಾಪಗಳನ್ನವಲೋಕಿಸಿ ಸರ್ವಧರ್ಮೀಯ ಭಕ್ತರು ಶ್ರೀಗಳಿಗೆ ಚಿರಋಣಿಯಾ ಗಿದ್ದಾರೆ. ಗುರುಗಳ ಗುರುತರ ಉಪಕಾರವು ತೀರಿಸಲು-ಸಾಧ್ಯವಾದರೂ ಅವರ ಅಸಾಧಾರಣ ಜೀವನ ಘಟನೆ ಗಳನ್ನು ಪುನಃ ಸ್ಮೃತಿಪಟಲಕ್ಕೆ ತರುವ ನಿಮಿತ್ತವಾಗಿ ಭಕ್ತಾದಿಗಳು ಷಷ್ಠ್ಯಬ್ಧಿ ಸಮಾರಂಭವನ್ನು ನೆರವೇರಿ ಸಿದ್ದು ಅಪಾರ ಸಂತೋಷದ ವಿಷಯ. ದಯಾಘನನಾದ ದೇವನು ಭಕ್ತರ ಕಲ್ಯಾಣಕ್ಕಾಗಿ, ಸಮಾಜದ ಉನ್ನತಿ ಗಾಗಿ, ಧರ್ಮದ ಏಳಿಗೆಗಾಗಿ ಮತ್ತು ವಿದ್ಯಾಭಿವೃದ್ಧಿ ಗಾಗಿ ಚಿರಾಯುರಾರೋಗ್ಯವನ್ನು ಶ್ರೀಗಳಿಗೆ ದಯ ಪಾಲಿಸಲೆಂದು ಪ್ರಾರ್ಥಿಸುತ್ತೇನೆ.

**ಸತ್ಯಂ ಶಿವಂ ಸುಂದರಮ್**



# ಗುರುಶಾಂತ ಜ್ಯೋತಿ



ರಾಗ : ಭೈರವಿ. ತಾಲ : ದಾದರಾ.

ಬೆಳಗಲಿ ಬೆಳಗಲಿ "ಗುರುಶಾಂತ ಜ್ಯೋತಿ" ಬೆಳಗಲಿ।
ತಳಮಳಿಸುವ ಜನಕೆ ಶಾಂತಿ ಸುಖವ ನೀಡಿ ಬೆಳಗಲಿ।
ಕೊಳೆಯು ಕಳೆದು ಅಂಧಃಕಾರ ಪೋಗಿ ಜ್ಞಾನ ತೋರಲಿ ॥ ಪ ॥

ತಂದೆ! ಮೌನವ್ರತವ ಮಾಡಿ ಮೌನ ಮುನಿಯು ಎನಿಸಿದೆ।
ಸಂದು ಇಲ್ಲದೆ ಜಪವ ಮಾಡಿ ಮೌನ ಮುನಿಯು ಎನಿಸಿದೆ ॥ ೧ ॥

ಬಡವ-ಬಲ್ಲಿದರೆಂದು ಎರಡು ಬಗೆಯಲಾರೆ ಓ! ಗುರು।
ಕಡು ಮಮತೆ ತೋರಿ ಭಕ್ತರ ಕಾಯ್ವ ಕರುಣಿ ಶ್ರೀ ಗುರು ॥ ೨ ॥

ನಿನ್ನ ನಾಡು ಪಾವನವಾಯ್ತು ಅಂದಿನಿಂದ ಇಂದಿಗೂ।
ಚನ್ನಬಸವನಾಗಿ ಇರುವೆ ನಮ್ಮಗೆ ನೀ ಎಂದೆಂದಿಗೂ। ॥ ೩ ॥

ವಯವು ಶತದ ಅರ್ಧ ತುಂಬಿ ಮೇಲೆ ಹತ್ತು ಇಂದಿಗೆ।
ಭಯವು ಇಲ್ಲದೆ ವರುಷ ನೂರು ತುಂಬಲೆನ್ನ ತಂದೆಗೆ ॥ ೪ ॥

ಹಿರಿಯ-ಜೇವರ್ಗಿ ಮಠದ ಗುರುವೆ! ನಿನ್ನ ಜಗ ರೇಣುಕ ಪೊರೆಯಲಿ।
ಕಿರಿಯ "ಶಾಂತವೀರ ದೇವ" ನಿನ್ನ ಸ್ತುತಿಸಿ ಬಾಳಲಿ ॥ ೫ ॥

— ಶಾಂತವೀರದೇವರು ಹಿರೇಮಠ
ಬಂದರವಾಡ-ಚಿಣಮಗೇರಿ.

# ವಿಹಿಂತ ಗುರು

ಲೇಖಕರು :
ಶಿವಕುಮಾರ ಸ್ವಾಮಿ, B. A.
'ವೇದಾಂತಾಚಾರ್ಯ' ಹುಬ್ಬಳ್ಳಿ.

ಭಾರತವು ಧರ್ಮ ಮತ್ತು ದೈವಿ ಪರಂಪರೆಗಳಲ್ಲಿ ಪ್ರಥಮವಾಗಿರುವಂತೆ ಗುರು ಸಾಂಪ್ರದಾಯದಲ್ಲಿಯೂ ತನ್ನದೇ ಆದ ಒಂದು ವೈಶಿಷ್ಟ್ಯದಿಂದ ಕೂಡಿಕೊಂಡಿದೆ. ಗುರುವಿಗೆ ದೇವತ್ವದ ಪ್ರಾತಿನಿಧಿತ್ವವನ್ನು ಒದಗಿಸಿದ ದೇಶವೆಂದರೆ ಭಾರತವೇ ಪ್ರಥಮವಲ್ಲದೆ ಮತ್ತೊಂದಿಲ್ಲಾ. ಪರಕೀಯರೂ ಸಹ ಈ ವಿಷಯದಲ್ಲಿ ಐಕ್ಯಮತೀಯರಾಗಿದ್ದಾರೆ. ಸಿಕಂದರನು ಭಾರತ ದಿಗ್ವಿಜಯಕ್ಕೆ ಹೊರಟಾಗ ಅವನ ಗುರುಗಳು ಭಾರತದಿಂದ ಕೆಲವೊಂದು ಪದಾರ್ಥಗಳನ್ನು ತರಲು ತಿಳಿಸಿದರಂತೆ. ಅವೆಲ್ಲವುಗಳಲ್ಲಿ ಶ್ರೇಷ್ಠವಾದದ್ದೆಂದರೆ—ಗುರು —

यदि हो सके तो राजन् एक सद्गुरु भी ले आना।

ಈ ದೇಶದ ಗುರುಗಳ ಗುರುತ್ವಕ್ಕೆ ಬೆರಗಾಗಿದ್ದಾರೆ ಅವರು. ಕಾಲ ಕಾಲಕ್ಕೆ ಅರಿವೇ ಗುರುವಾಗಿ ಅಜ್ಞಾನ-ತಮ ಪರಿಹರಿಸಿ ಸುಜ್ಞಾನ ಬೆಳಗಿನಲ್ಲಿ ಬದುಕಿಸಿದೆ ಲೋಕವನ್ನು. ಬೆಳಕಿಗೆ ಕತ್ತಲೆಯು ವೈರಿಯಾದಂತೆ, ಸುಜ್ಞಾನವೆ ಅಜ್ಞಾನದ ಮಾರಕ. ಪಂಕ್ತಿಯಾಗಿರಿಸಿದ ಪಂಕ ಕಲಂಕರಹಿತ ಕನ್ನಡಿಗಳಲ್ಲಿ ಪ್ರತಿಬಿಂಬಿಸಿದ ಒಂದೇ ಜ್ಯೋತಿಯಂತೆ ಪರಮಾತ್ಮನೇ ತಿಳಿವೆಳಗಿನ ರೂಪದಿಂದ ಮಾನವರ ಹೃದಯಕ್ಕೆ ಅವತರಿಸಿ ಗುರುವಾಗಿದ್ದಾನೆ.

ಈ ರೀತಿ ಪರಮಾತ್ಮನ ಪರಾವತಾರಿಗಳ ಪಂಕ್ತಿಯಲ್ಲಿ ಪೂಜ್ಯ ಶ್ರೀ ಷ॥ ಬ್ರ॥ ಗುರುಶಾಂತ ಶಿವಾಚಾರ್ಯರೂ ಒಬ್ಬರು. ಅವರೀಗ ಅರವತ್ತರ ಆಚೆ-ಯವರು. ತನುವಿಗೆ ಮುಪ್ಪಾದರೂ ದೇವ, ಸಮಾಜ ಕಾರ್ಯಕ್ಕೆ ಈಗಲೂ ಮನಕ್ಕೆ ಯೌವನ. ತಿಳುವಾದ ದೀರ್ಘದೇಹ, ತಿಳಿಗಾವಿಯ ತೆಳ್ಳನ ಅಂಗಿ, ಬಿಳಿಯ ಅಧೋವಸ್ತ್ರ, ಜಟಾಜೂಟಗಳನ್ನವಲೋಕಿಸಿಯೆ ಗುರುತಿಸಬಹುದು ಇವರೊಬ್ಬ ಸಾದಾಜೀವಿಗಳೆಂದು. ಒಣಾಡಂಬರ ಹೆಣಗುವವರಲ್ಲ. ಊದಿಮುಚ್ಚಿದ ಕೆಂಡದಂತಿವರ ಸ್ಥಿತಿ. Simple living and high thinking. ಎಂಬ ಗಾಂಧಿಯವರ ಮಾತಿನ ಸಾರ್ಥಕತೆಯನ್ನು ಸಾಧಿಸಿದವರು. ಆಡಿ ಮಾಡುವ ಸ್ವಭಾವದವರಲ್ಲ, ಕಿಂತು ಮಾಡಿಯೂ ಆಡದ ಮಹಾತ್ಮರಿವರು. ಕೈಕೊಂಡ ಕಾರ್ಯ ಕಡೆಮುಟ್ಟುವತನಕ ದಾರಿ ನಡೆಯುವರು. ಪಿಡಿದ ನೇಮವನು ಎಡಬಿಡದೆ ಮಾಡುವ ಛಲ ಇವರಲ್ಲಿಯೆ ಕಲಿಯಬೇಕು.

Do thy duty which lies nearest thee
Produce ! Produce ! up ! up !
What-so-ever thy hand findeth to do
Do it with thy whole might.

ಎಂದು ಪಾಶ್ಚಾತ್ಯ ಪ್ರಸಿದ್ಧ ಧರ್ಮ ಸುಧಾರಕ ಕಾರ್ಲಾಯಿಲ್ ( Carlyle ) ಹೇಳಿದ್ದಾನೆ. ಮುಂದಿರುವ ಕಾರ್ಯ ಮುಗಿಸಿಯೇ ಮುಂದಿನ ಮಾತು. ಶ್ರೀಗಳಲ್ಲಿ ಧರ್ಮ, ಸಮಾಜ ಮತ್ತು ಶಿಕ್ಷಣದ ಉನ್ನತಿಗೆ ಅಪಾರ ಆಕಾಂಕ್ಷೆ. ಅವರು ಕೇವಲ ಜ್ಞಾನಯೋಗಿಗಳಲ್ಲ, ಕರ್ಮಯೋಗಿಗಳೂ ಅಹುದು. ಕೈಲಾಸವನ್ನು ಕಾಯಕದಲ್ಲಿಯೆ ಕಾಣುವ ಕರ್ಮಠರಿವರು. ಸಿದ್ಧತೆಯ ಸವಿಯನ್ನು ಸಾಧನೆಯಲ್ಲಿಯೆ ಸಾಧಿಸುವ ಸಾಧುಗಳಿವರು.

कुर्वन्नेवेह कर्माणि जिजिविशेच्छतम् समाः।
— ( ईशावास्य )

ಎಂದು ಉಪನಿಷತ್ ಬೋಧಿಸಿದಂತೆ ಕರ್ಮವನ್ನೇ ಜೀವನದ ಹಾಸುಹೊಕ್ಕಾಗಿಸಿಕೊಂಡಿದ್ದಾರೆ. ಕರ್ಮ-

ಕ್ಕಂಜಿ ಮರಣವನ್ನಪ್ಪುವ ಮತಿಹೀನರಂತಲ್ಲವರ ಬಾಳು, ದೇಶ ಸೇವೆಯೇ ;.ಈಶ ಸೇವೆಯೆಂದು ನೆರೆ ನಂಬಿದವರು.

ಜ್ಞಾನಿಯಾಗಿ ಮುಕ್ತನಾಗುವದು ಸುಲಭ ವಾದರೂ, ಗುರುತ್ವ ಹೊಂದಿ ದಾರಿ ದೀಪವಾಗಿ ಲೋಕಕ್ಕೆ ಮಾನಾಪಮಾನ ಸ್ತುತಿನಿಂದೆ ಮತ್ತು ಮೇಲು ಕೀಳುಗಳೆಂಬ ಗಾಳಿಗಂಜದೆ ಪ್ರಜ್ವಲಿಸುವದು ಅಷ್ಟೊಂದು ಸುಲಭ ಸಾಧ್ಯವಲ್ಲ. ಕೀರ್ತಿ ಗೌರವಗಳ ಬಯಕೆಗೆ ಬಾಯಿಬಿಡದವರಾರು ? ಆದರೆ ಶ್ರೀಗಳು ಅಂಥವರಲ್ಲ. ಕೀರ್ತಿ ಗೌರವಗಳು ತಾವಾಗಿಯೆ ಬರು- ವವುಗಳಲ್ಲ ಯೋಗ್ಯ ಕಾರ್ಯಗಳ ಪರಿಪಕ್ವ ಫಲ- ಗಳೆಂಬುದನ್ನು ಅರಿತವರು.

Fame and honour from no condition rise,
Act well your part and there your honour lies.

ಎಂದು ಹೇಳಿದ ಕವಿಯೊಬ್ಬನ ಕವನದಂತೆ ಭಾವ ಪೂರಿತರು. ಜಗವು ಮಿಥ್ಯೆಯೆಂದು ತಾನೇ ತಾನಾಗಿ- ರುವವನಿಗೇನಿದೆ ಜಗದ ಜಂಜಡ ? ಜಗದ ಜಂಗುಳಿಗೆ ಜಂಗಮ ಗುರುವಾಗಿ ಬಂದವನಿಗಲ್ಲವೇ ಅವರೆಲ್ಲರ ಆಗುಹೋಗಿನ ಚಿಂತೆ. ರವಿಸರ್ವಸಾರವನು ಸವಿದುಂಡು ಸೋಂಕಿಲ್ಲದಿರುವಂತೆ ಮಾಡಿಯೂ ಮಾಡದ ಮಹಾ ಮಹಿಮನಾಗಿ ಬದುಕಿರುವ ಬಾಳಿನ ಕಲೆಯನ್ನರಿತವನೆ ನಿಜಗುರು. ತನ್ನ ಅಸ್ತಿತ್ವವನ್ನೆಲ್ಲ ಜಗಕ್ಕಾಗಿ ನೀರು ಬಿಟ್ಟವನು ನಿಜಗುರು.

ಶರಣ ಅರುವಿನ ಮಾರಿ ತಂದೆ ಹೀಗೆ ಅಪ್ಪಣೆ ಕೊಡಿಸಿದ್ದಾರೆ —

" ನಿಜ ಗುರುವಿನ ಇರವು ಹೇಗಿರಬೇಕೆಂದೊಡೆ,
ನಿರ್ಮಲ ಸುಚಿತ್ತನಾಗಿ ತನ್ನ ಸೋಂಕುವ,
ಸುಖ ದುಃಖಗಳು ಬಂದಲ್ಲಿ ಆಗುಚೇಗುವನರಿಯದೆ,
ಫಲಹೊತ್ತ ತರುವಿನಂತೆ ಕೆಚ್ಚಲ ಕ್ಷೀರದಂತೆ,
ಕಪಿತ್ಥದ ಫಲ ಗಟ್ಟಿಗೊಂಡತೆ,
ಹೊರಗಳ ಇರವು ಒಳಗಳ ನಿಜ, ಲೌಕಿಕಕ್ಕೆ ಗುರುವಾಗಿ,
ಪರಮಾರ್ಥಕ್ಕೆ ಸದ್ಗುರುವಾಗಿ ದುಂಡ ಫಳದಂತೆ,
ಹೊರಗಳ ಬಿರುಬು ಒಳಗಳ ಮಧುರ ಸಾರದಂತಿರಬೇಕು
ಕರುಣ ಕಾರುಣ್ಯಾಂಬುನಿಧಿ ಸದ್ಗುರುವಿನ ಇರವು,
ಸದಾಶಿವ ಮೂರ್ತಿ ಲಿಂಗದಲ್ಲಿ "

ಪಾರಮಾರ್ಥಕ್ಕೆ ಸದ್ಗುರುವಾಗುವದರಲ್ಲೇನಿದೆ ಕಷ್ಟ ? ಲೌಕಿಕಕ್ಕೆ ಗುರುವಾಗಬೇಕಾದರೆ ಎಲ್ಲರ ಮನೋಭಾವನೆಯಂತೆ ವರ್ತಿಸಿ ಸರ್ವರನ್ನು ಶಿವಪಥಕ್ಕೆ ತರಬೇಕಾಗುವದು. ಪರರ ದುಃಖವೆಲ್ಲ ನನಗಿರಲಿ ನನ್ನ ಸುಖವೆಲ್ಲ ಪರರಿಗಾಗಲಿ ಎಂಬ ಉದಾತ್ತೋತ್ತಮ ವಿಚಾರದ ಆವಶ್ಯಕತೆ ಇದೆ ಗುರುವಿಗೆ. ದುಃಖ ದುಮ್ಮಾನಗಳಿಂದ ತಪಿಸಿ ಫಲಹೊತ್ತ ತರುವಿನೋಪಾ- ಧಿಯಲಿ, ಕೆಚ್ಚಲ ಕ್ಷೀರದೋಪಾಧಿಯಲಿ ಪರರಿಗೆ ಸುಖ ಬಯಸುವವನೆ ನಿಜಗುರು. ಗುರುವಿನಲ್ಲಿ ಸ್ವಸುಖ ಸುಖಿತ್ವವಿಲ್ಲ. ಪರಸುಖ ಸುಖಿತ್ವವೆ ಮೈಯೊಡಗೂಡಿದ ಗುರುವು ಕರುಣ ವಿದ್ಯೆಯುತನಾಗಿರಬೇಕು. ಕರುಣೆಯ ಕಟಾಕ್ಷವೇ ಮುಕ್ತಿಯನ್ನೀಯಬಲ್ಲುದು. ಸನ್ಯಾಸದ ಲಕ್ಷಣವೇ ಅದು.

आत्मनो मोक्षार्थं जगद्धिताय च

ಎಂದಿದೆ ಮುನಿವಾಣಿ.

The real aim of the Sannyas is for the highest freedom of the self and the good of the world.

ಎಂದಿದ್ದಾರೆ ವಿವೇಕಾನಂದರು. ತಾನುಂಡು ಸುಖಸವಿ- ಯನ್ನು ಪರರಿಗುಣಬಡಿಸುವದೇ ಸನ್ಯಾಸಕ್ಕೆ ಕುರುಹು.

೨೦ ನೇ ಶತಮಾನವೆಂದರೆ ಸತ್ಯಾನೃತ, ಧರ್ಮಾ ಧರ್ಮ, ಮತ್ತು ಧರ್ಮ ವಿಜ್ಞಾನಗಳ ದ್ವಂದ್ವಯುದ್ಧ ಕಾಲ. ಧರ್ಮವೆಂದರೆ ಪರ್ವತದ ತುಟ್ಟತುದಿಯ

ನೋಟಮಾತ್ರ ಪದಾರ್ಥವಲ್ಲ. ಧರ್ಮವು ಕುಲಕೋಟಿ ಗಳನ್ನುದ್ಧರಿಸುವ ಕಾಲ. ಧರ್ಮದ ಅವಶ್ಯಕತೆ ಈಗಿದ್ದಷ್ಟು ಇನ್ನಾವಕಾಲಕ್ಕೂ ಇರಲಿಲ್ಲವೆಂಬುದು ಕಠೋರ ಸತ್ಯ. ಅದು ತನ್ನದೇ ಆದ ವ್ಯಕ್ತಿತ್ವದ ಜೊತೆಗೆ ವೈಜ್ಞಾನಿಕ ತಳಹದಿಯಲ್ಲಿ ಸಾಮಾಜಿಕ ಬೃಹದ್ ಭವನ ನಿರ್ಮಾಣಕ್ಕೆ ನಾಂದಿಯಾಗಬೇಕಾಗಿದೆ. ಇಂತಹ ಧರ್ಮ ಪುರಸ್ಸರ ಸಮಾಜದ ಏಳ್ಗಿಗೆ ಶ್ರಮಿಸಿದವರು ಅಲ್ಪರಲ್ಲದೆ ಬಹಳಿಲ್ಲ. ಅವರಲ್ಲಿ ಶ್ರೀ ಹಿರೇಜೇವರಗಿ ಬೃಹನ್ಮಠಾಧ್ಯಕ್ಷರಾದ ಶ್ರೀಗಳವರ ಹೆಸರು ಅಕ್ಕಲಕೋಟೆಯ ತಾಲೂಕಿನಲ್ಲಿ ಪ್ರಪ್ರಥಮ ಬರುತ್ತದೆ. ಅವರ ಅಪಾರ ಉಪಕಾರಕ್ಕೆ ನಾಂದಿಯಾಗಿವೆ ಅನೇಕ ಶಿಕ್ಷಣ ಸಂಸ್ಥೆಗಳು. ದಾಸೋಹ ಮೂರ್ತಿಗಳಾಗಿದ್ದ ಅವರು ಅನೇಕ ರೀತಿಯಿಂದ ಧಾರ್ಮಿಕಕಾರ್ಯಗಳನ್ನು ಕೈಕೊಂಡು ಹೆಸರಾಗಿದ್ದಾರೆ. ಅವರ ಈ ಕಾರ್ಯಗಳ ಸವಿನೆನಪಿಗಾಗಿ ಭಕ್ತ ಸಮೂಹವು ಷಷ್ಟ್ಯಬ್ಧಿ ಸಮಾರಂಭ ಏರ್ಪಡಿಸಿದ್ದಾರೆ. ಭಕ್ತರ ಈ ಕಾರ್ಯ ಸದಾಸ್ತುತ್ಯವಾಗಿದೆ. ಶ್ರೀಗಳ ಉನ್ನತ ವಿಚಾರ, ಉದಾತ್ತ ಭಾವನೆ, ಅನವರತ ಕಾರ್ಯ ನಿರ್ವಹಣೆ, ಧರ್ಮ ಧುರಿಣತೆ, ಸಾದಾಜೀವನ ಮತ್ತು ಹಿತಮಿತ ವಾಗ್ಝರಿಗಳೆಲ್ಲವು ಮುಂಬರುವ ಮುಮುಕ್ಷುಗಳಿಗೆ ಅನುಕರಣೀಯಗಳಾಗಿವೆ.

ದಯಾಘನನಾದ ದೇವರು ಆಯುರಾರೋಗ್ಯವನ್ನಿತ್ತು ಲೋಕ ಕಲ್ಯಾಣಕ್ಕಣಿಯಾಗಿರಿಸಲೆಂದು ದೇವರಲ್ಲಿ ಪ್ರಾರ್ಥಿಸಿ ಪುನಃ ಮತ್ತೊಮ್ಮೆ ಶ್ರೀಗಳವರಿಗೂ ಅಭಿವಂದಿಸಿ ಲೇಖನಕ್ಕೆ ವಿರಮಿಸುವೆನು.



# ಅರಳಿದ ಹೂವಿನ ಗುರುವಿನ ಭಕ್ತಿ



ಹೂವಾಗಿ ಅರಳಿದ ।
ವಾಸನೆ ಬೀರಿದ ।
ಗುರುವಿನ ಮಹಿಮೆ ।
ರಮಾನಂದ ಹೇಳಿದ । ॥ಪಲ್ಲ॥

ಶಾಂತ ಮೂರುತಿ ।
ಲೋಕೆಲ್ಲ ಪಿರುತಿ ।
ಜನಮನ ಜಗ್ರುತಿ ।
ಸನ್ಮಾರ್ಗ ಮುಕುತಿ । ॥೧॥

ಜಂಗಮ ಕುಲದಲಿ ಜನಿಸಿ ।
ಗುರುಶಾಂತಲಿಂಗೆಂದು ನಮಿಸಿ ।
ತಲೆಬಾಗಿ ನಡೆದವನ ಭಕ್ತಿಯೊ ।
ಎಲ್ಲಕ್ಕೂ ಮಿಕ್ಕಿದ ಶಕ್ತಿಯೊ । ॥೨॥

ರಮಾನಂದ
ಲೇಖಕ, ದಿಗ್ದರ್ಶಕ ಹಾಗೂ ಕಲಾವಿದ.

# ಗುರುವಿನ ಮಹಿಮೆ.

★ ★ ★

ಸೃಷ್ಟಿಕರ್ತನಾದ ಶಿವನು ತನ್ನ ಅಗಾಧ ಲೀಲೆಯಿಂದ ವಿಶ್ವವನ್ನು ನಿರ್ಮಿಸಿ, ಅನೇಕ ಜೀವ ಕೋಟಿಗಳನ್ನು ಹುಟ್ಟಿಸಿದ್ದಾನೆ. ಈ ಜೀವಾತ್ಮನು ಸಮಸ್ತ ಜೀವಕೋಟಿಗಳಲ್ಲೆಲ್ಲ ಸಂಚರಿಸಿ, ಕೊನೆಗೆ ತನ್ನ ಅನೇಕ ಪೂರ್ವಜನ್ಮದ ಸುಕೃತ ಪುಣ್ಯದ ರಾಶಿಯಿಂದ ವೀರಶೈವ ಧರ್ಮದಲ್ಲಿ ಮಾನವನಾಗಿ ಜನಿಸುವನು. ಹುಟ್ಟಿದಂದಿನಿಂದ ಅಂತ್ಯದವರೆಗೂ ಅನೇಕ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಇಂಥ ಸಂಸಾರ ಸಾಗರವನ್ನು ದಾಟಬೇಕಾದರೆ ಪರಮಾತ್ಮನ ಅನುಗ್ರಹವು ಅತ್ಯವಶ್ಯವು. ಈ ಅನು-ಗ್ರಹವನ್ನು ಪಡೆಯಬೇಕಾದರೆ ಸುಲಭವಾದ ಒಂದೇ ಒಂದು ಮಾರ್ಗವೆಂದರೆ, ಪರಿಶುದ್ಧ ಹೃದಯದಿಂದ ಶಂಕರನನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸುವುದು. ಭಕ್ತಿಯು ಜೀವಾತ್ಮನಿಗೂ ಪರಮಾತ್ಮನಿಗೂ ಅನುರಾ-ಗದ ಸಂಬಂಧವನ್ನು ಒದಗಿಸುವ ಸಾಧನೆಯು. ಸರ್ವ ವ್ಯಾಪಕನಾದ ಶಂಭುವನ್ನಾಶ್ರಯಿಸುವ ಮಾನವನಿಗೆ ಶಿವಭಕ್ತನೆಂದು ಕರೆಯುವರು.

ಶಿವ ಕರುಣೆಯು ಗುರು ಕರುಣೆಯ ಮಾಧ್ಯಮದಿಂದ ಹರಿದು ಬರುವದು. ಶಿವನನ್ನು ಕಾಣಬಯಸುವವರು ಆತನನ್ನು ಕಂಡು ಸಾಕ್ಷಾತ್ಕರಿಸಿಕೊಂಡ ಸದ್ಗುರುವನ್ನು ಆದರದಿಂದ ಕಾಣಬೇಕು. ಆತನಿಂದ ಸರಿಯಾದ ಅನುಗ್ರಹವನ್ನು ಪಡೆಯಬೇಕು. ಸಕಲ ಚರಾಚರ ವಸ್ತುಗಳಿಗೊಡೆಯನಾದ ಗಂಗಾಧರನ ಅತುಲ ವೈಭವದ ಯತಾರ್ಥ ಜ್ಞಾನವನ್ನೂ ಆತನ ದಿವ್ಯನಾಮದ ಸರಿಯಾದ ಧ್ಯಾನವನ್ನೂ ಗುರುವಿನಿಂದ ಅರಿತು ಆತನ ಉಪದೇಶದ ಮೇರೆಗೆ ಭಕ್ತಿಯಿಂದ ಸಾಧನ ನಿರತನಾಗಬೇಕು. ಸುದೈವ ಇಂಥ ಸದ್ಗುರುವಿನ ಸಂಗದಲ್ಲಿದ್ದು ಅವರಿಂದ ಅಧ್ಯಾತ್ಮ ವಿದ್ಯೆಯ ನಿತ್ಯ ಶ್ರವಣದಿಂದ ಅದು ಮನದಟ್ಟಾಗುವಂತೆ ನೋಡಿಕೊಳ್ಳಬೇಕು. "ಶಿವ ಪಥವನರಿಯಬೇಕಾದರೆ ಗುರು ಪಥವೇ ಮೊದಲಲ್ಲವೆ?" ಗುರುವು ಸಿಗಬೇಕಾದರೆ "ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ ಮತ್ತೆ ಪಾದದ ಕೆರವಾಗಿ ಗುರುವಿನ ಹತ್ತಲಿರೆಂದನು ಸರ್ವಜ್ಞ" "ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಭಕುತಿ, ದೊರೆಯದಣ್ಣ ಮುಕುತಿ" ಎಂದರು ದಾಸರು. "ಶ್ರೀ ಗುರು ವಚನದಿಂದ ಅಧಿಕ ಸುಧೆಯುಂಟೆ?" ಎಂದರು ನಿಜಗುಣರು. ಅಂತೆಯೇ ಮೊದಲು 'ಗುರು ಕರುಣೆ' ಪಡೆಯಬೇಕು. ಗುರುಕರುಣೆಯಿಲ್ಲದೆ ಶಿವನರಿಯಲು ಬಾರದು. ಸದ್ಗುರು ಅಂಬಿಗನಾಗಿ ಬಂದು ಭವಸಾಗರವ ದಾಟಿಸಿ ಶಿವದಡವ ಮುಟ್ಟಿಸುವನು. ಅದಕ್ಕಾಗಿ ಮನವೇ! ಅಹಂಕಾರವನ್ನು ತೊರೆದು ಅತ್ಯಾದರದಿಂದ ಇಂಥ ಸದ್ಗುರುವಿಗೆ ಸರ್ವಾರ್ಪಣ ಭಾವದಿಂದ ಗುರುವನ್ನು ಸ್ಮರಿಸು. ಅಷ್ಟೇ ತ್ವರಿತವಾಗಿ ಗುರು ಕರುಣೆದೋರುವನು. ಅಂತೆಯೇ ಶೃತಿಗಳು ಸಹ ಗುರುವನ್ನು ಮಹಾದೇವನೆಂದು ಸದಾಶಿವನೆಂದು ಕೊಂಡಾಡುತ್ತವೆ. ಗುರುವಿನ ಮಹಿಮೆ ಅಷ್ಟಿಷ್ಟಲ್ಲ. ಗುರುನಾಮ ಸ್ಮರಣೆಯಿಂದ ಈ ಸಂಸಾರ ನೌಕೆಯನ್ನು ನೂಡಿದರೆ ಭವಸಾಗರದ ಭಯವು ಉಳಿಯುವದೇ? ಇಲ್ಲ. ಅಂದಮೇಲೆ ಜೀವಾತ್ಮನೆ! ಭಕ್ತಿ ಭಾಂಡಾರಿಯಾಗಿ ಈ ಸುಸಂಧಿಯನ್ನು ತಪ್ಪಿಸದೆ ಶಿವಭಜನೆಯಲ್ಲಿಯೂ ಶಿವಯೋಗಿಗಳ ಭಜನೆಯಲ್ಲಿಯೂ ಕಾಲ ಕಳೆದು ಮಾನವ ಜನ್ಮ ಸಫಲಮಾಡಿಕೊಳ್ಳುವದು ಪವಿತ್ರ ಕರ್ತವ್ಯವಾಗಿದೆ. ಮನವೇ! ತಾನಾರು ತಾನು ಬಂದುದೆಲ್ಲಿಂದ, ತೆರಳುವದೆಲ್ಲಿಗೆ? ಈ ಮೊದಲಾದ ಮಾತುಗಳನ್ನು ಅರಿಯಲೆತ್ನಿಸಬೇಕು. ಗುರು ಕರುಣೆ

ಯನ್ನು ಪಡೆದುಕೊಂಡು ಅವರ ನೆರವಿನಿಂದ ದಿವ್ಯಾ-ನಂದವನ್ನು ಗಳಿಸುವದೇ, ಅನುಭವಿಸುವದೇ, ಮಾನವನ ಹಿರಿದಾದ ಮೊದಲ ಕರ್ತವ್ಯ. ಬಸವಣ್ಣನವರು "ಇಲ್ಲಿ ಸಲ್ಲುವವರು, ಅಲ್ಲಿಯೂ ಸಲ್ಲುವರು" ಎಂದು ಹೇಳಿದ್ದಾರೆ. ಅಂದಮೇಲೆ ಸದ್ಬುದ್ಧಿಯಿಂದ ಅಂಗದ ಮೇಲೆ ಲಿಂಗವ ಧರಿಸಿ ಗುರು ಲಿಂಗ ಜಂಗಮಕ್ಕೆ ತನು ಮನ ಧನವನ್ನರ್ಪಿಸುವ ಜೀವಾತ್ಮನಿಗೆ ಸ್ವಲ್ಪ ದಿನಗಳಲ್ಲಿ ಪರಮಾತ್ಮನು ತನ್ನೊಳಗೆ ಅಡಕವಾಗುವನು

ಗುರು ಕರುಣೆ ಪಡೆದುಕೊಂಡ ಮಾನವನಿಗೆ ಕಾಲಾರಿಯ ಪ್ರಾರ್ಥನೆಯೊಂದು ನಂದಾದೀವಿಗೆ ಇದ್ದ ಹಾಗೆ. ಅದು ಹೃದಯ ಕಿಲ್ಮಿಷವನ್ನು ತೊಳೆದು ಅಂತರಂಗ ಶುದ್ಧಗೊಳಿಸುತ್ತದೆ. ಮರ್ಕಟ ಸ್ವಭಾವದ ಮನಸ್ಸನ್ನು ಸ್ಥಿಮಿತದಲ್ಲಿಟ್ಟು ಏಕಾಗ್ರತೆಯನ್ನು ತಂದು ಕೊಡುತ್ತದೆ. ಅಂತರಂಗದ ಶಕ್ತಿಯನ್ನು ಬೆಳೆಸುತ್ತದೆ. ಶಿವನು ಗಾನಪ್ರೀಯನು, ನಾದಪ್ರೀಯನು. ಶಿವಭಕ್ತನು ಅನನ್ಯ ಭಕ್ತಿಯಿಂದ ಭಜಿಸಿದರೆ ಶಿವನು ಓಗೊಡದೆ ಇರನು. ಪ್ರಾರ್ಥನೆ ಜೀವಾತ್ಮನಿಗೂ ಪರಮಾತ್ಮನಿಗೂ ನೇರವಾದ ಸಂಬಂಧವನ್ನು ಬೆಳೆಯಿಸಲು ಸಾಧನವಾಗಿದೆ. ಸಂಸಾರ ತಿಮಿರದಲ್ಲಿ ಸಿಲುಕಿದ ಮಾನವನಿಗೆ ಶಿವನ ಪ್ರಾರ್ಥನೆಯೊಂದು ಅಗಣಿತವಾದ ಸಂಪತ್ತು. ಈಶ್ವರನ ಕುರಿತು ಪ್ರಾರ್ಥನೆ ಭಕ್ತನ ಹೃತ್ಕಮಲವನ್ನು ಅರಳಿಸುತ್ತದೆ. ಕರ್ಮದಿಂದ ಲೇಪವಾಗುವ ಭವದ ಕವಚವನ್ನು ಹರಿದೊಗೆಯುತ್ತದೆ. ಪ್ರಾರ್ಥನೆ ಅಂತ-ರಂಗದ ಕೂಗು. ಅದು ಎಂಥ ಕುಂಭಕರ್ಣಾವಸ್ಥೆಯಲ್ಲಿದ್ದ ದೇವನನ್ನು ಎಚ್ಚರಗೊಳಿಸುತ್ತದೆ. ಜೀವಾತ್ಮನ ಪ್ರಾರ್ಥನೆಗೆ ಭಕ್ತಿ ಸಂಜೀವನಾದ ಶಿವನು ಕರುಣೆ ದೋರುವನು. ಶುಚಿತ್ವವು ಸುಸಂಸ್ಕೃತವು ಜೀವಿಯ ಕುರುಹು. ಸ್ನಾನವು ದೇಹವನ್ನು ಸ್ವಚ್ಛಗೊಳಿಸುವಂತೆ, ಶಿವಭಕ್ತಿಯು ಅಂತರಂಗವನ್ನು ಶುಚಿಗೊಳಿಸುತ್ತದೆ. ಪರಿಶುದ್ಧ ಹೃದಯದಲ್ಲಿ ಶಿವನು ನೆಲಿಸುವನು. ಅದಕ್ಕಾಗಿ ವೈರಾಗ್ಯಮೂರ್ತಿಗಳಾದ ಸಿದ್ಧರಾಮ ಶಿವಯೋಗಿ, ಅಲ್ಲಮಪ್ರಭು, ಚೆನ್ನಬಸವಣ್ಣ, ಅಕ್ಕಮಹಾದೇವಿ ಹಾಗೂ ಶಿವಶರಣರು ಉಪದೇಶಿಸಿದ ವಚನ ನೀತಿಯ ತತ್ವಗಳ ಅರ್ಥವನ್ನು ಅರಿತುಕೊಂಡು ಸಾಗಿದರೆ ಸಂಸಾರದ ಭವರೋಗವು ಅಳಿಸುವದು. ಮಹಾದೇವನು ಭಕ್ತಾಭಿಮಾನಿ ಪರಮ ಸಮರ್ಥನು. ಆತನನ್ನು ಅಂತರಂಗದಲ್ಲಿರಿಸಿಕೊಂಡು ಆದರದಿಂದ ಏಕಾಗ್ರನಾಗಿ ಕಾಣು. ಶಿವನು ಕೃಪಾಪೂರ್ಣನಾಗಿ ಭಕ್ತರ ಅಲ್ಪಧೈರ್ಯವನ್ನು ಪರೀಕ್ಷಿಸುತ್ತಿರುವನು. ಆತನು ಸರ್ವಸ್ವತಂತ್ರನು, ಸರ್ವವ್ಯಾಪಕನು, ಸರ್ವ ಮಂಗಲನು ಆದ ಅಘಹರನನ್ನು ಸ್ವಲ್ಪ ಧೈರ್ಯ ತಾಳಿ ಶಿವಭಕ್ತಿಯನ್ನು ಮುಂದುವರಿಸುವ ಭಕ್ತರಿಗೆ ಕೈವಲ್ಯವನ್ನು ಕಾಣಿಸುವನು. ಆದರೆ ಅಂತರಂಗ ಭಾವದಂತೆ ನಮಗೆ ಫಲವನ್ನು ನೀಡುವನು. ಈ ಶಂಭುವು ಜನರ ಕಲ್ಯಾಣಕ್ಕಾಗಿ ಬೇರೆ ಬೇರೆ ವೇಶಗಳನ್ನು ಆದರದಿಂದ ಧರಿಸಿ, ಬೇರೆ ಬೇರೆ ಅವತಾರಗಳ ಲೀಲೆಯನ್ನು ಕಾಣಿಸುವನು. ಮಹಾದೇವನು ಆಕಾಶದಂತಿರುವನು ಅವನ ಈ ರೂಪವನ್ನು ನೆನೆದರೆ, ಶಿವಕರುಣೆಯನ್ನು ಹೊಂದಿದರೆ ಜನನ ಮರಣದ ಬೀಜವೇ ಇಲ್ಲದಂತಾ-ಗುವದು. ಪರಮಾತ್ಮನು "ಒಲಿದರೆ ಕೊರಡು ಕೊನರುವದು, ಬರಡು ಹಯನಹುದು, ವಿಷವೆಲ್ಲ ಅಮೃತವಹುದು" ಅವನ ಕೃಪಾದೃಷ್ಟಿಯಿಂದ ಕುರುಡ ಕಾಣಬಲ್ಲನು; ಕಿವುಡ ಕೇಳಬಲ್ಲನು; ಮೂಕ ನುಡಿಯಬಲ್ಲನು; ಕುಂಟ ಕುಣಿಯಬಲ್ಲನು; 'ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬರುವನು' ಎರಡೂ ಕೈಗಳಿಂದ ಪಡೆಯುವದಕ್ಕೂ ಅಸಾಧ್ಯವಾಗುವದು. ಇಂಥ ವಿಪುಲ ಔದಾರ್ಯ ಆತನದು. ಇದು ಬರಿ ಬರಡು ನುಡಿಯಲ್ಲ ಪಡೆದವರ ಅನುಭವದ ಮಾತು. ಅದಕ್ಕಾಗಿ ಶಿವನನ್ನು ಹೃದಯದಲ್ಲಿ ದೃಢವಾಗಿ ನೆಲಿಸಿಕೊಂಡು ಶಿವಸಾಯುಜ್ಯವನ್ನು ಪಡೆಯಲೆತ್ನಿಸಬೇಕು.

ಶ್ರೀ ಗುರು ಪರಮ ಪೂಜ್ಯ ಗುರುಶಾಂತ ಶಿವಾಚಾರ್ಯರ ಷಷ್ಟ್ಯಾಬ್ಧಿಯ ನಿಮಿತ್ಯ ನನಗೊಂದು ಈ ಅಲ್ಪಸೇವೆ ಸಲ್ಲಿಸುವ ಸಂಧಿ ಸಿಕ್ಕದ್ದು ನನ್ನ ಪೂರ್ವ ಜನ್ಮದ ಸುಕೃತದ ಫಲವೆಂದು ಭಾವಿಸುವೆನು. ನಿತ್ಯ ಸುಖ–ಶಾಂತಿ ಪಡೆಯಲು ಶ್ರೀ ಗುರು ಪರಮ ಪೂಜ್ಯ ಗುರುಶಾಂತ ಶಿವಾಚಾರ್ಯರು ಅನುಗ್ರಹಿಸಲೆಂದು ಅನನ್ಯ ಭಕ್ತಿಯಿಂದ ಮತ್ತೊಮ್ಮೆ ಪ್ರಾರ್ಥನೆ ಗೈಯ್ಯುವೆನು.

— ಸೌ|| ಉಷಾದೇವಿ ಲ. ಪಾಟೀಲ
ಮಂಗರುಳೆ ಹೈಸ್ಕೂಲ, ಅಕ್ಕಲಕೋಟ.



# ಶ್ರೀ ಗುರುಶಾಂತಗೆ ನಮೋ ನಮೋ



ತಪಯೋಗಿ ಮುನಿವರ ।
ಗುರುಕುಲ ಭೂಷಣ ।
ಯೋಗೀಶ್ವರ । ಜಗದೀಶ್ವರ । || ಪಲ್ಲ ||

ಜೀವನೋದ್ಧಾರಕ । ದಾರಿದ್ರ್ಯ ನಿವಾರಕ ।
ಹಿರೇಜೇವರಗಿ ಶ್ರೀ ಗುರುಶಾಂತೇಶ್ವರ । "ಅ" || ಪಲ್ಲ ||

ಪರಮ ಪವಿತ್ರ । ವೀರ ವೈರಾಗ್ಯ ।
ಜ್ಯೋತಿ ಪುಂಗ । ಈಶ್ವರ ಸಂಗ ।
ಭವದೇವ ಜನ್ಮಗುರು ಗುರುಶಾಂತೇಶ್ವರಗೆ
ನಮೋ ನಮೋ । || ೧ ||

ಊರಿಗೆ ಮಠವೊಂದು ಬಂಗಾರ ಕಳಸ ।
ಪುಣ್ಯಧಾಮರ ವಾಸ ಜೇವರಗಿ ನಿವಾಸ ।
ಹಿರಿಮೆಯ ಹಿರಿಗುರು ಹಿರೇಜೇವರಗಿ ।
ಚರಮೂರ್ತಿ ಮಠಾಧೀಶ । ಜನ ಚಿಂತಿ ಅವನೀಶ । || ೨ ||

ಗುರುಸ್ಮರಣೆ ಭಕ್ತಂಗೆ ।
ಚಿರಶಾಂತಿ ಸದಾಸುಖಿ ।
ಗುರು ಇಲ್ಲದ ಮನುಜ ।
ಜನುಮಿದ್ದು ವ್ಯರ್ಥ ।
ಜಪಿಸುವೆ ಗುರುಧ್ಯಾನ ।
ಕೋರುವೆ ಆರೋಗ್ಯ ಧಾಮ ।
ಗುರುಪುಂಗ ಪಾದಿಂಗೆ ।
ನಮಿಸುವೆ ನಮೋ ನಮೋ । || ೩ ||

— ರಮಾನಂದ
ಲೇಖಕ, ದಿಗ್ದರ್ಶಕ, ಹಾಗೂ ಕಲಾವಿದ.

‘ಬಾಲಯೋಗಿ’

# ಶ್ರೀ ಗುರುಶಾಂತ ಶಿವಾಚಾರ್ಯ





ಶ್ರೀಗುರುವೆ ಸದ್ಗುರುವೆ ಮುದ್ಗುರುವೆ ನಿಜಗುರುವೆ
ನಮಿಸುವೆನು ಚರಣದಲಿ ಭಕ್ತಿಯಿಂದ
ಸಕಲರಿಗೆ ಸಂತಸವ ಸಂತತದಿ ನೀಡುತ್ತ
ಸಾರಿದಿರಿ ಧರ್ಮವನು ಯುಕ್ತಿಯಿಂದ ॥ ೧ ॥

ರುದ್ರವಾಡಿಯಂತಹ ಪುಣ್ಯಮಯ ಭೂಮಿಯಲಿ
ದಾನಮ್ಮನುದರದಲಿ ಜನ್ಮವೆತ್ತು
ಶ್ರೀ ಶಾಂತಲಿಂಗೇಶ ಗುರುಗಳಿಂ ದೀಕ್ಷೆಯನು
ಪಡೆದು ನಡೆದಿರಿ ಮಠದ ಭಾರ ಹೊತ್ತು ॥ ೨ ॥

ಗುರುಗಳಾಣತಿ ಪಡೆದು ಹಡೆದಿರುವ ಅಣುಗನನು
ನೀಡಿ ಆದರು ನಿಜದಿ ದಾನಮ್ಮಾ
ನಿಮ್ಮ ದಾನದ ಮುಂದೆ ಇನ್ನು ದಾನಗಳಿಲ್ಲ
ಎನ್ನುವದು ಜಗವೆಲ್ಲ ನೋಡಮ್ಮ ॥ ೩ ॥

ನೀಡಿದರು ಜಗದೀಶ ಶಾಸ್ತ್ರಿಗಳು ಜ್ಞಾನವನು
ಮಾಡಿದರು ನಿಮ್ಮನ್ನು ದೇವನಂತೆ
ಸುಗುಣಗಳ ಸಂಪದವೆ ದೇವರೆಂದರಿತಿರಲು
ಸಂಬೋಧಿಸಿದೆ ನಾನು ಅದಕೆಯಂತೆ ॥ ೪ ॥

ಶಿವರಾಯ ಪಾಟೀಲ ಇವರುಗಳ ತೋಟದಲಿ
ಮಾಡಿದಿರಿ ತಪವನ್ನು ನಿಯಮದಿಂದ
ದಂಡಿಸುತೆ ದೇಹವನು ಖಂಡಿಸುತೆ ಮನವನ್ನು
ಸೂಡಿದಿರಿ ಕಲ್ಮಷವ ನಿಷ್ಠೆಯಿಂದ ॥ ೫ ॥

ಅಂಕಲದ ಕೋಟೆಯಲಿ ಕಾಳಿಕಾ ಮಂದಿರದಿ
ನಾಲ್ವತ್ತು ದಿವಸಗಳ ನಿಯಮವನ್ನು
ಆಹಾರ ಸೇವಿಸದೆ ಆಕಳಿನ ಹಾಲಿನಲಿ
ಲೀಲೆಯಲಿ ಸವೆಸಿದಿರಿ ಸಮಯವನ್ನು ॥ ೬ ॥

ಜೇವರಗಿ ಊರ ಮಾಡಿದಿರಿ ನಗರ
ಮನೆಗೆದ್ದು ಮಾರು ಗೆಡೆ ಎನ್ನುವಂತೆ
ಗುರುಗಳಾ ಹೆಸರಿನಲಿ ಸೃಜಿಸಿದಿರಿ ಸಂಘವನು
ದೀನರಿಗೂ ಶಿಕ್ಷಣವು ದೊರೆಯುವಂತೆ ॥ ೭ ॥

ಧರ್ಮದಾ ಸೇವೆಯನು ಮರ್ಮದಿಂದಲೆ ಮಾಡಿ
ಕರ್ಮವನು ಕತ್ತರಿಸಿ ಹೂಳಿ ಹಾಕಿ
ಸಮಾಜದ ಸೇವೆಯನು ಮಾಡಿ ಸುಖವನು ಪಡೆದು
ದುಃಖ ದುಮ್ಮಾನಗಳ ಹಿಂದೆ ನೂಕಿ ॥ ೮ ॥

ಇಂದಿಗೇ ಮುಗಿಸಿದಿರಿ ಅರವತ್ತು ವರುಷಗಳ
ಎಂದೆಂದು ನಮಗೆಲ್ಲ ಆನಂದವು
ಮುಂದೆಯೂ ಎಂದೆಂದು ಹೀಗೆಯೇ ಇರಲೆಂದು
ಒಂದಿಸುತ ಕರಗಳನು ಕೋರುತಿಹೆವು ॥ ೯ ॥

ಸ್ವರ್ಗ ನರಕಗಳೆಲ್ಲ ಭಕ್ತಿ ಮುಕ್ತಿಗಳೆಲ್ಲ
ಇಲ್ಲೆ ಇರುವವು ಮರುಳೆ ಭೂಲೋಕದಿ
ಎಂಬ ತತ್ವವನೊಂದು ಬೀರಿದಿರಿ ಜಗಕಿಂದು
ಎಲ್ಲರಿಗೂ ಗುರುವಾಗಿ ಇಹಲೋಕದಿ ॥ ೧೦ ॥

ದೇವರೇ ಮಾನವನ ರೂಪದಲಿ ಅವತರಿಸಿ
ರೋಗಿಗಳ ಭೋಗಿಗಳ ರಕ್ಷಿಸಿದಿರಿ
ಮಾನವರ ವೇಷದಲಿ ಅಡಗಿರುವ ದಾನವರ
ಸತ್ಯವನು ಬದುಕಿಸಲು ಶಿಕ್ಷಿಸಿದಿರಿ ॥ ೧೧ ॥

ಏನು ಬೇಡಲಿ ಗುರುವೆ ಏನು ಕಾಡಲಿ ಗುರುವೆ
ಬೇಡದಲೆ ನೀಡುವುದೆ ನಿನ್ನ ಕಲೆಯು
ಬೇಕು ಬೇಕೆಂಬುದಕೆ ಕೊನೆಯುಂಟೆ ಗುರುದೇವ
ಸಾಕು ಸಾಕೆಂಬುವದೆ ಸುಖದ ನೆಲೆಯು ॥ ೧೨ ॥

— ಪ್ರಾ. ರಾಜಶೇಖರ ಬಡಿಗೇರ.

|| ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋ ನಮಃ ||

# ನಮ್ಮ ಭಾಗ್ಯ ದೇವರು



ಜೀವನು ವಿಕಾಸಹೊಂದಿ ದೇವನಾಗಬೇಕು. ಇದು ವೀರಶೈವದ ಗುರಿ. ಈ ಗುರಿಯ ಸಾಧನೆಗಾಗಿ ಜಗದಾಚಾರ್ಯರೂ, ಮಹಾಸ್ವಾಮಿಗಳವರೂ ಪ್ರಯತ್ನಿಸುತ್ತಲಿದ್ದಾರೆ. ಮಾನವ ಕೋಟಿಯ ಉದ್ಧಾರವಾಗಿ, ದೇಶದಲ್ಲಿ ಶಾಂತಿ ಚಿರಸ್ಥಾಯಿಯಾಗಿ ಉಳಿಯಲಿ ಎಂದು ತಪಸ್ಗೈಯ್ಯುವ ಮಹಾಸ್ವಾಮಿಗಳಲ್ಲಿ ಹಿರೇಜೇವರಗಿಯ ಬೃಹನ್ಮಠದ ಪಟ್ಟದದೇವರಾದ ಶ್ರೀ ಷ. ಬ್ರ. ಬಾಲತಪಸ್ವಿ ಗುರುಶಾಂತ ಶಿವಾಚಾರ್ಯರೊಬ್ಬರು. ಇವರು ಹಿರೇಜೇವರಗಿಯ ಜೊತೆಗೆ ಅಕ್ಕಲಕೋಟ, ದುಧನಿ, ಮಣ್ಣೂರ, ರುದ್ದೇವಾಡಿ, ಅಂದೇವಾಡಿ ಸಂಗೋಳಗಿ ಮತ್ತು ಬೊರೋಟಿ ಮಠಗಳ ಅಧಿಕಾರಿ ಗಳಾಗಿದ್ದಾರೆ.

ಪೂಜ್ಯ ಗುರುವರ್ಯರು ಈ ಭಾಗದ ಜನರಿಗೆ ಭಾಗ್ಯದೇವರಾಗಿ ಭಕ್ತಜನರ ಉದ್ಧಾರಮಾಡುತ್ತಲಿ-ದ್ದಾರೆ. ವೀರಶೈವ ಧರ್ಮದ ಮಹತ್ವ ಪ್ರಚಾರ ಮಾಡುತ್ತ ಜನರಲ್ಲಿ ಧರ್ಮಜಾಗ್ರತೆಯನ್ನು ಮಾಡ-ತೊಡಗಿದ್ದಾರೆ. ಪ್ರತಿವರ್ಷ ಚೈತ್ರಮಾಸ ಶುದ್ಧ ಪ್ರತಿಪದದಿಂದ ದ್ವಾದಶಿಯವರೆಗೆ ಹಿರೇಜೇವರಗಿಯ ಬೃಹನ್ಮಠದಲ್ಲಿ ವಿದ್ವಾಂಸರಿಂದ ಪುರಾಣ ಪ್ರವಚನ ಹೇಳಿಸುವರು. ಕೊನೆಗೆ "ಅಯ್ಯಾಚಾರ ಮತ್ತು ದೀಕ್ಷಾ" ಮಾಡಿಸುವರು. ಇದರಿಂದ ಎಷ್ಟೋ ಜನರು ಉಪಯೋಗ ಮಾಡಿಕೊಳ್ಳುತ್ತಲಿದ್ದಾರೆ. ಅಲ್ಲದೆ ಪ್ರತಿ ಶ್ರಾವಣ ಮಾಸದಲ್ಲಿ ಪುರಾಣ, ಪ್ರವಚನ, ಅಯ್ಯಾ-ಚಾರ, ದೀಕ್ಷಾ ಮೊದಲಾದ ಧಾರ್ಮಿಕ ಕಾರ್ಯಗಳು ಅಕ್ಕಲಕೋಟದಲ್ಲಿ ನಡೆಯಿಸುವರು.

ಗುರುಗಳು ಧಾರ್ಮಿಕ ಕ್ಷೇತ್ರದಲ್ಲಿ ಅಷ್ಟೇ ಅಲ್ಲ ಎಲ್ಲ ಕ್ಷೇತ್ರದಲ್ಲಿ ಭಾಗಿಗಳಾಗಿ ಜನರಲ್ಲಿ ಸಮಾಜದಲ್ಲಿ ಬೆರೆತು ಜನರ ಉದ್ಧಾರ ಮಾಡುತ್ತಲಿದ್ದಾರೆ. ಒಕ್ಕಲಿಗರಿಗಾಗಿ ೧೯೫೫ ರಲ್ಲಿ ತಾಲೂಕಾಮಟ್ಟದ ಒಕ್ಕಲು ತನಃ ಪರಿಷತ್ತು ನಡೆಯಿಸಿ ಒಕ್ಕಲಿಗರಿಗೆ ಮಾರ್ಗ-ದರ್ಶನ ಮಾಡಿದ್ದಾರೆ. ಒಕ್ಕಲಿಗರ ಏಳ್ಗೆ ಸದಾ ಬಯಸುತ್ತಾ ಇದ್ದಾರೆ.

ಇನ್ನು ಶಿಕ್ಷಣಕ್ಷೇತ್ರದಲ್ಲಿ ಸಲ್ಲಿಸುತ್ತಲಿರುವ ಕಾರ್ಯ ಮಹಾ ಹಿರಿಮೆಯದಾಗಿದೆ. ಕೇವಲ ಈ ಭಾಗದಲ್ಲಿ ಮೊದಲು ಶಾಲೆ ನಾಲ್ಕನೇ ತರಗತಿವರೆಗೆ ಇತ್ತು. ಮಕ್ಕಳಿಗೆ ದೂರ ಹೋಗಿ ಶಿಕ್ಷಣ ಕಲೆಯಲು ತೊಂದರೆ ಆಗುವದೆಂದು ತಿಳಿದು, ಊರಲ್ಲಿಯ ಭಕ್ತ ಜನರನ್ನು ಕರೆಯಿಸಿ ಶಿಕ್ಷಣದ ಅವಶ್ಯಕತೆಯ ಬಗ್ಗೆ ತಿಳಿಸಿ ಹೇಳಿದರು. ಜೊತೆಗೆ ಮುಂದೆ ಮಾಡಬೇಕಾದ ಕರ್ತವ್ಯದ ಮಾರ್ಗತೋರಿಸಿ ಆಶೀರ್ವದಿಸಿದರು. ಆಗ ಪೂಜ್ಯರ ಪರಮ ಭಕ್ತರಾದ ಶ್ರೀ ಹನುಮಂತರಾವ ದೇಸಾಯಿ ವಕೀಲರು ಮತ್ತು ಶ್ರೀ ಪುಂಡಲೀಕಪ್ಪ ಪಾಟೀಲ ಶಿಕ್ಷಕರು (ಆಗ ಇನ್ನೂ ಇಬ್ಬರೂ ಕಾಲೇಜದಲ್ಲಿ ಓದುತ್ತಿದ್ದರು) ಇಬ್ಬರೂ ಕೂಡಿ ವಿದ್ಯಾಧಿ-ಕಾರಿಗಳಲ್ಲಿ ಹೋಗಿ ಅರಿಕೆಮಾಡಿಕೊಂಡು ೫ ನೇತರಗತಿ ಪ್ರಾರಂಭಿಸಲು ಅನುಮತಿ ತಂದರು. ಪರಊರಿನ ಮಕ್ಕಳಿಗೆ ಊಟದ ವ್ಯವಸ್ಥೆಯ ಸಲುವಾಗಿ ಸುತ್ತಲಿನ ಗ್ರಾಮಗಳಿಗೂ ತಿರುಗಿ ಧಾನ್ಯ ಸಂಗ್ರಹಿಸಿದರು. ಶ್ರೀಗಳವರ ಕಳಕಳಿಯಿಂದ ಈ ಭಾಗದ ಜನರು ಶಿಕ್ಷಣ ಕ್ಷೇತ್ರಕ್ಕೆ ತನು ಮನ ಧನದಿಂದ ಸಹಾಯ

ನೂಡುತ್ತಲಿದ್ದಾರೆ. ಗುರುವರ್ಯರ ಆಶೀರ್ವಾದದಿಂದ ೭ ನೇ ತರಗತಿವರೆಗೆ ಶಾಲೆ ನಡೆಯಿತು. ಆದರೂ ಗುರುಗಳವರಿಗೆ ಸಮಾಧಾನವಾಗಲಿಲ್ಲ. ಮಕ್ಕಳಿಗೆ ಹೈಸ್ಕೂಲಿನ ಶಿಕ್ಷಣ ಕೊಡಿಸಬೇಕು ಅಂತ ತಿಳಿದು " ಶ್ರೀ ಶಾಂತಲಿಂಗೇಶ್ವರ ಶಿಕ್ಷಣ ಪ್ರಸಾರಕ ಸಂಸ್ಥೆ " ಸ್ಥಾಪಿಸಿದರು. ನಂತರ ಬೆಂಗಳೂರಿಗೆ ಹೋಗಿ ಶಿಕ್ಷಣ ಸಚಿವರಾಗಿದ್ದ ಸರ್ವಶ್ರೀ ಅಣ್ಣಾರಾವ ಗಣಮುಖಿಯವರಿಗೆ ಭೆಟ್ಟಿಯಾದರು. ನಮ್ಮ ಭಾಗದ ಶಿಕ್ಷಣ ಅನಾನುಕೂಲತೆಯ ಬಗ್ಗೆ ಹೇಳಿದರು. ಖಾಸಗಿ ಆಗಿ ನಡೆಯಿಸಿಕೊಂಡು ಬಂದ ಮಾಧ್ಯಮಿಕ ಶಾಲೆಯನ್ನು ಸರಕಾರ ವಹಿಸಿಕೊಂಡು ಮುಂದಿನ ಶಿಕ್ಷಣಕ್ಕಾಗಿ ೮ ನೇ ತರಗತಿ ನಡೆಯಿಸಲು ಅನುಮತಿ ಕೊಡಬೇಕೆಂದು ಕೇಳಿಕೊಂಡರು. ಆಗ ಶಿಕ್ಷಣ ಸಚಿವರು " ತಾವು ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಸೇವೆ ಸ್ತುತ್ಯವಾಗಿದೆ. ತಮ್ಮಂಥ ಯೋಗಿ ಪುರುಷರಿಗೆ ಸರಕಾರ ಸದಾಕಾಲ ಬೆಂಬಲ ಮತ್ತು ಪ್ರೋತ್ಸಾಹ ಕೊಡುವದೆಂದು ಹೇಳಿ ಹೈಸ್ಕೂಲ ಪ್ರಾರಂಭಿಸಲು ೧೯೫೯ ಜೂನ ತಿಂಗಳಲ್ಲಿ ಅನುಮತಿ ಕೊಟ್ಟರು. ಗುರುಗಳ ಶಿಕ್ಷಣ ಪ್ರೇಮತ್ವ ಇಲ್ಲಿಯ ಜನರ ಉತ್ಸಾಹ ನೋಡಿ ಮಾನ್ಯ ಸಚಿವರು ಕ್ರಿ. ಶ. ೧೯೬೦ ಜೂನದಲ್ಲಿ ಮಕ್ಕಳಿಗೆ ಉಚಿತ ಊಟದ ಸಲುವಾಗಿ " ಡಾ. ಬಾಬು ರಾಜೇಂದ್ರ ಪ್ರಸಾದ ಜನರಲ್ ಹಾಸ್ಟೆಲ್'ದ ಮಂಜೂರಿ ಕೊಟ್ಟರು. ಇದೆಲ್ಲ ಪೂಜ್ಯ ಗುರುವರ್ಯರ ತಪಃಫಲವೇ ಆಗಿದೆ.

ಮುಂದೆ ಮತ್ತೆ ಗುರುವರ್ಯರು ಮಹಾರಾಷ್ಟ್ರ ರಾಜ್ಯದ ದುಧನಿಯಲ್ಲಿ " ಶ್ರೀ ಸಿದ್ಧೇಶ್ವರ ಹೈಸ್ಕೂಲ " ತೆರೆದರು. ಈ ಹೈಸ್ಕೂಲಿನ ಪ್ರಾರಂಭದಲ್ಲಿ ಶ್ರೀ ಹನುಮಂತರಾವ ದೇಸಾಯಿ ವಕೀಲಸಾಹೇಬರು ( ಆಗ B. A. LL. B. ಪಾಸಾಗಿದ್ದರು ) ಮುಖ್ಯೋಪಾಧ್ಯಾಯರೆಂದು ಸಂಬಳವಿಲ್ಲದೆ ಸೇವೆ ಸಲ್ಲಿಸಿ ಗುರುಗಳ ಪ್ರೀತಿಗೆ ಪಾತ್ರರಾಗಿ ಧನ್ಯರಾಗಿದ್ದಾರೆ. ವಕೀಲಿವೃತ್ತಿ ಮಾಡುತ್ತಲಿದ್ದರೂ ಜೀವನ ಮಾತ್ರ ಶಿವ ಶರಣರದಾಗಿದೆ.

ಮ್ಯಾಟ್ರಿಕದವರೆಗೆ ಶಿಕ್ಷಣ ವ್ಯವಸ್ಥೆ ಆಯಿತು. ಓದಲು ಒಂದು ಪುಸ್ತಕಭಂಡಾರವಾದರೆ ಎಲ್ಲರಿಗೂ ಅನುಕೂಲವಾಗುವದೆಂದು ತಿಳಿದು ಮಠದಲ್ಲಿ " ಶ್ರೀ ಜ. ಪಂಡಿತಾರಾಧ್ಯ ವಾಚನಾಲಯ " ತೆರೆದಿದ್ದಾರೆ. ಇಲ್ಲದೆ ಗುಲಬರ್ಗಾದಲ್ಲಿ ಒಂದು " ಗುರುಕುಲ " ತೆರೆದು ಬಡಮಕ್ಕಳಿಗೆ ಊಟದ ಮತ್ತು ವಾಸಿಸುವ ಸೌಕರ್ಯ ಮಾಡಿಕೊಟ್ಟು ದಾಸೋಹಪ್ರಿಯರೆನಿಸಿಕೊಂಡಿದ್ದಾರೆ.

ಇಷ್ಟೆಲ್ಲ ಮಹಾಕಾರ್ಯಗಳಾಗುತ್ತಿದ್ದರೂ ಮಠದ ಕೆಳಗೆ ಯಾವ ಆಸ್ತಿಪಾಸ್ತಿ ಇರುವದಿಲ್ಲ. ಒಮ್ಮೆಯೂ ಶಿಷ್ಯರಿಗೆ ಇಂತಿಷ್ಟು ಹಣ ಗುರುಕಾಣಿಕೆ ಕೊಡಿಯೆಂದು ಎಂದೂ ಕಾಡಲಿಲ್ಲ. ಭಕ್ತರು ಮುಚ್ಚಿ ಕೊಟ್ಟದ್ದನ್ನೇ ಸ್ವೀಕರಿಸುವವರು. ಅಂದಮೇಲೆ ಇಂಥ ಮಹಾಕಾರ್ಯಗಳು ಹೇಗಾದವು ? ಎಂದು ಆಶ್ಚರ್ಯಪಡಬಹುದು, ಇದೆಲ್ಲ ಅವರ ತಪಶ್ಚರ್ಯದ ಫಲವೇ ಕಾರಣವಾಗಿವೆ. ಸದ್ಗುರು ಮಾಡುವ ತಪಶ್ಚರ್ಯವೆಲ್ಲ ಭಕ್ತರ ಕಲ್ಯಾಣಕ್ಕಾಗಿಯೇ ಧಾರೆ ಎರೆಯುತ್ತಲಿದ್ದಾರೆ.

ಗುರುಗಳು ಹೆಚ್ಚಿನ ಶಿಕ್ಷಣ ಪಡೆಯದಿದ್ದರೂ ವೇದಾಗಮ ಸಾಸ್ತ್ರಗಳೆಲ್ಲ ಬಲ್ಲರು. ಸಭೆ ಸಮ್ಮೇಲನಗಳಲ್ಲಿ ಭಾಷಣ ಮಾಡದಿದ್ದರೂ ಮಠಕ್ಕೆ ಬಂದ ಜನರನ್ನು ಕೂಡಿಸಿ, ಧರ್ಮದ ಬಗ್ಗೆ, ನೀತಿಯ ಆಚರಣೆಯ ಬಗ್ಗೆ ಹೇಳುತ್ತಾ ಇರುವರು. ಇದನ್ನು ಕೇಳಲು ಎಲ್ಲ ಜಾತಿಯ ಜನರು ಬರುವರು. ಎಲ್ಲರನ್ನು ಸಮಾನ ದೃಷ್ಟಿಯಿಂದ ಕಾಣುವರು. ಸಮಾಜ ವಿದ್ರೋಹ ಕಾರ್ಯ ಮಾಡುವ ಜನರನ್ನು ಬೈದು ಹಾದಿಗೆ ತರುವರು. ಶ್ರೀಮಂತರೆಂದು ಅವರನ್ನು

ಅಟ್ಟದ ಮೇಲೆ ಎಂದೂ ಕೂಡಿಸುವವರಲ್ಲ. ಅಲ್ಲಸಲ್ಲದ ಮಾಡಿದ ಕಾರ್ಯದ ಬಗ್ಗೆ ಖಡಾಖಂಡಿತವಾಗಿ ಹೇಳಿ ಬಿಡುವರು. ಈ ಖಂಡತುಂಡ ಮಾತುಗಳಿಗಾಗಿ ಗುರುಗಳನ್ನು ಹಿಂದೆ ಕೆಲವರು ಹಳಿಯತೊಡಗಿದರು. ಗುರುಗಳ ನಿಂದೆ ಮಾಡಿದರು. ಅಂಥವರಿಗೆ ಜಗದಾಚಾರ್ಯರು ಒಂದೇ ವರ್ಷದಲ್ಲಿ ಬುದ್ಧಿಗಲಿಸಿದ್ದಾರೆ. ಅವರ ಪರಿಸ್ಥಿತಿ ತುಂಬಾ ಕರುಣಾಜನಕವಾಗಿದೆ. ಮನೆಯಲ್ಲಿ ಶಾಂತಿ ಸುಖಗಳು ಇಲ್ಲದೆ ಮಮ್ಮಲ ಮರಗುತ್ತಿದ್ದಾರೆ. ಕೆಲವರಂತೂ ರೋಗದಿಂದ ಒಳಲುತ್ತಿದ್ದಾರೆ. ಹಲವರು ಮನೆಮಾರು ಕಳೆದುಕೊಂಡು ನಿರ್ಗತಿಕರಾಗಿದ್ದಾರೆ. ಪಶ್ಚಾತ್ತಾಪಗೊಂಡು ಕೆಲಜನರು ಗುರುಗಳ ಪಾದಕ್ಕೆ ಎರಗಿ ಕ್ಷಮೆ ಕೇಳಿಕೊಂಡು ಪಾವನರಾಗುತ್ತಲಿದ್ದಾರೆ. ಎಷ್ಟೋ ಜನರು ಗುರುಗಳಲ್ಲಿಗೆ ಬಂದು ತಮ್ಮ ರೋಗಗಳನ್ನು ಕಳೆದುಕೊಂಡಿದ್ದಾರೆ. ಭಕ್ತರನೇಕರು ಗುರುಗಳ ಪ್ರಸಾದದಿಂದ ಮಕ್ಕಳನ್ನು ಪಡೆದುಕೊಂಡಿದ್ದಾರೆ. ಒಂದೇ-ಎರಡೇ ಸಾವಿರಾರು ಫಲಗಳನ್ನೆಲ್ಲ ಈ ಭಾಗದ ಜನರು ಗುರುಗಳ ಆಶೀರ್ವಾದದಿಂದಲೇ ಪಡೆಯುತ್ತ-ಲಿದ್ದಾರೆ. ಭಕ್ತಜನರಾದರೂ ಗುರುಗಳ ನಾಮಸ್ಮರಿಸಿಯೇ ಮುಂದೆ ಹೆಜ್ಜೆ ಇಡುತ್ತಲಿದ್ದಾರೆ. ಸದಾಕಾಲ ಗುರುವಿನ ಧ್ಯಾನ ಮಾಡುತ್ತ ಕಾಲ ಕಳೆಯುತ್ತಲಿದ್ದಾರೆ.

— ವಿಠ್ಠಲ ಸಿದ್ರಾಮಪ್ಪ ಕಂಬಾರ ( ಸಶಿಕ್ಷಕ, )
ಹಿರಿಯ ಪ್ರಾಥಮಿಕ ಶಾಲೆ, ಹಿರೇಜೇವರಗಿ.



# ಹೂವಾಗಿ ಅರಳಿದಿರಿ.

ಜಗವೊಂದು ಕಾನನ ಇಲ್ಲಿಹುದು ದುರ್ಜನ ।
ಧಗ ಧಗಿಪ ವೈಷಮ್ಯ ಬೆಳೆದಿತ್ತು ಅನುದಿನ ।
ಧರ್ಮವು ಕುಂದಿತ್ತು ಕರ್ಮವೂ ಹೆಚ್ಚಿತ್ತು ।
ಮರ್ಮವನರಿಯದ ಜನವು ಎಲ್ಲೆಡೆಗೂ ತುಂಬಿತ್ತು ॥೧॥

ಕಾನನದಿ ತುಂಬಿರುವ ಮುಳ್ಳು ಕಂಟಗಳೆಷ್ಟೊ?
ಮಾನವರು ತಾವಾಗಿ ದಾನವತೆ ಸಾಕಷ್ಟು ।
ಲೀನವಾಗಿಹರವರು ಕುಹಕ ಬುದ್ಧಿಗಳಲ್ಲಿ ।
ಹೀನಮನದಿಂ ನೆನೆಯೆ, ದೇವ ತಾನೆಲ್ಲಿ? ॥೨॥

ಗುರುಲಿಂಗ ಜಂಗಮದ ತಿಳುವಳಿಕೆ ಅವಕಿಲ್ಲ ।
ವರಭಸ್ಮ ರುದ್ರಾಕ್ಷಿ ಮಂತ್ರಜ್ಞಾನ ಪಡೆದಿಲ್ಲ ।
ಪಾದತೀರ್ಥದ ಮಹಿಮೆ ಸುಪ್ರಸಾದವ ಮತ್ತೆ ।
ವೇದಾದಿ ಪರಮಾತ್ಮನರಿಯಬಲ್ಲುದೆ? ಕತ್ತೆ ॥೩॥

ಭಕ್ತ-ಮಹೇಶ್ವರರು ಅಷ್ಟ ಆವರಣವನು ।
ಮುಕ್ತಿಗಾಸರವಾದ ಷಟ್‌ಸ್ಥಲಗಳನ್ನು ।
ಪ್ರಾಣರೂಪದಿ ಇರುವ ಪಂಚ ಆಚಾರಗಳ ।
ಕಾಣದಲೆ ಮಾಡಿದರು ನಿತ್ಯ ಕದನಗಳ ॥೪॥

ಸಂದಿದ್ದ ಈ ಸಮಯ ಕಾದಿತ್ತು ತಮಗಾಗಿ ।
ತಂದೆ ಗುರುಶಾಂತೇಶ ಧರ್ಮಜಾಗ್ರತೆಗಾಗಿ ।
ಶಿವನಪ್ಪಣೆಯ ಹೊತ್ತು ಬಂದಿಳಿದಿರಿ ।
ಜಗದಲ್ಲಿ ಸೊಗಸಾದ ಹೂವಾಗಿ ಅರಳಿದಿರಿ ॥೫॥

— ಶಾಂತವೀರದೇವರು ಹಿರೇಮಠ
ಬಂದರವಾಡ-ಚಿಣಮಗೇರಿ.

# ಬೋರಿ ತೀರದ ಶಾಂತಮುನಿ.



ಪುರಾತನ ಧರ್ಮಗಳಲ್ಲೊಂದಾದ ಶಿವ-ಧರ್ಮವನ್ನು ಭರತಖಂಡದಲ್ಲಿ ಸುಭದ್ರವಾಗಿ ನೆಲೆ-ಗೊಳಿಸಿದ ಪಂಚಾಚಾರ್ಯರ ಪೀಠಗಳಲ್ಲೊಂದಾದ ಶ್ರೀಶೈಲಪೀಠಕ್ಕೆ ಸಂಬಂಧಿಸಿದ ಹಿರೇಜೇವರಗಿಯ ಬೃಹನ್ಮಠಾಧ್ಯಕ್ಷರಾದ ಷ॥ ಬ್ರ॥ ಗುರುಶಾಂತ ಶಿವಾ-ಚಾರ್ಯರ ಷಷ್ಟ್ಯಬ್ಧಿ ಸಮಾರಂಭವನ್ನು ಆಚರಿಸು-ತ್ತಿರುವದು ಶಿವಧರ್ಮ ಪ್ರೇಮಿಗಳಿಗೊಂದು ಪರ್ವ-ಕಾಲ.

ಪ್ರತಿಯೊಂದು ಧರ್ಮದ ಜೀವನಾಡಿ ಮಿಡಿ-ಯುತ್ತಿರುವದು ಆಯಾ ಧರ್ಮದ ಆಚಾರ್ಯರ ಉಗ್ರ ತಪೋಬಲವನ್ನೇ ಅವಲಂಬಿಸಿದೆ. ಪ್ರಚಂಡ ವಿರೋಧಿ ಶಕ್ತಿಗಳನ್ನು ಎದುರಿಸುತ್ತ ಇಂದಿಗೂ ಆಳ ಆಳದಲ್ಲಿ ಶಿವಧರ್ಮವು ಜೀವ ಹಿಡಿದುಕೊಂಡು ನಿಂತಿರುವದನ್ನು ನೋಡಿದರೆ ಇದಕ್ಕೆಲ್ಲ ಕಾರಣ ಷ॥ ಬ್ರ॥ ಗುರುಶಾಂತ ಶಿವಾಚಾರ್ಯರಂಥ ಮುನಿಗಳ ಉಗ್ರ ಶಿವಾನುಷ್ಠಾನ ಗಳೆಂದರೆ ತಪ್ಪಾಗಲಾರದು.

ಬೋರಿ ತೀರದ ಈ ಶಾಂತಮುನಿ ನನ್ನ ನೆಚ್ಚಿನ ವೃದ್ಧ! ಈ ವೃದ್ಧನ ನಿರ್ಹೇತುಕ ಕೃಪೆಗೆ ಪಾತ್ರ ರಾದವರಲ್ಲಿ ನಾನೊಬ್ಬನೆಂದು ಹೇಳಿಕೊಳ್ಳಲು ನನ-ಗೊಂದು ಹೆಮ್ಮೆ. ನನ್ನ ನೆಚ್ಚಿನ ಈ ವೃದ್ಧನನ್ನು ನೋಡಿದಾಗಲೆಲ್ಲ ಪುರಾಣಗಳಲ್ಲಿ ವರ್ಣಿಸಿರುವ ಋಷಿ ಮುನಿಗಳ ನೆನಪಾಗಿ ಹೃದಯವು ಭಕ್ತಿಯಿಂದ ತುಂಬಿ ಬರುತ್ತದೆ. ಉದಾರತೆ, ಕಳಕಳಿ, ಕ್ಷಮೆ, ಸ್ವಾಭಿಮಾನ ವೈರಾಗ್ಯ ಮತ್ತು ಶಿವಧರ್ಮದ ಉಗ್ರಾನುಷ್ಠಾನ ಇವೆಲ್ಲ ನನ್ನ ಮುನಿಯ ಪರಮ ಸಂಪತ್ತು.

ಈ ಮುನಿಯ ಆಶ್ರಮವಂತೂ ಅತ್ರಿ, ಅಗ-ಸ್ತ್ಯಾದಿ ಋಷಿ-ಮುನಿಗಳ ಆಶ್ರಮವನ್ನೇ ಹೋಲು-ತ್ತದೆ. ಯೋಗ ಗುಹೆ, ಪಂಡಿತಾರಾಧ್ಯರ ಪುಟ್ಟ ಮಂದಿರ, ರಮಣೀಯ ಉದ್ಯಾನ ಪಾಠಶಾಲೆ, ಪ್ರವ ಚನ ಭಜನಾದಿಗಳ ಮಂಟಪ ಮತ್ತು ಬೋರಿ ನದಿಯ ಜುಳು ಜುಳು ಪ್ರವಾಹ ಇವೆಲ್ಲ ಭಾವಜೀವಿಗೆ ಒಂದು ಸುಂದರ ಸ್ವರ್ಗ.

ವೃದ್ಧನ ದೇಹವು ಅರವತ್ತು ದಾಟಿರುವ ಕಾರ ಣಕ್ಕೆ ನಾನು ಉತ್ಸಾಹ ತೋರಿಸಲಾರೆ. ಆದರೆ ವೃದ್ಧನ ಅರಿವು ಅರವತ್ತು ದಾಟಿರುವ ಕಾರಣಕ್ಕೆ ನನಗೆ ಎಲ್ಲಿಲ್ಲದ ಸಂತೋಷ. ಜನ ಜೀವಿಗಳ ದುಃಖ ದುಮ್ಮಾನ, ಧರ್ಮಕಾರ್ಯದ ಕ್ಷೀಣತೆ, ಅನಾಚಾರ ಮತ್ತು ಸ್ವಾರ್ಥತೆ ಇವೆಲ್ಲ ಕಂಡು ಇಲ್ಲಿಯವರೆಗೆ ಅತ್ತ ಇವನ ಕಣ್ಣೀರೆ ಅಬ್ಧಿಯಾಗಿ ನಿಂತಿವೆ. ಇದೇ ನನ್ನ ಷಷ್ಟ್ಯಬ್ಧಿಯ ಸ್ಪಷ್ಟಾಭಿಪ್ರಾಯ

ಜ್ಞಾನಿಗಳನ್ನು ಪೂಜಿಸಿದರೆ ಇಹಪರಗಳ ಸೌಖ್ಯ ಲಭಿಸುವದೆಂದು ಮುಂಡಕೋಪನಿಷತ್ ಪ್ರಮಾಣ. ಈ ಮುನಿಯ ಸಮಾರಂಭದಲ್ಲಿ ಸಕ್ರಿಯವಾಗಿ ಭಾಗ ವಹಿಸಿದವರಿಗೆಲ್ಲ ಭಗವದ್ಗೀತೆಯ ಯಜ್ಞಫಲವೂ ರೇಣುಕಗೀತೆಯ ಶಿವಾರ್ಚನೆಯ ಫಲವೂ ಕಟ್ಟಿಟ್ಟದ್ದು.

ಪೂಜ್ಯ ತಾತನ ಬಗ್ಗೆ ನಾಲ್ಕುಮಾತು ಬರೆಯಲು ನನಗೆ ಸುಸಂಧಿ ನೀಡಿದ್ದಕ್ಕಾಗಿ ಸಮಿತಿಯ ಕಾರ್ಯ-ದರ್ಶಿಗಳಾದ ಹಿರೇಜೇವರಗಿಯ ಶ್ರೀ. ಪಿ. ಆಯ್. ಪಾಟೀಲ ಇವರಿಗೆ ನನ್ನ ಹೃತ್ಪೂರ್ವಕ ಶುಭಾ-ಶೀರ್ವಾದಗಳು. ಬೋರಿ ಮಧ್ಯದಲ್ಲಿರುವ ನಮ್ಮೆಲ್ಲ ರನ್ನೂ ಕರುಣಾಳು ಮುನಿ ಬೇಗನೆ ದಡ ತೋರುವ ನೆಂದು ನಂಬಿ ವಿರಾಮುಬಯಸುತ್ತೇನೆ.

— ವೇ. ಗುರುಪಾದ ಸ್ವಾಮಿ
ಝಳಕಿಮಠ, ಮಾಶಾಳ.

# ದೂರ.

ಅಷ್ಟಾವರಣದಿಂದ । ಅಷ್ಟದರಿದ್ರ ದೂರ
ಆಚಾರ್ಯರಿಂದ । ಅನರ್ಥ ದೂರ ॥ ಪಲ್ಲ ॥

ಗುರುವಿನಿಂದ । ಗರ್ವ ದೂರ
ಗರತಿಯಿಂದ । ಗಯ್ಯಾಳಿ ದೂರ ॥ ೧ ॥

ಲಿಂಗದಿಂದ । ಭಂಗ ದೂರ
ಅಂಗದಿಂದ । ಅನಂಗ ದೂರ ॥ ೨ ॥

ಜಗದಿಂದ । ಜಾತಿ ದೂರ
ಜಂಗಮನಿಂದ । ಜಗಳ ದೂರ ॥ ೩ ॥

ಪಾದೋದಕದಿಂದ । ಪಾಪ ದೂರ
ಪಂಚಾಚಾರ್ಯರಿಂದ । ಪ್ರಶ್ನೆ ದೂರ ॥ ೪ ॥

ಪ್ರಸಾದದಿಂದ । ಪ್ರಾಲಬ್ಧ ದೂರ
ಜಗದೀಶನಿಂದ । ಜಂಜಾಟ ದೂರ ॥ ೫ ॥

ಭಸ್ಮದಿಂದ । ಭವ ದೂರ
ಭಕ್ತಿಯಿಂದ । ಬಂಧನ ದೂರ ॥ ೬ ॥

ರುದ್ರಾಕ್ಷಿಯಿಂದ । ರೋಗಾದಿಗಳು ದೂರ
ರುದ್ರನಿಂದ । ಕ್ಷುದ್ರಗುಣ ದೂರ ॥ ೭ ॥

ಮಂತ್ರದಿಂದ । ಮಾಯೆ ದೂರ
ವಿಶ್ವೇಶನಿಂದ । ಅವಿಶ್ವಾಸ ದೂರ ॥ ೮ ॥

ವಾಗೀಶನಿಂದ । ವಾದ ದೂರ
ಶ್ರೀ ಗುರುಶಾಂತನಿಂದ । ಅಶಾಂತಿ ದೂರ ॥ ೯ ॥

— M. G Takali, Hire-Jewargi.

# ಷಟಸ್ಥಲ

ಲೇಖಕ — ಬಾಬುರಾವ್ ಗು. ಮುಜಗೊಂಡೆ, ಮಣೂರ.

ಯಾವುದೊಂದು ಮೂರ್ತಿಯನ್ನು ನಾವು ನೇರವಾಗಿ ಉಪಯೋಗಿಸುತ್ತೇವೆಯೋ ಆ ಮೂರ್ತಿಯೊಡನೆ ನಾವು ಸಹಜಾಚರಣೆಯಲ್ಲಿದ್ದಂತಾಯಿತು. ಉದಾಹರಣಾರ್ಥವಾಗಿ ನಾವು ಲಿಂಗಪೂಜೆಯನ್ನು ಮಾಡಿಕೊಳ್ಳುವಾಗ ಆ ಲಿಂಗದೊಡನೆ ನಮ್ಮ ಸಹ-ಜಾಚರಣೆಯು ಅದರಲ್ಲಿ ಅಡಕವಾಗಿರುವ ಗುರು ಜಂಗಮರೊಡನೆ ಅದೇ ಕಾಲಕ್ಕೆ ನಮ್ಮ ಸಂಬಂಧಾ-ಚರಣೆಯು ನಡೆದಂತಾಯಿತು.

ಗುರು ಶಿಷ್ಯರುಗಳ ಸಂಬಂಧವು ತಂದೆಮಕ್ಕಳ ಸಂಬಂಧವಿದ್ದಂತೆ, ಆದ್ದರಿಂದ ಅತಿಥಿಸ್ವರೂಪಿಯಾದ ಜಂಗಮವು ಮ ಗೆ ದಯಮಾಡಿಸಿದರೆ ಗುರು ಶಿಷ್ಯ-ರಿಬ್ಬರು ಸೇರಿ ಆತನ ಶ್ರೀ ಪಾದಪೂಜೆಯನ್ನು ಮಾಡಿ ಆತನಿಂದ ಪಾದೋದಕ ಪ್ರಸಾದಗಳನ್ನು ಪಡೆದುಕೊಳ್ಳಬೇಕು. " ಗುರುವು ದೀಕ್ಷಾಮೂರ್ತಿಯಾಗಿದ್ದಾನೆ ಲಿಂಗವು ಪೂಜಾಮೂರ್ತಿಯಾಗಿದೆ, ಜಂಗಮವು ಭೋಗಮೂರ್ತಿಯಾಗಿದ್ದಾನೆ. ಆದ್ದರಿಂದ ಗುರು ಜಂಗಮರಿಬ್ಬರು ಒಂದೆಡೆ ಸೇರಿದಾಗ ಭೋಗಮೂರ್ತಿಯಾದ ಜಂಗಮನನ್ನು ಆರಾಧಿಸಿ ಆತನ ಪಾದೋ-ದಕ ಪ್ರಸಾದಗಳನ್ನು ಸ್ವೀಕರಿಸಬೇಕು.

ಗುರು ಲಿಂಗ ಜಂಗಮರ ಪಾದೋದಕವು ನಮ್ಮ ಹೃದಯಗಳಲ್ಲಿ ವಿನಯಾದಿ ಸದ್ಗುಣಗಳನ್ನು ಹುಟ್ಟಿಸುತ್ತವೆ. ಇದರಿಂದ ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ದಯಾಗುಣವು ಜಾಗೃತವಾಗುತ್ತದೆ.

ಗುರು ಲಿಂಗ ಜಂಗಮರು ಭೋಗಿಸಿ ಉಳಿದ ಪ್ರಸಾದವನ್ನು ಅನುಭೋಗಿಸುವದರಿಂದ ಸಂಸಾರದ ತಾಪತ್ರಯಗಳು ಮಾಯವಾಗುತ್ತವೆ. ಉ. - ಬಟ್ಟಿಬಾಚರಸನು ಜಂಗಮ, ಪ್ರಸಾದ, ಭೋಗಿಯಾಗಿರುವದನ್ನು ಕಂಡು ದೂಷಿಸಿದ ದುಷ್ಟರ ಮನೆಗೆ ಬೆಂಕಿ ಬಿದ್ದುದರಿಂದ ಅವರಿಗೆ ಬುದ್ಧಿ ಬಂತು.

ತ್ರಿಪುರ ಸಂಹಾರದ ಕಾಲದಲ್ಲಿ ಶಿವನ ನೇತ್ರ-ಗಳಿಂದುದುರಿದ ಕಣ್ಣೀರುಗಳಿಂದ ಉದ್ಭವಿಸಿದ ರುದ್ರಾಕ್ಷಿಗಳನ್ನು ಧರಿಸಿ ರುದ್ರಸ್ವರೂಪಿಗಳೇ ಆಗಿ ಶಿವಲಿಂಗ ಪೂಜೆಯನ್ನು ಮಾಡಿದರು. (ರುದ್ರಾಕ್ಷಿಗಳನ್ನು ಹೊತ್ತುಕೊಂಡು ಹೋಗುತ್ತಲಿದ್ದ ವ್ಯಾಪಾರಿಗಳ ಎತ್ತೊಂದು ಅಸುಗಳೆಯಲಾಗಿ ಅದನ್ನು ಶಿವದೂತರು ತಂದು ರಜತಗಿರಿಗೆ ಕರೆದೊಯ್ದರು. ಕಾರಣ ರುದ್ರಾಕ್ಷಿಗಳನ್ನು ಧರಿಸಿ ಶಿವಸ್ವರೂಪಿಗಳಾದವರಿಗೆ ಯಮನ ಭಯವಿಲ್ಲ.)

ಶಿವ ಷಡಕ್ಷರಿ ಮಂತ್ರವನ್ನು ಪಠಿಸುವವರು ಶಿವಮಯರಾಗುತ್ತಾರೆ. ಸತ್ಯೇಂದ್ರಚೋಳನ ಮಗನಾದ ಮಂತ್ರಲಕ್ಷಣನು ಶಿವಮಂತ್ರವನ್ನು ಜಪಿಸುತ್ತ ಕತ್ತಿಯಿಂದ ಶಿರನನ್ನು ಕತ್ತರಿಸಿಕೊಳ್ಳಲಾಗಿ ಭೂಮಿಗೆ ಬಿದ್ದ ಶಿರವು ಶಿವಮಂತ್ರವನ್ನು ಜಪಿಸುತ್ತಲೇ ಇತ್ತು.

### ಷಟಸ್ಥಲ :

ಷಟಸ್ಥಲ ಮಾರ್ಗಾಚರಣೆಯಲ್ಲಿ ಜಂಗಮವೇ ಲಿಂಗಮುಖವಾಗಿದೆ. ಇಲ್ಲಿ ಜಂಗಮ ತೃಪ್ತಿಯೇ ಲಿಂಗ ( ತೃಪ್ತಿ ) ಲಿಂಗದ ಆನಂದವಾಗಿದೆ. ಆದ್ದರಿಂದ ಈ ಮಾರ್ಗದಲ್ಲಿ ಜಂಗಮದ ಉಪಾಸನೆಗೆ ಪ್ರಾಮು-ಖ್ಯತೆ ಬಂದಿರುವುದು ಸಹಜವಾಗಿದೆ. ಗುರುಚರರಲ್ಲಿ ತಾರತಮ್ಯ ಭಾವನೆಗಳಲ್ಲಿ ಪಾದೋದಕ ಪ್ರಸಾದಗಳನ್ನು ಕೊಳ್ಳುವಾಗ ಇವರು ಗುರುಗಳು, ಇವರು ಜಂಗಮರು ಎಂಬ ಭಾವನೆ ಇರದೆ ಕೇವಲ ಭಕ್ತಿಭಾವ ಮಾತ್ರ ಇರುವುದಾಗಿದೆ. ಅಷ್ಟಾವರಣದ ಆಚರಣೆಯು

ಈ ಗುಟ್ಟನ್ನು ಅರಿತು ಆಚರಿಸುವ, ಗುರು ಜಂಗಮರಲ್ಲಿ ಭೇದ ಭಾವನೆಗಳು ಬಾರವು. ಸಮಾಜದ ಏಳ್ಗೆಯನ್ನು ಮಾಡುವುದೇ ಗುರುಚರರ ಕಾಯಕವಾಗಿದೆ.

ಈ ಪ್ರಕಾರವಾದ ಅಷ್ಟಾವರಣ ಆಚರಣೆಯು ಸಿದ್ಧಿಸಬೇಕಾದರೆ ವೀರಶೈವನು ಅವುಗಳಲ್ಲಿಟ್ಟ ನಂಬಿಗೆಯೇ ಕಾರಣವಾಗುವದು. ಗುರುವು ದೀಕ್ಷೆ-ಶಿಕ್ಷೆ ಮೋಕ್ಷಗಳಿಗೆ ಕಾರಣನಾಗಿದ್ದಾನೆ. ಆದ್ದರಿಂದ ವೀರ-ಶೈವರು ಗುರು-ಭಕ್ತಿಯುಳ್ಳವರಾಗಿ ಅಷ್ಟಾವರಣದ ಆಚರಣೆಯಲ್ಲಿ ನಿರತರಾಗಬೇಕು.

ಶಿವಾಗಮದಲ್ಲಿ ಷಟಸ್ಥಲದ ವಿಚಾರವನ್ನು ಹೇಳುವ ಕಡೆಗಳಲ್ಲೆಲ್ಲ ಶಿವನನ್ನು "ಸ್ಥಲ" ವೆಂದೇ ಹೆಸರಿಸಿದ್ದಾರೆ. ಶಿವನು ಈ ವಿಶ್ವದ ಎಲ್ಲ ಆಗು ಹೋಗುಗಳಿಗೆ ಆಶ್ರಯಸ್ಥಲನಾಗಿರುವದರಿಂದ ಅಲ್ಲಿ ಹಾಗೆ ಹೇಳಲಾಗಿದೆ. ಈ ರೀತಿ ಸ್ಥಲವೆಂದು ಹೆಸರುಗೊಂಡು ಆ ಪರಾತ್ಪರ:ವಸ್ತುವೇ ಎರಡಾಗಿ ಲಿಂಗ-ಅಂಗಗಳೆಂದು ಹೆಸರುಗೊಂಡಿತು. ಈ ಸ್ಥಿತಿಯಲ್ಲಿ ಲಿಂಗನು ಪೂಜ್ಯನಾಗಿಯೂ ಅಂಗನು ಪೂಜಕನಾಗಿಯೂ ಪರಿಣಮಿಸಿ ಪೂಜ್ಯೆ-ಪೂಜಕಲೀಲೆಯಾಯಿತು. ಆ ಪರಾತ್ಪರ ವಸ್ತುವಿಗೆ ತನ್ನ ಶಕ್ತಿಯ ಅರಿವು ಉಂಟಾದಾಗ ಈ ಸ್ಥಿತಿಯಾಯಿತೆಂದು ಆ ಅರಿಯುವಿಕೆ ಬಂದಿತೆಂಬುದಕ್ಕೆ ಕಾರಣವಿಲ್ಲವೆಂದು ಅನುಭಾವಿಗಳು ಹೇಳುತ್ತಾರೆ. ಆ ಪರಾತ್ಪರ ವಸ್ತುವಿನಂತೆಯೇ ಅದರ ಅರಿವು ಕೂಡ ಎರಡು ಭಾಗವಾಗಿ "ಶಕ್ತಿ-ಭಕ್ತಿ" ಗಳೆಂದು ಹೆಸರು-ಗೊಂಡಿತು.

ಲಿಂಗ ಅಂಗಗಳಲ್ಲಿ ಆರಾರು ತೆರನಾಗಿ ಪುನಃ ವಿಭಾಗವಾಗುವದನ್ನು ಅವುಗಳೊಂದಿಗೆ "ಶಕ್ತಿ-ಭಕ್ತಿ" ಗಳನ್ನು ಸಹ ಆರಾರು ವಿಭಾಗವಾಗಿ ಹೊಂದಿಕೊಳ್ಳುವದನ್ನು ವಿವರಿಸುವೆವು .ಲಿಂಗ ಮತ್ತು ಅಂಗಗಳು ಮೊದಲು ಮೂರು "ಮೂರು" ತೆರನಾದವು. ಮುಂದೆ ಇವು ಪ್ರತಿಯೊಂದು ವಿಭಾಗದಲ್ಲಿ "ಎರಡೆರಡು" ಭಾಗಗಳಾಗಿ ಆರಾರು ಭಾಗಗಳಾದವು.

ದೀಕ್ಷೆಯಿಂದ ಪರಿಶುದ್ಧನಾದ ಜೀವನಿಗೆ ಅಂಗನೆಂದು ಹೆಸರಿದೆ. ಹೀಗೆ ಪರಿಶುದ್ಧನಾದ ಜೀವನು ತನ್ನ "ಮೂರುತನುಗಳಲ್ಲಿ" (ಸ್ಥೂಲ, ಸೂಕ್ಷ್ಮ, ಕಾರಣ) ಆಯಾ ತನುಗಳಿಗೆ ಸಂಬಂಧಿಸಿದ ಇಂದ್ರಿಯಗಳಿಂದಲೂ, ಮನಸ್ಸಿನಿಂದಲೂ ಲಿಂಗವನ್ನು ಪೂಜಿಸಿ ಲಿಂಗವಾಗಬಯಸಿದುದರಿಂದ ಲಿಂಗನು "ಮೊದಲು ಮೂರಾಗಿ" ನಂತರ ಆರಾಗಿ ಪರಿಣಮಿಸಿದನು.

ತ್ಯಾಗಾಂಗದ ದೃಷ್ಟಿ, ಭೋಗಾಂಗದ ಮನಸ್ಸು ಯೋಗಾಂಗದ ಭಾವಗಳಿಗೆ ನಿಲುಕುವಂತೆ ಲಿಂಗಯ್ಯನು "ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳೆಂಬ" ಅಭಿದಾನದಿಂದ ಬೆಳಗತೊಡಗಿದನು. ಹೀಗೆ ಮೂರು ತೆರನಾದ ಲಿಂಗವು ಪ್ರತಿಯೊಂದರಲ್ಲಿ ಎರಡೆರಡು ಭಾಗಗಳಾಗಿ ಆರು ತೆರನಾಯಿತು— "ಇಷ್ಟಲಿಂಗ" ದಲ್ಲಿ ಆಚಾರಲಿಂಗ, ಗುರು-ಲಿಂಗಗಳೆಂತಲೂ, "ಪ್ರಾಣಲಿಂಗ" ದಲ್ಲಿ ಶಿವಲಿಂಗ, ಜಂಗಮಲಿಂಗಗಳೆಂತಲೂ, "ಭಾವಲಿಂಗ" ದಲ್ಲಿ ಪ್ರಸಾದಲಿಂಗ ಮಹಾಲಿಂಗಗಳೆಂತಲೂ ಆರು ವಿಭಾಗಗಳಾಗಿ ಹೆಸರುಗೊಂಡವು. ಒಡನೆಯೇ ಅಂಗನು ತನ್ನ ಮೂರು ರೂಪಗಳನ್ನು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗ ಶರಣ, ಐಕ್ಯವೆಂದೂ ಆರಾಗಿ ಮಾರ್ಪಡಿಸಿ, ಆ ಒಂದೊಂದು ಲಿಂಗವಿಭಾಗದಲ್ಲೂ ಒಂದೊಂದು ಲಿಂಗವನ್ನು ಅನುಕ್ರಮವಿಡಿದು ಧರಿಸಿ ಆರಾಧಿಸತೊಡಗಿದನು.

"ಶಕ್ತಿ, ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ ಆದಿಶಕ್ತಿ, ಪರಾಶಕ್ತಿಯೆಂದೂ ಆರು ತೆರನಾಗಿ ಮಾರ್ಪಟ್ಟುದಾಗಿ" ಆರು ಲಿಂಗಗಳಿಗೆ ಸಂಗಾತಿಯಾಯಿತು.

ಅದೇ ತೆರನಾಗಿ ಭಕ್ತಿಯು ಕೂಡಾ ಶ್ರದ್ಧಾಭಕ್ತಿ ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭಾವಭಕ್ತಿ ಆನಂದಭಕ್ತಿ, ಸಮರಸಭಕ್ತಿ ಎಂಬ ಹೆಸರುಗಳಿಂದ ಆರು ತೆರನಾಗಿ ಅಂಗನಲ್ಲಿ ಬೆರೆತು

ಲಿಂಗದಲ್ಲಿ ಅಂಗನು ಪುನಃ ಬೆರೆಯುವದಕ್ಕೆ ಕಾರಣ ವಾಯಿತು. ಹೀಗೆ ಅಂಗ ಮತ್ತು ಲಿಂಗಗಳಲ್ಲಿ ಮೈದೋರಿರುವ ಈ ತೆರನಾದ ಆರಾರು ಭೇದಗಳಿಗೆ ಷಟಸ್ಥಲಗಳೆಂಬ ಹೆಸರುಂಟಾಯಿತೆಂದು ಬಲ್ಲವರು ಹೇಳುತ್ತಾರೆ.

ದೀಕ್ಷೆಯನ್ನು ಮಾಡುವಾಗ ಗುರುವು ಶಿಷ್ಯನಿಗೆ ಅಂಗ-ಲಿಂಗಗಳು ಭಕ್ತಿ, ಶಕ್ತಿ, ಮುಖ, ಹಸ್ತ, ಪದಾರ್ಥ, ಪ್ರಸಾದ ಇವುಗಳ ಬಗೆಗೆ ಸರಿಯಾದ ತಿಳುವಳಿಕೆಯನ್ನು ಮಾಡಿಕೊಡುತ್ತಾನೆ.

ಆರು ತೆರನಾಗಿ ಇರುವ ಅಂಗಸ್ಥಲಗಳು ಪುನಃ ನಾಲ್ವತ್ನಾಲ್ಕು ( ೪೪ ) ವಿಭಾಗಗಳಾಗಿ ಆರು ಲಿಂಗಗಳು ಐವತ್ತೇಳು ( ೫೭ ) ವಿಭಾಗಗಳಾಗಿ ಒಟ್ಟು " ೧೦೧ " ಸ್ಥಲಗಳೆಂದಾಗಿವೆ. ಇವುಗಳ ಗುಟ್ಟನ್ನು ಅರಿದರೆ ಷಟಸ್ಥಲಾಚರಣೆಯು ಸುಲಭವಾಗುವದು.

ಆ ಪರಾತ್ಪರ ವಸ್ತು ಮೊದಲು ಲಿಂಗ-ಅಂಗ ನೆಂದು ಎರಡುಭಾಗವಾಗಿ ಮುಂದೆ ( ಇಷ್ಟ, ಪ್ರಾಣ ಭಾವ ) ಮೂರು — ( ತ್ಯಾಗಾಂಗ, ಭೋಗಾಂಗ, ಯೋಗಾಂಗ ) ಮೂರು ಭಾಗವಾಗಿ ಪುನಃ ಆಚಾರಾದಿ ಆರು " ಲಿಂಗಗಳಾಗಿ " ಭಕ್ತಾದಿ ಆರು " ಅಂಗಸ್ಥಲ " ಗಳಾಗಿ ಹನ್ನೆರಡು ವಿಭಾಗ ವಾಯಿತು. ಈ ಆರಾರು ಅಂಗ-ಲಿಂಗ ವಿಭಾಗಗಳಲ್ಲಿ ಪುನಃ ಒಂದೊಂದರಲ್ಲಿ ಮೂರು ಮೂರು ಭಾಗಗಳಾದುದರಿಂದ ಪ್ರತಿಯೊಂದು ಭಾಗದಲ್ಲಿ ಹದಿನೆಂಟರಂತೆ ಎರಡು ಗುಂಪುಗಳಾಗಿ ಮೂವತ್ತಾರು ( ೩೬ ) ವಿಭಾಗ ಗಳಾದವು. ಹೀಗಿರುವ ಷಟಸ್ಥಲ ಸಿದ್ಧಾಂತದಲ್ಲಿ ಶಿವನೇ ಭಕ್ತೋದ್ಧಾರಕನೆಂದು ಸಾರಿ ಹೇಳಲಾಗಿದೆ.

ಅನುಭವವು ಬೆಳೆದಂತೆ ಈ ಷಟಸ್ಥಲದ ಭೇದ ಗಳು ತಾವಾಗಿಯೇ ಮನನವಾಗುವದು. ಈಗ ಈ ಷಟಸ್ಥಲಮಾರ್ಗದಲ್ಲಿಯೇ ಭೋಗವನ್ನು ಆಯಾ ಸ್ಥಲಗಳಿಗೆ ಅನುಗುಣವಾದ ಲಕ್ಷಣಗಳನ್ನು ಹೇಳುತ್ತ ಭಕ್ತಿಯ ಮಹಾತ್ಮೆಯನ್ನು ವಿವರಿಸಲಾಗಿದೆ.

ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಮತ್ತು ಆತ್ಮವೆಂಬುವವು ಅಂಗಗಳು. ಇವುಗಳಿಗೆ ಅನುಕ್ರಮವಾಗಿ ನಾಸಿಕ, ಜಿಹ್ವೆ, ನೇತ್ರ, ತ್ವಕ್ಕು, ಹೃದಯಗಳೆಂಬ ಆರು ಮುಖಗಳುಂಟು. ಅದರಂತೆಯೆ ಅವುಗಳಿಗೆ ಸುಚಿತ್ತ, ಸುಬುದ್ಧಿ, ಸುಮನಸ್ಸು, ಸುಜ್ಞಾನ ಸುಭಾವಗಳು, ಹಸ್ತಗಳು. ಇವುಗಳು ( ಅಂಗ, ಮುಖ ಹಸ್ತ ) ಆಯಾಯ ಸ್ಥಲದೊಟ್ಟುಗಳಲ್ಲಿ ಆಯಾಯ ಲಿಂಗಗಳಿಗೆ ಅರ್ಪಣಕ್ಕೆ ಸಹಾಯಕವಾದವುಗಳಾಗಿವೆ.

ಈ ಭೂಮಿಯಲ್ಲಿರುವ ವಸ್ತುಗಳು ನಾನಾವಿಧ ವಾಗಿ ಕಂಡರೂ ಅವುಗಳನ್ನೆಲ್ಲ ಷಟಸ್ಥಲ ಜ್ಞಾನಿಗಳು ಗಂಧ, ರಸ, ರೂಪ, ಸ್ಪರ್ಶ, ಶಬ್ದ, ತೃಪ್ತಿಗಳೆಂದು ಆರು ತೆರನಾಗಿ ವಿಭಾಗಿಸಿದ್ದಾರೆ. ಪೃಥ್ವ್ಯಾದಿಯಾಗಿರುವ ಆರು ತನುಗಳಲ್ಲಿ ಶ್ರದ್ಧಾದಿಯಾಗಿ ಆರು ಭಕ್ತಿಗಳು ನಿಂತು ಗಂಧಾದಿ ಆರುಬಗೆಯ ಪದಾರ್ಥಗಳನ್ನು ಭಕ್ತಾದಿ ಸ್ಥಲಕ್ಕನುಸರಿಸಿ ಕ್ರಿಯಾಶಕ್ತಿಯೇ ಮೊದ-ಲಾದ ಆರುಶಕ್ತಿಗಳಿಂದೊಡಗೂಡಿ ಪರಿಶೋಭಿಸು-ತ್ತಿರುವ ಆಚಾರಾದಿ ಆರು ಲಿಂಗಗಳಿಗೆ ನಾಸಿಕಾದಿ ಯಾಗಿರುವ ಆರು ಮುಖಗಳಲ್ಲಿ ಸುಚಿತ್ತಾದಿ ಆರು ಸಹಸ್ರಗಳಿಂದ ಅರ್ಪಿಸಿ, ಪ್ರಸಾದವನ್ನು ಭೋಗಿಸು-ವದು ಷಟಸ್ಥಲ ಮಾರ್ಗಾಚರಣೆಯ ಸಂಕ್ಷಿಪ್ತ ವಿವರಣೆ ಯಾಗಿದೆ. ಹೀಗೆ ಷಟಸ್ಥಲಮಾರ್ಗದಲ್ಲಿ ನಡೆದು ದಿನ ದಿನವೂ ಲಿಂಗ ಭೋಗೋಪಭೋಗಿಯಾಗಿರುವ ಭಕ್ತ ನಲ್ಲಿ ಲಿಂಗಭಾವವು ಬಲಿತು ಲಿಂಗವೇ ತಾನಾಗುವ ನೆಂಬುದು ದಿಟವು.

ಈ ದೀಕ್ಷಾಕಾಲದಲ್ಲಿ ಗುರುವು ತನಗೆ ಬೋಧಿಸಿದುದರಲ್ಲಿ ಶ್ರದ್ಧೆಯನ್ನಿಟ್ಟು ಆಚರಿಸುತ್ತ ಕಾಯಕ ನಿರತನಾಗಿ ದುಡಿದುದನ್ನು ಗುರು ಲಿಂಗ ಜಂಗಮಕ್ಕೆ ಅರ್ಪಿಸಿ ಅವರ ಪ್ರಸಾದ ಭೋಗೋಪಭೋಗಿಯಾಗಿರುವದೇ ಭಕ್ತಸ್ಥಲದ ಕುರುಹಾಗಿದೆ.

ಪರಿಶುದ್ಧವಾದ ಆಚರಣೆಯಿಂದಾಗಿ ಗುರು ಲಿಂಗ ಜಂಗಮದಲ್ಲಿ ನಿಷ್ಠೆಯುಳ್ಳವನಾಗಿ ಸತ್ಯ, ದಯಾ ಸದ್ಗುಣ ವಿಭೂಷಿತನಾಗಿ ಪರಧನಕ್ಕೆ ಆಸೆಗೈಯದಂತಪ್ಪುದೆ ಮಹೇಶ್ವರ ಸ್ಥಲದ ಲಕ್ಷಣವು.

ವಿಷಯಭೋಗವು ತಿರಸ್ಕರಣೀಯವಾದದ್ದು ಎಂಬುದನ್ನರಿತು ಗಂಧವೇ ಮೊದಲಾದ ಪದಾರ್ಥಗಳನ್ನು ಐದು ಇಂದ್ರಿಯಗಳಲ್ಲಿರುವ ಆಚಾರಾದಿ ಲಿಂಗಗಳಿಗೆ ಅರ್ಪಿಸಿ ಆಯಾ ಪ್ರಸಾದಗಳನ್ನು ಅವಧಾನ ಭಕ್ತಿಯಿಂದ ಭೋಗಿಸುವದನ್ನರಿತಿರುವುದೇ ಪ್ರಸಾದಿಸ್ಥಲದ ಲಕ್ಷಣವು. ಪ್ರಾಣದಲ್ಲೂ ಇಂದ್ರಿಯಾದಿಗಳಲ್ಲೂ ನಾನು ನನ್ನದೆಂಬ ಭಾವ ಹೋಗಿ ಇದೆಲ್ಲವೂ ಲಿಂಗಮಯ ಭಾವಿಸಿ ಅನುಭಾವ ಭಕ್ತಿಯಲ್ಲಿರುವುದೇ ಪ್ರಾಣಲಿಂಗ ಸ್ಥಲವು.

ದೇಹೇಂದ್ರಿಯಾದಿಗಳು ಲಿಂಗಪ್ರಕಾಶದಿಂದ ಬೆಳಗುತ್ತಿರಲಾಗಿ ಲಿಂಗಪ್ರಸಾದ ಭೋಗಿಯಾಗಿ ಲಿಂಗಾನಂದದಲ್ಲಿ ಲಿಂಗಾಂಗದಲ್ಲಿರುವುದೇ ಶರಣಸ್ಥಲದ ಕುರುಹಾಗಿದೆ.

ಕೊನೆಯದಾಗಿ ಐಕ್ಯಸ್ಥಲದ ಲಕ್ಷಣವು ಲಿಂಗಾಂಗ ಸಾಮರಸ್ಯದ ಸಹಜ ಸ್ಥಿತಿಯಾಗಿದೆ. ಈ ಸ್ಥಲದಲ್ಲಿ ಎಲ್ಲವೂ ಶಿವಮಯವಾದುದರಿಂದ ಇಲ್ಲಿ ಶುಭಾಶುಭಗಳ ಮಾತಿಲ್ಲ. ಈ ಸ್ಥಲದಲ್ಲಿ ನಡೆಯುವ ಕ್ರಿಯೆಗಳೆಲ್ಲವೂ ಲಿಂಗಕ್ರಿಯೆಗಳಾಗಿ ಭೋಗಗಳೆಲ್ಲವೂ ಲಿಂಗಭೋಗಗಳಾಗಿರುವವು. ಈ ತರದ ಷಟಸ್ಥಲದ ಮೂರ್ತಿಯೇ ಶಿವಯೋಗಿಯು. ಆತನಲ್ಲಿ ಸಮರಸ ಸುಭಕ್ತಿಯಲ್ಲದೆ ಇನ್ನೇನೂ ಕಾಣದು. ಈ ಭಕ್ತಿಯಲ್ಲಿ ತ್ರಿಗುಣಗಳು ಇದ್ದಂತೆ ಕಾಣುತ್ತಿದ್ದರೂ ಅವೆಲ್ಲವೂ ಶಿವಾರ್ಪಿತವಾಗಿರುವದರಿಂದ ಅವನು ನಿರ್ಗುಣಿಯು. ಈ ಭಕ್ತಿಯ ಸ್ಥಿತಿಯು ಭೋಗ ಮೋಕ್ಷಾಕಾಜಿಯ ಸ್ಥಿತಿಯಾಗಿದ್ದುದರಿಂದ ಇದಕ್ಕೆ "ಪಂಚಮ" ಪುರುಷಾರ್ಥವೆನ್ನುವರು. ಭಕ್ತಿಯಲ್ಲಿ ತಾಮಸಾದಿ ಗುಣಗಳನ್ನು ನಾಶಮಾಡಿ ಜೀವನಿಗೆ ಈಶಸ್ವರೂಪವನ್ನು ತಂದುಕೊಡುವದಾಗಿದೆ.

ಈ ಕಾರ್ಯಗಳ ಫಲಾಫಲಗಳ ಹೊಣೆಗಾರನು ನಾನು, ಎಂಬ ಅಭಿಮಾನವೇ ಕರ್ಮವು. ಎಲ್ಲ ಕ್ರಿಯೆಗಳಿಗೂ ನಾನು ಸಾಕ್ಷಿಗಾರನು ಎಂಬುದು ಜ್ಞಾನವು. ಈ ಎರಡು ಅಭಿಮಾನಗಳನ್ನು ಕಳೆದು ಸರ್ವಕರ್ತೃವು ಸರ್ವಸಾಕ್ಷಿಯೂ ಶಿವನಾಗಿದ್ದಾನೆ ಎಂಬ ಅರಿವೇ ಭಕ್ತಿಯು. ಈ ತೆರನಾಗಿರುವ ಕರ್ಮ, ಜ್ಞಾನ, ಭಕ್ತಿಗಳನ್ನು ಕಾಯ್ದ ಕಬ್ಬಿಣ, ಕಮಲದಳ ಸಿಂಪುಗಳಿಗೆ ಹೋಲಿಸುತ್ತಾರೆ. ಸಂಸ್ಕೃತಜಲವನ್ನು ಸಿಂಪಿನ ರೂಪದ ಭಕ್ತಿಯಲ್ಲಿ ಇರಿಸಿ ಮೋಕ್ಷವೆಂಬ ಮುತ್ತನ್ನು ನಿರ್ಮಿಸುವದು ಶ್ರೇಯಸ್ಕರವು.

ಕರ್ಮ, ಜ್ಞಾನ, ಭಕ್ತಿಗಳಲ್ಲಿ ನಾವು ಮಾಡಿದ ಕಾರ್ಯಗಳಿಂದ ಬರುವ ಶುಭಾಶುಭ ಫಲಗಳೂ ಬೇರೆ ಬೇರೆ ತೆರನಾಗಿವೆ. ಕರ್ಮಕ್ಕೆ ಬರುವ ಫಲವು ಶಾಶ್ವತವಾಗಿಯೂ, ಜ್ಞಾನದಫಲವು ಕೆಲದಿನಗಳವರೆಗೆ ಮಾತ್ರ ಉಳಿಯುವದಾಗಿಯೂ, ಭಕ್ತಿಯಿಂದ ದೊರೆತ ಫಲವು ಜಲಲಿಪಿಯಂತೆ ತಕ್ಷಣವೇ ಇಲ್ಲದಾಗುವದಾಗಿದೆ

ಪಾಪಕರ್ಮದಿಂದ ನರಕಭೋಗವು, ಪುಣ್ಯಕರ್ಮದಿಂದ ಪರಮಪದವಿಗಳು, ಜ್ಞಾನದಿಂದ ಮೋಕ್ಷವು ಲಭಿಸುವದು.

ಬೀಜ-ವೃಕ್ಷ ನಾಮದಂತೆ ಭಕ್ತಿಯಿಂದ ಶಿವಕೃಪೆ ಆ ಕೃಪೆಯಿಂದ ಭಕ್ತಿಯು ಜನಿಸುವದು.

ಹೀಗೆ ಭಕ್ತಿಯ ಮಹಿಮೆಯು ಅಗಾಧವಾದುದು-

ಭಕ್ತಿಯೇ ಷಟಸ್ಥಲಾಚರಣೆಯ ಸಾರ ಸರ್ವಸ್ವವಾಗಿದೆ.



# ಬೇಕು

ಪಂಚತತ್ವವು ಬೇಕು । ಪಂಚಾಚಾರ್ಯರು ಬೇಕು
ಪ್ರಜರಿಗೆ ರಾಜಗುರುಬೇಕು । ಸ್ವತಂತ್ರ ಪುರುಷ ಬೇಕು

೧

ಬಾರಾಜ್ಯೋತಿರ್ಲಿಂಗವು ಬೇಕು । ಬಾರಾ ಬಲುತಿಬೇಕು
ಬಾಲಬ್ರಹ್ಮಚಾರಿ ಬೇಕು । ಬಾಲ ಶಿವಯೋಗಿ ಬೇಕು
ಷಟಸ್ಥಲಪುರುಷ ಬೇಕು । ಷಷ್ಟ್ಯಬ್ಧಿಗೆ ಸಂಚಿಕೆಬೇಕು
ಸಂಸ್ಕಾರ ಬೇಕು ಸರ್ವರಿಗೆ । ಸಾಧು ಜಂಗಮ ಬೇಕು.

೨

ಪಂಚ ವೇದ ಬೇಕು । ಪಂಚ ಕಲಶ ಬೇಕು
ಪಂಚಾಯತಿರಾಜ್ಯ ಬೇಕು । ಪ್ರಪಂಚಸೂತ್ರಕ ಬೇಕು
ಪಂಚಯೋಜನೆ ಬೇಕು । ಪ್ರಯತ್ನಶೀಲ ಬೇಕು
ಪಂಚಾಯತ ಸಮಿತಿಬೇಕು। ಸದ್ಗುರುಶಾಂತ ನೀಬೇಕು.

೩

ಪಾರಮಾರ್ಥವು ಬೇಕು । ಪರಂಜ್ಯೋತಿ ಬೇಕು
ಪ್ರಮಥ ಪುಂಗವ ಬೇಕು । ಪ್ರಶಾಂತ ಚಿತ್ತ ಬೇಕು
ಪ್ರೌಢಶಾಲೆಯು ಬೇಕು । ಪ್ರೌಢ ಪದ್ಧತಿ ಬೇಕು
ಪವಾಡಪುರುಷ ಬೇಕು । ಪ್ರಸನ್ನರೇಣುಕ ನೀ ಬೇಕು.

೪

ಸಮಾಜ ಸಮಿತಿ ಬೇಕು । ಸರ್ವ ಬಾಧ್ಯತೆ ಬೇಕು
ಸಮಾನತ್ವವೆ ಬೇಕು । ಸರ್ವರಿಗೆ ಸೌರಾಷ್ಟ್ರಲಿಂಗ ಬೇಕು
ಭಾವಭಕ್ತಿಯು ಬೇಕು । ಭಾರತ ಸರಕಾರ ಬೇಕು
ಭರತನ ಬಂಧುತ್ವ ಬೇಕು । ನೀ ಬೇಕು ಭಕ್ತವತ್ಸಲಾ.

೫

ಒಕ್ಕಲತನ ದೇಶ ಬೇಕು । ಒಕ್ಕೂಟ ಸರಕಾರ ಬೇಕು
ಒಂದೇಮಾತರಂ ಬೇಕು । ಮಹಾತ್ಮಾ ಪುರುಷ ಬೇಕು
ರಾಷ್ಟ್ರವೀರರು ಬೇಕು । ರಾಷ್ಟ್ರಗೀತೆಯು ಬೇಕು
ರಾಷ್ಟ್ರಭಾಷಾ ಬೇಕು । ರಾಷ್ಟ್ರಗುರು ನೀ ಬೇಕು.

೬

ಗತಿಗೆ ಮಿತಿ ಬೇಕು । ಮಿತಿಗೆ ತಿಥಿ ಬೇಕು
ಗಂಡ ಬೇಕು ಗರತಿಗೆ । ಗರ್ವ ನಿವಾರಕ ಗುರು ಬೇಕು
ನಿಜಾನಂದವು ಬೇಕು । ನಿಜಪದವು ಬೇಕು
ನಿತ್ಯ ಸತ್ಯವು ಬೇಕು। ನಿಃಸಂಗ ನಿಜರೂಪ ನೀ ಬೇಕು.

೭

ವೀರಸ್ವರ್ಗವ ಬೇಕು । ವೀರಪೀಠವ ಬೇಕು
ವೀರಶೈವ ಧರ್ಮ ಬೇಕು । ವಿಶ್ವಾಸ ವಿಶ್ವೇಶ್ವರ ಬೇಕು
ಖಂಡತುಂಡವ ಬೇಕು । ಖಂಡಿತ ಮಾಡಬೇಕು
ಅಖಂಡ ಭಾರತ ಬೇಕು। ಪಂಡಿತ ಕುಲಪತಿ ನೀ ಬೇಕು.

೮

ಪಂಚತತ್ವದ ಗುರು ಬೇಕು । ಪ್ರಜಾಪ್ರಭುತ್ವವು ಬೇಕು
ಪಂಚಾಕ್ಷರಿಮಂತ್ರ ಬೇಕು। ಪಂಚವರ್ಣದ ಧ್ವಜ ಬೇಕು
ಹಿರೇ-ಜೇವರ್ಗಿ ಬೇಕು । ಹಿರಿಕಿರಿಯರು ಬೇಕು
ಹಿರೇಮಠಾಧೀಶ ಶ್ರೀ ಗುರುಶಾಂತಲಿಂಗೇಶ ನೀ ಬೇಕು.

— M G. Takali, Hire-Jewargi.



|| ಓಂ ಶ್ರೀ ಪಂಚಜಗದ್ಗುರುಭ್ಯೋ ನಮಃ ||

# ಗುರುವಿನ ಗುಲಾಮನಾಗು.

ಭಾರತವು ಧರ್ಮಪ್ರಧಾನ ದೇಶವಾಗಿದ್ದು ಇಲ್ಲಿ ಅನೇಕ ಋಷಿಮುನಿಗಳೂ, ಮಹಾತ್ಮರೂ, ಗುರುಗಳು ಆಗಿಹೋಗಿದ್ದಾರೆ. ಈಗಲೂ ಅನೇಕ ತಪಸ್ವಿಗಳೂ, ಮಹಂತರೂ ಗುರುಗಳೂ ಇದ್ದಾರೆ. ಮುಂದೆಯೂ ಎಂದೆಂದಿಗೂ ಅಂಥ ಮಹಾ ಮಹಿಮರು ಉದಯಿಸ–ಲಿದ್ದಾರೆ. ಅಂಥ ಗುರುಪರಂಪರೆಗೆ .ಸೇರಿದ ನಮ್ಮ ಅಕ್ಕಲಕೋಟೆ ಕುಂಬಾರ ಮಠದ : ಪರಮ ಪೂಜ್ಯ ಗುರುಗಳಾದ ಶ್ರೀ ಗುರುಶಾಂತಲಿಂಗೇಶ್ವರರೂ ಒಬ್ಬ–ರಾಗಿದ್ದಾರೆ. ಅವರ ಶಾಂತ ಮುಖಮುದ್ರೆ, ಬ್ರಹ್ಮ–ಚರ್ಯದ ತೇಜಸ್ಸು. ತಪಃಪ್ರಭಾವ ಯಾರನ್ನೂ ಮುಗ್ಧಗೊಳಿಸುವಂತಹದು. ಅವರು ಹಗಲಿರುಳೂ ಭಗವತ್ ಚಿಂತನೆಗಾಗಿ. ಸಮಾಜದ ಏಳಿಗೆಗಾಗಿ, ಶೈಕ್ಷಣಿಕ ವಿಕಾಸಗಳಿಗಾಗಿ, ಜೀವನವನ್ನು ಮುಡುಪಾಗಿ ಇಟ್ಟಿದ್ದಾರೆ. ಸಮಾಜದಲ್ಲಿಯ ಅಧರ್ಮದ ಬೇರುಗಳನ್ನು ಕತ್ತರಿಸಿ ಧರ್ಮಮಾರ್ಗದಿಂದ ಅವರು ನಡೆಯಲು ಪ್ರೇರೇಪಿಸಲು ಪ್ರತಿವರುಷವೂ ಪುರಾಣ, ವಿದ್ವಜ್ಜನರ ಭಾಷಣ ಮುಂತಾದ ಕಾರ್ಯಕ್ರಮಗಳನ್ನು ಎಡೆಬಿಡದೆ ನಡೆಸುತ್ತಿದ್ದಾರೆ. ಅಂಥ ಸದ್ಗುರುಗಳ ಷಷ್ಠ್ಯಬ್ದಿ ಸಮಾರಂಭದ ವ್ಯವಸ್ಥೆ ಇದೇ ಭಾದ್ರಪದ ಶುಕ್ಲಮಾಸದ ದ್ವಾದಶಿ. ಅವರ ಹುಟ್ಟುಹಬ್ಬದ ಶುಭ ದಿನದಂದು ನೆರವೇರಿಸಲು ಅವರ. ಶಿಷ್ಯವೃಂದವೆಲ್ಲ ನಿರ್ಧರಿಸಿ ಕಾರ್ಯಪ್ರವೃತ್ತವಾಗಿದೆ. ಈ ಶುಭ ಕಾರ್ಯಕ್ಕಾಗಿ ಎಲ್ಲರೂ ತಮ್ಮ ಶಕ್ತ್ಯಾನುಸಾರ ತನು, ಮನ, ಧನಗಳಿಂದ ಸೇವೆ ಸಲ್ಲಿಸಿ ಗುರು.ಕೃಪೆಗೆ ಪಾತ್ರರಾಗಲೆಂದು ಹಾರೈಕೆ–ಅಸ್ತು.

" ಗುರುವಿನ ಗುಲಾಮನಾಗದ ತನಕ ದೊರೆಯದಣ್ಣ ಮುಕುತಿ" ಎಂಬ ಅನುಭವ ವಾಣಿಯಿಂದ ನಾವು ಪ್ರೇರಿತರಾಗಬೇಕಾಗಿದೆ. ನಮ್ಮ ಅಜ್ಞಾನದ ಅಂಧಕಾರವನ್ನೂ ಹೊಡೆದೋಡಿಸಿ ಜ್ಞಾನಪ್ರಭೆಯನ್ನು ನೀಡುವ ಗುರುಗಳ ಪಾದಾರವಿಂದಗಳಲ್ಲಿ ಅನವರತವೂ ನಮ್ಮ ದೀರ್ಘದಂಡ ವಂದನೆಗಳನ್ನರ್ಪಿಸುತ್ತ ಧರ್ಮಮಾರ್ಗದಲ್ಲಿ ಜೀವನ ಸಾಗಿಸಬೇಕಾಗಿದೆ. ಈ ಭವಸಾಗರವನ್ನು ಲೀಲಾಜಾಲವಾಗಿ ದಾಟಲು ಗುರುಗಳ ಅನುಗ್ರಹ ಪಡೆಯಬೇಕಾಗಿದೆ. ಅವರ ಬೋಧಾಮೃತ ಪಡೆದು ಆಚಾರ ವಿಚಾರಗಳಲ್ಲಿ ಮೇಳವಿಟ್ಟು ಸಾಗಬೇಕಾಗಿದೆ. ತಮ್ಮ ತಮ್ಮ ವ್ಯವಸಾಯವನ್ನು ಪ್ರಾಮಾಣಿಕ ರೀತಿಯಿಂದ ಮಾಡಿ ಕಷ್ಟಾರ್ಜಿತ ಧನದಿಂದ ಕುಟುಂಬದ ಪೋಷಣೆ ಮಾಡುವದಲ್ಲದೆ ಸಮಾಜ, ದೇಶದ ಋಣವನ್ನು ಮುಟ್ಟಿಸುವ ಅವರ ಆದೇಶವನ್ನು ಆಲಿಸಿ ನಡೆಯಬೇಕಾಗಿದೆ. " ಕರ್ಮವೇ ಪೂಜೆ " ಎಂಬ ಅವರ ಸಂದೇಶವನ್ನು ಅರಿತು ಆಚರಿಸಬೇಕಾಗಿದೆ. ಶೀಲವೇ ಭೂಷಣವೆಂಬ ಅವರ ಅನುಭವಾಮೃತ ಪಡೆದು ಶೀಲವಂತರಾಗಬೇಕಾಗಿದೆ. ಪರನಿಂದೆ, ಪರಧನ, ಪರಸ್ತ್ರೀಗಮನ ಇವನ್ನು ತುಚ್ಛೀಕರಿಸಿ ಸನ್ಮಾರ್ಗದಲ್ಲಿ ನಡೆಯಲು ಉಪದೇಶಿಸುವ ಅವರ ನುಡಿಮುತ್ತುಗಳನ್ನು ನಾವೆಲ್ಲರೂ ಆಚರಣೆಯಲ್ಲಿ ತರಬೇಕಾಗಿದೆ. ಅನ್ಯರ ಜೀವನದಲ್ಲಿ ಸ್ಥಿರವಾದ ಸ್ಥಾನವನ್ನು ಪಡೆಯಿರೆಂಬ ಅವರ ಕರೆಗೆ ಓಗೊಟ್ಟು ಹೆಜ್ಜೆ ತಪ್ಪದಂತೆ ಹಾದಿ ತಪ್ಪದಂತೆ ಎಚ್ಚರದಿಂದ ನಡೆಯಬೇಕಾಗಿದೆ.

ಇಂಥ ಮಹಾಗುರುಗಳ ಉಪದೇಶ ಇನ್ನೂ ಅನೇಕ ಕಾಲ ನಮಗೆ ದೊರೆತು ನಾವೆಲ್ಲರೂ ಪಾಪಭೀರುಗಳಾಗಿ ಧರ್ಮವಂತರಾಗಿ ನಡೆಯುವಂಥ ಸದ್ಬುದ್ಧಿ ನಮಗೆ ಈಶನು ಕೃಪೆಮಾಡಲಿ. ಇಂಥ ಮಹಾಪುನೀತರಾದ ಗುರುಗಳು ಶತಾಯುಷಿಗಳಾಗಲಿ ಎಂದು ಪರಮಾತ್ಮನಲ್ಲಿ ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ ಧನ್ಯರಾಗೋಣ.

— B. S. ಪಾಟೀಲ
ಮುಖ್ಯೋಪಾಧ್ಯಾಯ ಕನ್ನಡ ಶಾಲೆ ನಂ. ೨ ಅಕ್ಕಲಕೋಟ.

॥ ಶ್ರೀ ಪಂಚ ಜಗದ್ಗುರುಭ್ಯೋ ನಮಃ ॥



ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯ ಬೃಹನ್ಮಠ ಹಿರೇಜೇವರಗಿ
ಇವರ ದಿವ್ಯ ಚರಣಾರವಿಂದಗಳಲ್ಲಿ
ಗುರುಚರಣ ಕಿಂಕರ : ವೇ. ಸಿ. ಸಿದ್ಧಯ್ಯ ಸ್ವಾಮಿ ಬೃಹನ್ಮಠ
ಸಿದ್ಧೇಶ್ವರ ಪಂಚಾಂಗಕರ್ತರು ಜಾಲಹಳ್ಳಿ ಇವರು ಮಾಳ್ಪ ಶಿರಸಾಷ್ಟಾಂಗ ನಮಸ್ಕಾರ

ವೀರ ಸಿಂಹಾಸನಾಧ್ಯಕ್ಷೋ । ಮುಕ್ತಿ ಮಂದಿರ ಸಂಸ್ಥಾಪಕಃ ।
ವೀರ ಗಂಗಾಧರ ಶಿವಾಚಾರ್ಯಃ । ಸೋಯಂ ವಿಜಯತೇತರಾಂ ॥

ಧರ್ಮದಿಂದಲೇ ವಿಶ್ವಕ್ಕೆ ಶಾಂತಿ "

ಪ್ರತಿಯೊಬ್ಬ ಮಾನವನಿಗೆ ಧರ್ಮ ಅವಶ್ಯ. ಯಾವದೇ ಮತದವನಾದರೂ ಧರ್ಮ ಬಿಟ್ಟು ನಡೆಯಲು ಸಾಧ್ಯವಿಲ್ಲ. ಧರ್ಮ ಬಿಟ್ಟು ರಾಷ್ಟ್ರವೂ ಕೂಡಾ ನಡೆಯಲಾರದು. ಧರ್ಮರಹಿತವಾದ ರಾಷ್ಟ್ರವು ಪ್ರಜೆಗಳಿಗೆ ಸುಖವನ್ನು ಕೊಡಲಾರದು. ಯಾವ ಮನುಷ್ಯನು ಧರ್ಮವನ್ನು ಬಿಡುತ್ತಾನೋ ಅವನು ಮೊದಲು 'ಧರ್ಮದ್ರೋಹಿಯಾಗುತ್ತಾನೆ. ನಂತರ ರಾಷ್ಟ್ರದ್ರೋಹಿಯಾಗುತ್ತಾನೆ.

" ಧರ್ಮೋ ವಿಶ್ವಸ್ಯ ಜಗತಃಪ್ರತಿಷ್ಠಾ " ಎಂದರೆ ಶುದ್ಧ ಜ್ಞಾನ, ಕ್ರಿಯಾತ್ಮಕ ಧರ್ಮವೇ ವಿಶ್ವಕ್ಕೆ ಆಧಾರ ವಾಗಿದೆ ಎಂದು ತೈತ್ತಿರಿಯೋಪನಿಷತ್ತು ಹೇಳುತ್ತದೆ. " ಪತಿತಂ ಪತಂತು ಪತಿಷ್ಯಂತಿ ಧಾರಾಯತಿ ಧರ್ಮ " ಬಿದ್ದವನನ್ನು ಬೀಳುತ್ತಿರುವನನ್ನು ಯಾವದು ಎತ್ತಿ ಹಿಡಿಯುತ್ತದೆಯೋ ಅದೇ ಧರ್ಮವೆಂದು ಗೌತಮ ಸ್ಮೃತಿ ಹೇಳುತ್ತದೆ. ರಾಷ್ಟ್ರರೂಪಿ ಶರೀರವು ಉಜ್ವಲ ತೇಜಸ್ಸಿನಿಂದ ಮೆರೆಯಬೇಕಾದರೆ ಧರ್ಮಸತ್ವವು ಅದಕ್ಕೆ ಅವಶ್ಯ ಬೇಕೆಂದು ಪರಾಶರ ಸ್ಮೃತಿಯು ಹೇಳುತ್ತದೆ. 'ಧರ್ಮೋಹಂತಿತಃ ಧರ್ಮೋರಕ್ಷತಿ ರಕ್ಷಿತಃ' ಎಂದರೆ ಧರ್ಮದ ಕಟ್ಟಳೆಯನ್ನು ಮೀರಿ ಸ್ವೇಚ್ಛಾನು- ಸಾರವಾಗಿ ಯಾವನು ನಡೆಯುತ್ತಾನೆಯೋ ಅವನನ್ನು ಆ ಧರ್ಮವೇ ನಾಶಮಾಡಿಬಿಡುತ್ತದೆ. ಯಾವನು ಧರ್ಮವನ್ನು ತನ್ನ ಪ್ರಾಣದಂತೆ ಕಾಪಾಡಿಕೊಂಡು ಒರುತ್ತಾನೆಯೋ ಅವನನ್ನು ಆ ಧರ್ಮವು ಎಲ್ಲಿಗೆ ಹೋದರು ಬಿಡದೇ ಬೆನ್ನುಹತ್ತಿ ಕೇವಲ ಮಿತ್ರನಂತೆ ಸಂರಕ್ಷಣೆ ಮಾಡುತ್ತದೆ.

ಭೌತಿಕ ಮತ್ತು ಪಾರಮಾರ್ಥಿಕ ಸುಖ ಸಂಪತ್ತು ಗಳನ್ನು ದೊರಕಿಸುವ ಸದ್ಗುಣ ಸಮೂಹಗಳನ್ನು ರೂಪಗೊಳಿಸುವ ಧರ್ಮವೇ ಎಲ್ಲ ಮತ ಧರ್ಮಗಳಿಗೆ ಮೂಲ ಕಾರಣವಾಗಿರುತ್ತದೆ.

ಅಂತೆಯೇ ಶ್ರೀಮದ್‌ರಂಭಾಪುರಿ ವೀರಸಿಂಹಾ- ಸನಾಧೀಶ್ವರ ೧೦೦೮ ಜಗದ್ಗುರು ಶ್ರೀ ಶ್ರೀ ಶ್ರೀ ಪ್ರಸನ್ನ- ರೇಣುಕ ವೀರಗಂಗಾಧರ ಶಿವಾಚಾರ್ಯ ಮಹಾಸ್ವಾಮಿ ಗಳು ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ಎಂದು ಘೋಷಣೆ ಮಾಡುತ್ತ ಮಾನವ ಧರ್ಮಕ್ಕೆ ಜಯವಾಗಲೆಂದು ಆಶೀರ್ವದಿಸುತ್ತಿದ್ದಾರೆ.

ತಮ್ಮ ಷಷ್ಠ್ಯಬ್ಧಿ ಕಾರ್ಯಕ್ರಮವು ವೈಭವ ಪೂರಿತವಾಗಿ ಜರುಗಲಿ, ತಮ್ಮಿಂದ ಪ್ರಕಟವಾಗುವ ಸ್ಮರಣ ಸಂಚಿಕೆಯು ಜ್ಞಾನಜ್ಯೋತಿಯಾಗಿ ಪ್ರಜ್ವಲಿಸಲಿ. ವೀರಶೈವ ಧರ್ಮ ಪ್ರಗತಿಗಾಗಿ ತಮ ಆಯುರಾರೋಗ್ಯ ಭಾಗ್ಯಾದಿಗಳು ಅಭಿವೃದ್ಧಿಹೊಂದು ವಂತೆ ಅನುಗ್ರಹಿಸಲೆಂದು ಜಗದ್ಗುರು ಪಂಚಾಚಾರ್ಯ ರನ್ನು ಪ್ರಾರ್ಥಿಸುತ್ತೇನೆ.



# ...ಬಾಲ ಶಿವಯೋಗಿಯ ಲೀಲೆ...



ಮೊದಲಿಗೇ ನೆನದೇನೊ ಗಣಪತಿ ಗುಣವಂತ
ಬಾಲಶಿವಯೋಗಿ ಗುರುಶಾಂತ ।
ಬಾಲಶಿವಯೋಗಿ ಗುರುಶಾಂತರ ನೆನೆದರ
ಬಂದಂಥ ಕಷ್ಟ ಬಯಲಾಗಿ ॥ ೧ ॥

ಯೋಗಿ ಸಿದ್ಧರಾಮ ಲಿಂಗೈಕ್ಯರಾದಮೇಲೆ
ಬಾಲ್ಯದಲ್ಲಿಯೆ ಪಟ್ಟ ಏರಿದರೊ ।
ಬಾಲ್ಯದಲ್ಲಿಯೇ ಪಟ್ಟ ಏರಿದರೊ ಗುರುಶಾಂತ
ಬಾಲಯೋಗಿಗಳಾಗಿ ಬೆಳಗ್ಯಾರೊ । ॥ ೨ ॥

ತಾಲೂಕ ಅಕ್ಕಲಕೋಟ ಜಿಲ್ಲೆ ಸೋಲಾಪೂರ
ರುದ್ದೆವಾಡ್ಯಾಗ ಜನಸ್ಯಾರೊ ।
ರುದ್ದೆವಾಡ್ಯಾಗ-ಜನಸ್ಯಾರೊ ಗುರುಶಾಂತ
ಹಿರೇಜೇವರ್ಗ್ಯಾಗ ನೆಲಸ್ಯಾರೊ॥ ॥ ೩ ॥

ತಾಯಿ ಧಾನಮ್ಮಾಂಬೆ ತಂದೆ ಗುರುಸಿದ್ಧಯ್ಯರ
ಜೇಷ್ಠಪುತ್ರರಾಗಿ ಜನಿಸ್ಯಾರೊ ।
ಜೇಷ್ಠಪುತ್ರರಾಗಿ ಜನಿಸ್ಯಾರೊ ಗುರುಶಾಂತ
ಶ್ರೇಷ್ಠಪುತ್ರರಾಗಿ ಬೆಳಗ್ಯಾರೊ । ॥ ೪ ॥

ಭಕ್ತ ದಂಪತಿಗಳು ಹಿರೇಜೇವರ್ಗಿ ಮಠಕ ಬಂದು
ಗುರುದರ್ಶನವರು ಪಡೆದಾರೊ ।
ಗುರುದರ್ಶನವರು ಪಡೆದಾರೊ ಬೃಹನ್ಮಠಕೆ
ಗುರುಶಾಂತನ ಬಿಟ್ಟು ನಡೆದಾರೊ । ॥ ೫ ॥

ಚಿಕ್ಕವಯದಲಿ ಯೋಗಿ ತಂದೆಯಸು ಕಳಕೊಂಡ
ತಂಗೀನ ಕಳಕೊಂಡ ಕೆಲದಿನಕೆ ।
ತಂಗೀನ ಕಳಕೊಂಡ ಕೆಲದಿನಕೆ ಆ ಯೋಗಿ
ಜೀವನ ದುಃಖಂತ ತಿಳಕೊಂಡ । ॥ ೬ ॥

ಪತಿದೇವರಿಲ್ಲದೆ ಅರಹುಚ್ಚಿಯಾದಳಾಸತಿ
ಗುರುಶಾಂತಗೆ ಮಠಕೆ ಬಿಡುವಲ್ಲಳೊ ।
ಗುರುಶಾಂತಗೆ ಮಠಕೆ ಬಿಡುವಲ್ಲಳಾತಾಯಿ
ಹಟಹಿಡಿದು ಅವಳು ಕುಳಿತಳೊ । ॥ ೭ ॥

ಮನಸಿನ ದುಗುಡದಲಿ ಮಗುವಿನ ಜಡೆನಿಂತು
ಜಡೆ ಗಂಟುಗಟ್ಟಿ ಬಿಟ್ಟಾವೊ ।
ಜಡೆ ಗಂಟುಗಟ್ಟಿ ಬಿಟ್ಟಾವೊ ಅದರಲ್ಲಿ
ಹುಳುಗಳೆಲ್ಲಾ ಸೇರಿ ವಟ್ಟ್ಯಾವೊ । ॥ ೮ ॥

ತುರಸಿದ ಯೋಗಿಯು ತಲೆಯನ್ನು ಕರಕರನೆ
ತಿರುಗಿದನೊ ಅವನು ಗರಗರನೆ ।
ತಿರುಗಿದನೊ ಅವನು ಗರಗರನೆ ಗುರುಶಾಂತ
'ಗದ್ದುಗೆ ನನ್ನೊಡೆಯಾ' ಎಂದಾನೊ । ॥ ೯ ॥

ಹಿಂಗ ನುಡಿಯಲು ಯೋಗಿ ಬಂದರು ಗಾಬರಿಯಾಗಿ
ಹಿರೇಜೇವರಗಿ ಮಠಕ ತ್ವರೆಮಾಡಿ ।
ಹಿರೇಜೇವರಗಿ ಮಠಕ ತ್ವರೆಮಾಡಿ ಗುರುಶಾಂತನ
ಜಡೆಗಳಳಿಸ್ಯಾಡ್ಯೊ ಥಳಿಗ್ಯಾಗೋ । ॥ ೧೦ ॥

ಗುರು ಪ್ರಸಾದವನುಂಡು ಮಠದ ಮಹಿಮೆಯ ಕಂಡು
ಗುರುಶಾಂತನ ಗುರುಪಾದಕ್ಕೊಪ್ಪಿಸ್ಯಾಳೊ ।
ಗುರುಶಾಂತನ ಗುರುಪಾದಕ್ಕೊಪ್ಪಿಸ್ಯಾಳೊ ಧಾನಮ್ಮ
ಗುರುಸೇವಿ ಮಾಡಿ ಕೀರ್ತಿ ಪಡೆದಾಳೊ । ॥ ೧೧ ॥

ಹಿರೇಜೇವರಗಿ ಮಠದಾಗ ಗಂವಟಿಯ ಸಾಲ್ಯಾಗ
ಓಂ ಶಿವಾಯ ಅವರು ಬರೆದಾರೊ ।
ಓಂ ಶಿವಾಯ ಅವರು ಬರೆದಾರೊ ಸಂಸ್ಕೃತವು
ಸೋಲಾಪುರದಾಗ ಓದ್ಯಾರೊ । ॥ ೧೨ ॥

ವಿದ್ಯಾಪ್ರೇಮಿ ಗುರು ಕನ್ನಡ, ಮರಾಠಿ, ಉರ್ದು,
ಹಿಂದಿ, ಮೋಡಿ ಅವರು ಬಲ್ಲವರೊ ।
ಹಿಂದಿ, ಮೋಡಿ ಅವರು ಬಲ್ಲವರೊ ಗುರುಶಾಂತ
ಸಂಸ್ಕೃತದ ಶ್ಲೋಕ ಖಂಡಿತರೊ । ॥ ೧೩ ॥

ಜಡೆಪ್ಪ ಮಹಾರಾಜ ಅಳ್ಳಿಗಿ ರೇವಣಸಿದ್ಧ
ಒಮ್ಮೆ ಆ ಮಠಕ ಬಂದಾರೊ ।
ಒಮ್ಮೆ ಆ ಮಠಕ ಬಂದಾರೊ ಗುರುಶಾಂತರ
ಅಯ್ಯಾಚಾರಕ್ಕವರು ನಿಂತಾರೊ ॥ ೧೪ ॥

ಅಯ್ಯಾಚಾರ ಆಣಿಯಾಯ್ತು ಖರ್ಚು ಹೆಚ್ಚಿಗೆ ಬಂತು
ಕೈಕಟ್ಟಿ ಅವರು ಕುಳಿತಾರೊ ।
ಕೈಕಟ್ಟಿ ಅವರು ಕುಳಿತಾರೊ ಭಾಗೀರಥಿ
ಲಕ್ಷ್ಮೀರೂಪವಧರಿಸಿ ಬಂದಾಳೊ ॥ ೧೫ ॥

ಮಧ್ಯ ರಾತ್ರಿಯಲ್ಲಿ ಹಿರಿಯರ ಮಧ್ಯದಲಿ
ದೇವಿ ಭಾಗೀರಥಿ ನುಡಿದಾಳೊ ।
ದೇವಿ ಭಾಗೀರಥಿ ನುಡಿದಾಳೊ ಆ ಕ್ಷಣಕ
'ಚಿಂತಿಯಾಕೆ ನಿಮಗೆ ಅಂದಾಳೊ ॥ ೧೬ ॥

ಹಿಂಗ ನುಡಿದ ದೇವಿ ಮಾಯವಾದಳು ತಾಯಿ
ಧನಕನಕ ಮಠದಾಗ ಸುರುವ್ಯಾರೊ ।
ಧನಕನಕ ಮಠದಾಗ ಸುರವ್ಯಾರೊ ಭಕ್ತರು
ಗುರುಶಾಂತನಯ್ಯಾಚಾರ ನಡೆಸ್ಯಾರೊ ॥ ೧೭ ॥

ನಾದದ ಶಿವಯೋಗಿ ಸದ್ಗುರು ಸಂಗನಬಸವ
ಗುರುಶಾಂತನಯ್ಯಾಚಾರ ಗೈದರೋ ।
ಗುರುಶಾಂತನಯ್ಯಾಚಾರ ಗೈದಾರೊ ಶಿವಯೋಗಿ
ವರದ್ಹಸ್ತ ಶಿರದ ಮೇಲೆ ಇಟ್ಟಾರೊ ॥ ೧೮ ॥

ಐದು ಐದೇ ತೊಲಿ ಕ್ಷೀರಪಾನವ ಮಾಡಿ
ಲಿಂಗಾನುಷ್ಠಾನವ ಗೈದಾರೊ ।
ಲಿಂಗಾನುಷ್ಠಾನವ ಗೈದಾರೊ ಗುರುಶಾಂತ
ನಾಲ್ವತ್ತೊಂದಿವಸ ಕುಳಿತಾರೊ ॥ ೧೯ ॥

ಪಾಲಿಕೊಪ್ಪದ ದೇವರು 'ಭೀಷ್ಮ ಬ್ರಹ್ಮಚಾರಿ'
ಬಾಲನ ಭಕ್ತಿಗೆ ಮೆಚ್ಚ್ಯಾರೊ ।
ಬಾಲನ ಭಕ್ತಿಗೆ ಮೆಚ್ಚ್ಯಾರೊ ಗುರುಶಾಂತನ
'ಬಾಲ ಶಿವಯೋಗಿ' ಎಂದು ಕರೆದಾರೊ ॥ ೨೦ ॥

ಬಾಲ್ಯದಾವಸ್ಥೆಯಲ್ಲಿ ಗುರುಶಾಂತಲಿಂಗ ಲೀಲೆ
ನಾದದ ಶಿವಯೋಗಿ ಬಂದಾರೊ ।
ನಾದದ ಶಿವಯೋಗಿ ಬಂದಾರೊ ಸಂಗನಬಸವ
ಗುರುಶಾಂತಲಿಂಗಗೆ ಪಟ್ಟ ಕಟ್ಟಿದರೊ ॥ ೨೧ ॥

ಪುಂಡ ಜನರು ಕೂಡಿ ಮಠದ ಆಸ್ತಿಯ ಬೇಡಿ
ಫಕೀರಯ್ಯ ಕೋರ್ಟಿಗೆ ಹೋದಾರೊ ।
ಫಕೀರಯ್ಯ ಕೋರ್ಟಿಗೆ ಹೋದರೋ ನ್ಯಾಯಾಧೀಶ
ಸರಿಯಾಗಿ ನ್ಯಾಯ ನುಡಿದಾರೊ ॥ ೨೨ ॥

ಅಕ್ಕಲಕೋಟೆ ಕೋರ್ಟಿನಲಿ ಸ್ವತಃ ವಕೀಲರು ಆಗಿ
ಗುರುಶಾಂತ ಯೋಗಿ ವಾದಿಸಿದರೊ ।
ಗುರುಶಾಂತ ಯೋಗಿ ವಾದಿಸಿದರೊ ನ್ಯಾಯಾಧೀಶ
ಬೆರಗಾಗಿ ಬೆರಳು ಕಚ್ಚಿದರೊ ॥ ೨೩ ॥

ಬಾಲ ಶಿವಯೋಗಿಯ ವಾದಸರಣಿಗೆ ಮೆಚ್ಚಿ
ಸರಿಯಾಗಿ ನ್ಯಾಯ ನುಡಿದರೊ ।
ಸರಿಯಾಗಿ ನ್ಯಾಯ ನುಡಿದರೊ ನ್ಯಾಯಾಧೀಶ
'ಮಠವೆಲ್ಲ ಶಿವಯೋಗಿ' ಯದೆಂದಾರೊ ॥ ೨೪ ॥

ಫಕೀರಯ್ಯನ ದಾರಿ ದುಷ್ಟರನೇಕರು ಕೂಡಿ
ಅನುಸರಿಸಿ ಫಲವ ಉಂಡಾರೊ ।
ಅನುಸರಿಸಿ ಫಲವ ಉಂಡಾರೊ ಫಕೀರಯ್ಯ
ನರಳುತ್ತ ಪ್ರಾಣ ಬಿಟ್ಟಾನೊ ॥ ೨೫ ॥

ಪಟ್ಟಕ್ಕೇರುವ ಕಷ್ಟ ಮಠದ ಆಸ್ತಿಯ ಕಷ್ಟ
ಕಷ್ಟದ ಮೇಲೆ ಕಷ್ಟ ಒಟ್ಟ್ಯಾವೊ ।
ಕಷ್ಟದ ಮೇಲೆ ಕಷ್ಟ ಒಟ್ಟ್ಯಾವೊ ಗುರುಶಾಂತ
ಅಷ್ಟಮದಗಳ ಮೆಟ್ಟಿ ನಿಂತಾರೊ ॥ ೨೬ ॥

ಸಾದಗಪ್ಪಿನ ಬಣ್ಣ ತೇಜಸ್ವಿ ಅವರಕಣ್ಣ
ದರುಶನ ಪಡಕೋರೊ ನಮ್ಮಣ್ಣ ।
ದರುಶನ ಪಡಕೋರೊ ನಮ್ಮಣ್ಣ ಲಿಂಗಣ್ಣ
ಗುರುಪಾದಕೆರಗೊ ಸಂಗಣ್ಣ ॥ ೨೭ ॥

ಬೆಳ್ಳನ್ನ ಜಡೆಯುಳ್ಳ ಬೆಳ್ಳಿಯ ಛಡಿಯುಳ್ಳ
ಬೆಳ್ಳಿ ಪಾದುಕ ಮೊದಲುಳ್ಳ ।
ಬೆಳ್ಳಿ ಪಾದುಕ ಮೊದಲುಳ್ಳ ಗುರುಶಾಂತ ಯೋಗಿ ।
ಬೆಳ್ಳಿಚಿಕ್ಕಿಯಂತೆ ಬೆಳಗ್ಯಾರೊ ॥ ೨೮ ॥

ಜಠಮಠ ಬಿಟ್ವಾರ ಗುರುಮಠ ಕಟಸ್ಯಾರ
ಪಂಡಿತಾರಾಧ್ಯರ ಗುಡಿಯ ಹುಟಸ್ಯಾರ ।
ಪಂಡಿತಾರಾಧ್ಯರ ಗುಡಿಯ ಹುಟಸ್ಯಾರ ಗುರುಶಾಂತ
ಯೋಗಮಂಟಪದೊಳಗೆ ನೆಲಿಸ್ಯಾರ ॥ ೨೯ ॥

ಶಿಕ್ಷಣ ಪ್ರೇಮಿ ಗುರು ಶಿಕ್ಷಣ ಪರಿಷತ್ ನಡೆಸಿ
ರೈತ ಪರಿಷತ್ತವರು ಕರೆದಾರೊ ।
ರೈತ ಪರಿಷತ್ತವರು ಕರೆದಾರಖಿಲ ಭಾರತ
ಗುರುಪರಿಷತ್ತವರು ನಡೆಸಿದರೊ । ॥ ೩೦ ॥

‘ ತೂಗಿರೆ ಯೋಗಿಯ ತೂಗಿರೆ ತ್ಯಾಗಿಯ ’
ಕವನಮಾಡಿ ಗುರುಶಾಂತ ಹಾಡಿದರು ।
ಕವನಮಾಡಿ ಗುರುಶಾಂತ ಹಾಡಿದರು ಶಿವಯೋಗಿಯ
ನಾಲಿಗೆಮ್ಯಾಲ್ಹಾಳೊ ಸರಸ್ವತಿಯು ॥ ೩೧ ॥

ಶಾಂತಲಿಂಗೇಶ್ವರ ಶಿಕ್ಷಣ ಪ್ರಸಾರಕ
ಸಂಘದ ಹೈಸ್ಕೂಲುಗಳು ನಡೆಸ್ಯಾರೊ ।
ಸಂಘದ ಹೈಸ್ಕೂಲುಗಳು ನಡೆಸ್ಯಾರೊ ಗುರುಶಾಂತ
ವಾಚನಾಲಯವೊಂದು ತೆರೆದಾರೊ ॥ ೩೨ ॥

ಪುರಾಣ ಪುಣ್ಯಗಳ ಕಥಿ ಭಜನ ಕೀರ್ತನ ನೀತಿ
ವರ್ಷಕೆಷ್ಟೋ ಸಲ ನಡೆಸುವರೊ ।
ವರ್ಷಕೆಷ್ಟೋ ಸಲ ನಡೆಸುವರೊ ಗುರುಶಾಂತ
ಧರ್ಮ ಪ್ರಸಾರ ಗೈಯುವರೊ ॥ ೩೩ ॥

ಶಾಂತಾರಾಶ್ರಮದಲ್ಲಿ ಹೂವಿನ ತೋಟದಲಿ
ಗುರುಶಾಂತ ಕಳೆಯ ತೆಗೆಯುವರೊ ।
ಗುರುಶಾಂತ ಕಳೆಯ ತೆಗೆಯುವರೊ ಶಿವಯೋಗಿ
ಕಾಯಕವೆ ಕೈಲಾಸೆಂದು ನುಡಿದಾರೊ ॥ ೩೪ ॥

ಹಿರೇಜೇವರ್ಗಿ ಶಾಂತಾಶ್ರಮ ಕಲಬುರ್ಗಿ ಶೈವಾಶ್ರಮ
ಧರ್ಮಾಶ್ರಮ ಯೋಗಿ ತೆರೆದಾರೊ ।
ಧರ್ಮಾಶ್ರಮ ಯೋಗಿ ತೆರೆದಾರೊ ಗುರುಶಾಂತ
ಧರ್ಮದ ಕ್ರಾಂತಿಯನು ನಡೆಸ್ಯಾರೊ ॥ ೩೫ ॥

ಹೃಷಿಕೇಶ ಕೈಲಾಸ ಗೋಕರ್ಣ ಲಕ್ಷ್ಮಣ ಝೂಲಾ
ಸ್ವರ್ಗಾಶ್ರಮ ಕಾಶೀ ರಾಮೇಶ್ವರ ।
ಸ್ವರ್ಗಾಶ್ರಮ ಕಾಶೀ ರಾಮೇಶ್ವರ ಗುರುಶಾಂತ
ಪಂಚಪೀಠದ ಯಾತ್ರೆ ಗೈದಾರೊ ॥ ೩೬ ॥

ಚಾಕೋತಿ ಬಂಧುಗಳು ಗುರುಶಾಂತಲಿಂಗನಿಗೆಂದು
ಯೋಗಮಂಟಪ ಒಂದು ಕಟ್ಟಿಸ್ಯಾರೊ ।
ಯೋಗಮಂಟಪ ಒಂದು ಕಟ್ಟಿಸ್ಯಾರೊ ನೀಲಮ್ಮದೇವಿ
ಕೊಳವ ಬಾವಿಯೊಂದು ಹುಟ್ಟಿಸ್ಯಾರೊ ॥ ೩೭ ॥

ಹಡಪದ ಹಣಮಂತ್ರಾಯಗ ಶನಿದೇವರ ಕಾಡಾಟ
ಕನಸಿನೊಳಗೆ ಗುರು ಕಂಡಾರೊ ।
ಕನಸಿನೊಳಗೆ ಗುರು ಕಂಡಾರೊ ಹಣಮಂತರಾಯ
‘ ಚಿಂತಿಬಿಡು ಇನ್ನ ’ ಅಂದಾರೊ ॥ ೩೮ ॥

ಜೇವರಗಿ ಶಿವರಾವ ಮಂಠಾಳ ಶಿವರುದ್ರ
ನೆಂಟಸ್ತನಕವರು ನಿಂತಾರೊ ।
ನೆಂಟಸ್ತನಕವರು ನಿಂತಾರೊ ಗುರುಶಾಂತರ
ಸನ್ನಿಧಿಗೆ ಅವರು ಬಂದಾರೊ ॥ ೩೯ ॥

ಗುರುಗಳಾಶೀರ್ವಾದ ಪಡದಾನ ಶಿವರುದ್ರಪ್ಪ
ನೆಂಟಸ್ತನವನು ಮಾಡಿದನೊ ।
ನೆಂಟಸ್ತನವನು ಮಾಡಿದನೊ ಗುರುಶಾಂತಗ
ಬೆಳ್ಳಿಪಾದುಕಗಳನು ತಂದಾನೊ ॥ ೪೦ ॥

ಮಾಸ್ತರ ಹಜರತಸಾಬ ಮಸ್ತಾಗಿ ಕಾಸಿದ ಅರಗ
ಬೆಳ್ಳಿ ಬೆತ್ತದ ಮ್ಯಾಲ ಸುರುವ್ಯಾನೊ ।
ಬೆಳ್ಳಿ ಬೆತ್ತದ ಮ್ಯಾಲ ಸುರುವ್ಯಾನೊ ಆ ಅರಗ
ಮಾಸ್ತರನ ಕೈಯ ಸುಟ್ಟಿತೊ ॥ ೪೧ ॥

ಸುಟ್ಟದ ಆ ಸ್ಥಳಕ ಬಾಲಶಿವಯೋಗಿ ನೋಡಿ
ಶಿರದ ಮ್ಯಾಲೊರದ್ಹಸ್ತ ಇಟ್ಟಾರೊ ।
ಶಿರದ ಮ್ಯಾಲೊರದ್ಹಸ್ತ ಇಟ್ಟಾರೊ ಮಾಸ್ತರನ
ಗಾಯವಾಯಿತು ಮಾಯ ಘಳಿಗ್ಯಾಗೊ ॥ ೪೨ ॥

ಗುರುದ್ವಾರಕ ಬಂದಾರೊ ಬಿರೆದಾರ ಬಂಧುಗಳು
ಚಂದ್ರಶೇಖರಗೆ ಬಿಕ್ಹತ್ತ್ಯೊ ।
ಚಂದ್ರಶೇಖರಗೆ ಬಿಕ್ಹತ್ತ್ಯೊ ಗುರುಶಾಂತ
ಕೃಪೆತೋರಿದರೊ ಆ ಘಳಿಗ್ಯಾಗೊ ॥ ೪೩ ॥

ಶ್ರೀಶೈಲ ದಾರ್‍ಯಾಗ ಬಿಸಲಿನ ವಾರ್‍ಯಾಗ
ಭಕ್ತಜನರೆಲ್ಲ ತಳಮಳಿಸಿ ।
ಭಕ್ತಜನರೆಲ್ಲ ತಳಮಳಿಸಿ ಗುರುಶಾಂತ
ಮಳೆರಾಯನ ಹಿಡಿದು ತಂದಾರೊ ॥ ೪೪ ॥

ಗುರುಧ್ಯಾನವ ಮಾಡಿ ಗುರುನಾಮವ ನುಡಿ
ಗುರುಮತಕ ನೀನಡಿ ಎಂದಾರೊ ।
ಗುರುಮತಕ ನೀನಡಿ ಎಂದಾರೊ ಗುರುಶಾಂತ
ಗುರುವಿನಿಂದಲೇ ಮುಕ್ತಿ ಎಂದಾರೊ ॥ ೪೫ ॥

ಕುಂತರೆ ಶಿವ ಅನ್ನು ನಿಂತರೆ ಶಿವ ಅನ್ನು
ಸಂತಿಪ್ಯಾಟ್ಯಾಗ ಶಿವ ಅನ್ನು ।
ಸಂತಿಪ್ಯಾಟ್ಯಾಗ ಶಿವ ಅನ್ನು ಗುರುಶಾಂತ
ಶಿವನಿಂದಲೇ ಸ್ವರ್ಗವೆಂದಾರೊ ॥ ೪೬ ॥

ಅನ್ನಪ್ಪನಿದ್ದರೆ ಇನ್ನಪ್ಪ ಬರತಾನ
ಅನ್ನಪ್ಪಗ ದಾನ ಮಾಡಬೇಕ್ರ್ಯೊ ।
ಅನ್ನಪ್ಪಗ ದಾನ ಮಾಡಬೇಕ್ರ್ಯೊ ಗುರುಶಾಂತ
ದಾಸೋಹದಿಂದಲೆ ಮುಕ್ತಿ ಎಂದಾರೊ ॥ ೪೭ ॥

ಸುಖ ದುಃಖಗಳು ಬರಲಿ ಕಷ್ಟವೆ ನಮಗಿರಲಿ
ದಿಟ್ಟಹೆಜ್ಜೆಯ ನೀವು ಇಡಬೇಕೊ ।
ದಿಟ್ಟಹೆಜ್ಜೆಯ ನೀವು ಇಡಬೇಕೊ ಗುರುಶಾಂತ
ಧೈರ್ಯದಿಂದಲೇ ಸಿದ್ಧಿ ಎಂದಾರೊ ॥ ೪೮ ॥

ಇಸ್ಪೆಟ ಜೂಜಿನ ಆಟ, ಗಾಂಜಿ ತಂಬಾಕ ಚಟ
ಜಾರಸ್ತ್ರೀಯರ ಒಡನಾಟೊ ।
ಜಾರಸ್ತ್ರೀಯರ ಒಡನಾಟೊ ಗುರುಶಾಂತ
ಬೆಂಕಿ ಕಿಡಿ ಎಂದು ನುಡಿದಾರೊ ॥ ೪೯ ॥

ಸತ್ಯವನ್ನೇ ನುಡಿಯೊ ನುಡಿದಂತೆ ನೀ ನಡೆಯೊ
ನೇಮ ನಿತ್ಯದಿ ನೀ ನಡೆಯೊ ।
ನೇಮ ನಿತ್ಯದಿ ನೀ ನಡೆಯೊ ಗುರುಶಾಂತ
ಧರ್ಮದಿಂದಲೇ ಮುಕ್ತಿ ಎಂದಾರೊ ॥ ೫೦ ॥

ಜಾತಿಮತಗಳ ದ್ವೇಶ ಧರ್ಮ ಮತಗಳ ಭಾಷ
ಬಡಿದಾಟದೊಳಗೇನಾದೊ ।
ಬಡಿದಾಟದೊಳಗೇನಾದೊ ಗುರುಶಾಂತ
ಗುರುಧ್ಯಾನದೊಳು ಮಾನಂದಾರೊ ॥ ೫೧ ॥

ನಾಹೆಚ್ಚು ನೀಹೆಚ್ಚು ವಾದ ಮಾಡುವದ್ಯಾಕ
ಕಾಯಕದೊಳಗೆ ಕೈಲಾಸ ।
ಕಾಯಕದೊಳಗೆ ಕೈಲಾಸ ಗುರುಶಾಂತ
ಕಾಯಕವೇ ಶಿವಪೂಜೆ ಎಂದಾರೊ ॥ ೫೨ ॥

ಎಲ್ಲ ದೇವಗ ಮೂಲ ಶಿವಲಿಂಗದೇವರು
ಶಿವನಿಗೆ ನೀನೆನೆಯೊ ಎಂದಾರೊ ।
ಶಿವನಿಗೆ ನೀ ನೆನೆಯೊ ಎಂದಾರೊ ಗುರುಶಾಂತ
ಶಿವನಿಂದಲೇ ಸ್ವರ್ಗವೆಂದಾರೊ ॥ ೫೩ ॥

ಹತ್ತು ಪುಸ್ತಕ ಓದಿ ಹುಚ್ಚುಹಿಡಿದಿತು ನೋಡಿ
ಉತ್ತಮ ಪುಸ್ತಕ ಒಂದೋದಬೇಕೋ ।
ಉತ್ತಮ ಪುಸ್ತಕ ಒಂದೋದಬೇಕೊ ಗುರುಶಾಂತ
ಅದರಂತೆ ನೀ ನಡೆ ಎಂದಾರೊ ॥ ೫೪ ॥

ದೇವರು ತಾಯಿ ತಂದೆ ಅತಿಥಿ ಗುರವೇ ಬಂಧು
ಧರ್ಮದಂತೆ ನೀವು ನಡಿಬೇಕೊ ।
ಧರ್ಮದಂತೆ ನೀವು ನಡಿಬೇಕೊ ಗುರುಶಾಂತ
ಕರ್ಮ ಒಂದು ಬಿಡಬೇಕಂದಾರೊ । ॥ ೫೫ ॥

ಗುರುಮಠ ಗುರುಪೀಠ ಗುಡಿಗುಂಡಾರ ದೇವರು
ಭಕ್ತರಿಗಾಗಿಯೇ ಇರುತಾವೊ ।
ಭಕ್ತರಿಗಾಗಿಯೇ ಇರುತಾವೊ ಗುರುಶಾಂತ
ಭಕ್ತರನ ಕರೆದು ತಿಳಿಸ್ಯಾರೊ ॥ ೫೬ ॥

ನಗುತಲಿ ಇರಬೇಕು ನಕ್ಕುನಗಿಸಲಿಬೇಕು
ನಗುತಲಿ ನೀವು ನುಡಿಬೇಕು ।
ನಗುತಲಿ ನೀವು ನುಡಿಬೇಕು ಗುರುಶಾಂತ
ನಗುವಿನಿಂದಲೆ ಸ್ವರ್ಗವೆಂದಾರೊ ॥ ೫೭ ॥

ಗುರುಶಾಂತ ಗುರುಗಳು ಶಾಂತಾಶ್ರಮದೊಳು
ಶಾಂತಚಿತ್ತರಾಗಿ ಇರುತಾರೊ ।
ಶಾಂತಚಿತ್ತರಾಗಿ ಇರುತಾರೊ ಗುರುಶಾಂತ
ಶಾಂತಿ ಮಂತ್ರವ ಅವರು ನುಡಿದಾರೊ ॥ ೫೮ ॥

ಗುರುಶಾಂತರಿರುವದು ಶಾಂತಲಿಂಗನ ಮಠ
ಹಿರೇಜೇವರಗಿಯಲ್ಲದು ಗುರುಮಠ ।
ಹಿರೇಜೇವರಗಿಯಲ್ಲದು ಗುರುಮಠ ಬೃಹನ್ಮಠ
ಶ್ರೀಶೈಲದೊಳಗಾದೊ ಗುರುಪೀಠ ॥ ೫೯ ॥

ಹಿರೇಜೇವರಗಿ ಬೃಹನ್ಮಠ ದುಧನಿ ಅಕ್ಕಲಕೋಟ
ಹಿರೇಮಣೂರ ಸಂಗೊಳಗಿ ರುದ್ದೆವಾಡ ।
ಹಿರೇಮಣೂರ ಸಂಗೊಳಗಿ ರುದ್ದೆವಾಡ ಬೋರೋಟ
ಬೃಹನ್ಮಠದ ಶಾಖಾ ಮಠಗಳೊ ॥ ೬೦ ॥

ಬಾಲಶಿವಯೋಗಿಯ ಲೀಲ ಕಂಡಿದನಮೃತಲೋಲ
ಗುರುಪಾದಕ ಶಿರವ ಇಟ್ಟಾನೊ ।
ಗುರುಪಾದಕ ಶಿರವ ಇಟ್ಟಾನೊ ಅಮೃತರಾಯ
ಗುರುಶಾಂತಗ ಮುಕ್ತಿ ಬೇಡ್ಯಾನೊ ॥ ೬೧ ॥

ಸಖೂತನಯಾಮೃತ
ಎ. ಟಿ. ಸುರವಸೆ, ಬಿ. ಎ.
ಸಹಶಿಕ್ಷಕ :
ಶ್ರೀ ಶಾಂತಲಿಂಗೇಶ್ವರ ಹೈಸ್ಕೂಲ ಹಿರೇಜೇವರಗಿ





ಪರಮ ಪೂಜ್ಯ ಗುರುಗಳವರ ಜನ್ಮಸ್ಥಾನ ಹಿರೇಮಠ ರುದ್ದೇವಾಡಿ. ( ತಾ. ಅಕ್ಕಲಕೋಟ. )



ಹಿರೇಜೇವರಗಿ ಮೂಲಮಠದಲ್ಲಿಯ ಶ್ರೀ ಶಾಂತಲಿಂಗೇಶ್ವರ ಕರ್ತೃಗದ್ದುಗೆಯ ಮುಂಭಾಗದಲ್ಲಿ ಪೂಜ್ಯ ಶ್ರೀಗಳವರು.

ಹಿರೇಜೇವರಗಿಯ ಮೂಲಮಠ ಬಲಭಾಗದಲ್ಲಿ ಜಗದ್ಗುರು ಪಂಡಿತಾರಾಧ್ಯ ದೇವಸ್ಥಾನದ ದೃಶ್ಯ.



ಬಸವನಸಂಗೋಳಗಿಯ ಹತ್ತಿರವಿದ್ದ ಕಾಳಿಕಾಭವಾನಿ
ಗುಡ್ಡದಲ್ಲಿ ಪೂಜ್ಯ ಗುರುಗಳು ಮಾಡಿದ
ಉಗ್ರ ಶಿವಾನುಷ್ಠಾನದ ದೃಶ್ಯ.



ಉಗ್ರವಾದ ಶಿವಾನುಷ್ಠಾನದಲ್ಲಿದ್ದ
ಪೂಜ್ಯ ಶ್ರೀಗಳು.



ಶ್ರೀಶೈಲ ಜ. ವಾಗೀಶ ಪಂಡಿತಾರಾಧ್ಯ
ಶಿವಾಚಾರ್ಯರ ವರದಹಸ್ತದಿಂದ
ಸ್ಥಾಪಿಸಲ್ಪಟ್ಟ
ಜ.ಪಂಡಿತಾರಾಧ್ಯಲಿಂಗೋದ್ಭವಮೂರ್ತಿ
ಹಿರೇಜೇವರಗಿ.

# ಹಿರೇಜೇವರಗಿಯ
# ಶ್ರೀಗಳವರ ಸಾಮಾಜಿಕ ಸಾಧನೆ ಹಾಗೂ ಸಂದೇಶಗಳು.



ಶಿವೇ ಗುರುವೆಂಬ ಅನುಭವೋಕ್ತಿಯಂತೆ ಅನಂತ ಪಾಪಕರ್ಮಗಳನ್ನು ಮಾಡುವ ನಮ್ಮಂಥ ಮಂದಮತಿಗಳನ್ನು ಉದ್ಧರಿಸಲು ಗುರುವು ಸದಾವ-ಕಾಲದಲ್ಲಿ ಸಮರ್ಥನಿರುತ್ತಾನೆ. ಆದರಂತೆ ಮೃಡನವ-ತಾರಿಯಾದ ಹಿರೇಜೇವರಗಿಯ ಶಾಂತಾಶ್ರಮದೊಡೆಯ ಸದ್ಗುರು ಬಾಲಶಿವಯೋಗಿ ಗುರುಶಾಂತಯೋಗಿವರ್ಯರೇ ಪ್ರತ್ಯಕ್ಷಸಾಕ್ಷಿ ಎಂದು ಆತ್ಮವಿಶ್ವಾಸದಿಂದ ಹೇಳಬಹುದು. ಹೇಳಬಹುದು ಎಂದರೆ ನನ್ನಂಥ ಮೂಢ ಜಡಮತಿಯು ಈ ಪ್ರಕಾರ ಹೇಳುವದೆಂದರೆ ದಡ್ಡತನವೇ ಸರಿ. ಹೇಳುವದೇನು ಬಂತು ? ಇವನೇ ಸೂರ್ಯನೆಂದು ಸೂರ್ಯನೆಡೆಗೆ ತೋರಿಸಿದಂತಾಗುತ್ತದೆ. ಅಷ್ಟು ಸತ್ಯ ವಾಗಿದೆ. ನನ್ನ ಪೂಜ್ಯ ಗುರುವಿನ ಹಿರಿಮೆ.

ಒಂದು ದಿನವೂ ಸಭೆ ಸಮಾರಂಭಗಳಲ್ಲಿ ಎದ್ದು ನಿಂತು ಭಾಷಣ ಮಾಡಿದವರಲ್ಲ. ಆವರೂ ಯಾವ ಸಭೆಯ ಉಚ್ಚಸ್ಥಾನವನ್ನು ಅಲಂಕರಿಸಿರುತ್ತಾರೆಯೋ ಆ ಸಭೆಯು ಸರ್ವಭಾಷಣಕಾರರಿಗೂ ಸ್ಫೂರ್ತಿದಾ-ಯಕ ಶಕ್ತಿಯಾಗಿ ಮಾತನಾಡಿಸಿದಂತಾಗುತ್ತದೆ. "ಎಲೆಯ ಮರೆಯ ಹಣ್ಣಿನಂತೆ" ಯಾವಾಗಲೂ "ಸರ್ವೇ ಜನಾಃ ಸುಖಿನೋ ಭವಂತಿ" ಎಂದು ಹಾರೈಸುತ್ತಿರುತ್ತಾರೆ. ಸಮಾಜದ ಪ್ರತಿಯೊಂದು ವ್ಯಕ್ತಿಯು ಮಾನವೀಯತೆಯ ಜೀವನ ಸಾಗಿಸಲಿ ಸದ್ಧರ್ಮ ಸದಾಚಾರಿಯಾಗಿರಲಿ ಸುಖವನ್ನು ಹೊಂದಲಿ ಎಂದು ಮನದಲ್ಲಿಯೇ ಸಮಾಜದ ವ್ಯಕ್ತಿಗಳ ಕಲ್ಯಾಣ ವನ್ನು ಬಯಸುತ್ತಾರೆ. ಓರ್ವ ವ್ಯಕ್ತಿಯು ಸಮಾಜದಲ್ಲಿ ಗ್ರಾಮದಲ್ಲಿ ತನ್ನ ಸಂಸಾರದಲ್ಲಿ ದಾರಿತಪ್ಪಿ ನಡೆಯು ತ್ತಿದ್ದರೆ ಯಾವದೇ ಒಂದು ಅಪ್ರತ್ಯಕ್ಷ ರೀತಿಯಲ್ಲಿ ಅವನಿಗರಿವಾಗುವಂತೆ ಮನಮುಟ್ಟುವಂತೆ ಏಕಾಂತದಲ್ಲಿ ಸರಿಯಾಗಿ ಬುದ್ಧಿಹೇಳಿ ಸತ್ಯಮಾರ್ಗಗಾಮಿಯನ್ನಾಗಿ ಮಾಡಿ ಎಷ್ಟೋ ಕುಟುಂಬಗಳ ಉದ್ಧಾರ ಮಾಡಿದ್ದಾರೆ. ಅವರು ತಮ್ಮ ಆಶ್ರಮ (ಮಠ) ದಲ್ಲಿಯೇ ಇದ್ದರೂ. ಯಾವ ವ್ಯಕ್ತಿಗಾದರೂ ಸಂಕಷ್ಟಗಳೊದಗಿದರೆ ಅವರ ಬಗ್ಗೆ ಕಳಕಳಿಯಿಂದ ಅವನನ್ನು ಸುವಿಚಾರದಲ್ಲಿ ತಂದು ಸಾಧ್ಯವಾದ ಮಟ್ಟಿಗೆ ಆವನನ್ನು ಸಂಕಷ್ಟರಹಿತನನ್ನಾಗಿ ಮಾಡಿದಂಥ ಅನಂತ ಮಹಿಮೆಗಳಿವೆ.

ಗುರುವರ್ಯರ ಊರು ಒಂದು ಸಣ್ಣಹಳ್ಳಿ. ಎರಡು ಎರಡುವರೆ ಸಾವಿರ ಜನಸಂಖ್ಯೆಯುಳ್ಳ ಚಿಕ್ಕ ಗ್ರಾಮ. ಅವರ ಪಾದಸ್ಪರ್ಶದಿಂದ ಅನಂತ ಪಾವನವಾಗಿದೆ, ಸುಕ್ಷೇತ್ರವೆನಿಸಿದೆ. ಈ ಗ್ರಾಮದಲ್ಲಿ ಜನಿಸಿ ದಿನನಿತ್ಯ ಯೋಗಿವರ್ಯರ ದಿವ್ಯದರ್ಶನ ಪಡೆಯುತ್ತಿರುವ ಗ್ರಾಮ ನಿವಾಸಿಗಳ ಪುಣ್ಯದ ಮುಂದೆ ಇನ್ನಾವ ಪುಣ್ಯವಿದೆ ? ತನ್ನಲ್ಲಿಯ ಮಕ್ಕಳು ಜ್ಞಾನಿಗಳಾಗಲಿ, ಅಕ್ಷರಸ್ಥರಾಗಲಿ ಜ್ಞಾನದಿಂದಲೇ ಸುಖ, ಶಾಂತಿ, ತೃಪ್ತಿ. "ಅಜ್ಞಾನಿಯ ಬಾಳು ನಾಯಿಗೂ ಕೀಳು" ಎಂದು ತಿಳಿಸಿ, ಬರೀ ನಾಲ್ಕನೆಯ ತರಗತಿಯವರೆಗೆ ಇದ್ದ ಶಾಲೆಯನ್ನು ಏಳನೆಯ ತರಗತಿಯವರೆಗೆ ಬೆಳೆಯಿಸಿದರು. ಆ ಸುಸಮಯದಲ್ಲಿ ಫಲಪ್ರಾಪ್ತಿಯಿಲ್ಲದೆ ಸೇವೆ ಸಲ್ಲಿಸಿದ ಕೆಲವು ವಿದ್ಯಾವಂತರ ಜೀವನವೇ ಧನ್ಯ.

ಅಷ್ಟಕ್ಕೂ ತೃಪ್ತರಾಗದೆ ಏಳನೆಯ ತರಗತಿಯ ನಂತರ ಪ್ರೌಢಶಿಕ್ಷಣಕ್ಕಾಗಿ ಅಫಜಲಪೂರಕ್ಕೋ ಕಲಬುರ್ಗಿಗೋ ಹೋಗಬೇಕಾಗುತ್ತಿತ್ತು. ಅದು ಅನುಕೂಲಸ್ಥರಿಗೆ ಮಾತ್ರ ಸಾಧ್ಯ. ಬಡಮಕ್ಕಳು

ಶಿಕ್ಷಣವನ್ನು ಅಲ್ಲಿಗೇ ನಿಲ್ಲಿಸಬೇಕಾಗುತ್ತದೆಂದು ಹಗಲಿರುಳೂ ಹೈಸ್ಕೂಲ ಸಲುವಾಗಿ ಪ್ರಯತ್ನಿಸುತ್ತಲೇ ಇದ್ದರು. ಅದೇ ವೇಳೆಯಲ್ಲಿ ನಮ್ಮ ರಾಜ್ಯದ ಶಿಕ್ಷಣ ಮಂತ್ರಿಗಳಾಗಿದ್ದ ಶ್ರೀ ಅಣ್ಣಾರಾವ್ ಗಣಮುಖಿ ಯವರು ಗುರುವರ್ಯರ ಇಚ್ಛೆಯನ್ನು ಪೂರ್ತಿಮಾಡಿ ಪುನೀತರಾದರು. ಆ ಸಮಯದಲ್ಲಿ ಇಲ್ಲಿಯ ಗ್ರಾಮ ನಿವಾಸಿಗಳ ಪ್ರಯತ್ನ ಸಹಾಯ ಶ್ಲಾಘನೀಯ. ಈ ಮಠದ ಮೂಲ ಪುರುಷರ ಹೆಸರಿನಿಂದ ಅಂದರೆ ಶ್ರೀ ಶಾಂತಲಿಂಗೇಶ್ವರ ಹೈಸ್ಕೂಲು ನಡೆಯುತ್ತಲಿದೆ.

ಗುರುವರ್ಯರು ಯಾವುದೇ ಒಳ್ಳೆಯ ಕಾರ್ಯ ದಲ್ಲಿ ಮನಸ್ಸು ಮಾಡಿದರೆ ಅದನ್ನು ಪೂರ್ತಿಗೊಳಿಸುವ ವರೆಗೆ ಸಮಾಧಾನವೇ ಇರುವದಿಲ್ಲ.

ಈ ಭಾಗದಲ್ಲಿ ಭೀಕರ ಬರಗಾಲ ಬಿದ್ದಾಗ ಹುಬ್ಬಳ್ಳಿಯ ಮೂರುಸಾವಿರ ಮಠದವರ ಸಹಾಯ ದಿಂದ ನಡೆಯುತ್ತಿದ್ದ ಗಂಜೀಕೇಂದ್ರವು ಮತ್ತೆಲ್ಲಿ-ಯಾದರೂ ಆದರೆ ಬಡವರಿಗೆ ಸರಿಯಾಗಿ ಮುಟ್ಟು ವದೋ ಇಲ್ಲವೋ ಎಂದು ಸ್ವತಃ ಸಮ್ಮುಖದಲ್ಲಿ ನಿಂತು ಮಕ್ಕಳು ತೃಪ್ತರಾಗುವಂತೆ ಉಣಿಸುತ್ತಿದ್ದರು. ಗುರುಗಳ ಆಶೀರ್ವಾದ ಫಲದಿಂದ ೭ ನೇ ತರಗತಿಯ ಪರೀಕ್ಷಾಕೇಂದ್ರವಾಯಿತು. ಅರ್ಜುಣಗಿ, ಬಡದಾಳ, ರೇವೂರ, ಬಳೂರಗಿಯಿಂದ ಮಕ್ಕಳು ಬರುವರು. ೩-೪ ದಿವಸ ಇರಬೇಕಾಗುತ್ತದೆ. ಬುತ್ತಿಯ ಊಟ ಮಕ್ಕಳಿಗೆ ತ್ರಾಸಾಗುತ್ತದೆಂದು ಊರಲ್ಲಿಯ ಕೆಲವು ಶ್ರೀಮಂತರೂ ಶ್ರೀಗಳೂ ಕೂಡಿ ಅವರಿಗೆ ಎರಡು ವೇಳೆಯೂ ಬಿಸಿ ಅಡುಗೆಯ ವ್ಯವಸ್ಥೆ ಮಾಡಿಸಿದರು. ಅದು ಈಗಲೂ ನಡೆದುಕೊಂಡು ಬಂದಿದೆ. ಹಾಗೂ ದುಧನಿಯಲ್ಲಿ ಶ್ರೀ ಸಿದ್ಧೇಶ್ವರ ಹೈಸ್ಕೂಲನ್ನು ೧೯೬೦ ನೇ ಇಸ್ವಿಯಿಂದ ನಡೆಯಿಸಿಕೊಂಡು ಬಂದಿದ್ದಾರೆ. ಆ ಸಂಸ್ಥೆಯ ಮುಖ್ಯ ಗುರೂಜಿಯೆಂದು ಶ್ರೀ ಹನುಮಂತ ರಾವ ದೇಸಾಯಿಯವರು ಒಂದು ವರ್ಷ ಪುಕ್ಕಟೆ ಯಾಗಿ ಸೇವೆ ಸಲ್ಲಿಸಿದರು.

ಈ ಮಹಾನುಭಾವರ ಭಕ್ತಿಪರಂಪರೆಯನ್ನು ನಾನು ಈ ನನ್ನ ಅಲ್ಪಬುದ್ಧಿಯಿಂದ ವರ್ಣಿಸಲು ಅಸಮರ್ಥ. ಈಗಿನ ಆಧುನಿಕ ಯುಗದಲ್ಲಿ ಉದ್ದೂ ವಕೀಲಿ ವೃತ್ತಿಯಲ್ಲಿ ಇಷ್ಟು ಘನವಾದ ಭಾವಿಕ ರಾಗಿರುವದೆಂದರೆ ಪ್ರತಿಯೋರ್ವನಿಗೂ ಸೋಜಿಗ-ವೆನಿಸಬಹುದು. ಇಂಥ ಸಂದರ್ಭದಲ್ಲಿ ಈ ಪುಣ್ಯ ಜೀವಿಗಳ ಬಗ್ಗೆ ನಾಲ್ಕು ಸಾಲು ಬರೆಯಲು ಮನಸ್ಸು ಹಾತೊರೆಯುತ್ತಿದೆ. ಇವರು ಗುಡ್ಡದ ಮಹಂತನ ಪರಮ ಭಕ್ತರು. ಪ್ರತಿ ಅಮಾವಾಸ್ಯೆಗೆ ಚಿಣಮಗೇರಿ ಗುಡ್ಡದ ಮಹಂತನ ದರ್ಶನಕ್ಕೆ ತಪ್ಪದೆ ಹೋಗುವರು. ಕಲಬುರ್ಗಿಯಲ್ಲಿ ಯಾವುದೇ ಧಾರ್ಮಿಕ, ಸಾಮಾಜಿಕ ತಾತ್ವಿಕ ಸಭೆ ಸಮಾರಂಭಗಳಲ್ಲಿ ಇವರಿದ್ದರೇನೇ ಶೋಭೆ. ಈ ಗುರುವರ್ಯರ ಷಷ್ಠ್ಯಾಬ್ದಿಯ ಕಾರ್ಯ ಕ್ರಮದಲ್ಲಿ ತನು ಮನ ಧನಗಳಿಂದ ಸೇವೆ ಸಲ್ಲಿಸುತ್ತ ಲಿದ್ದಾರೆ. ಗುರುಗಳು ಏನೇ ಆಜ್ಞಾಪಿಸಲಿ ಅದನ್ನು ಮಾಡಿಯೇ ತೀರಬೇಕೆಂಬ ಹಟ. ಗುರು ಆಶೀರ್ವಾದ ಬಲದಿಂದ ಯಾವ ಕಾರ್ಯವೂ ಅಯಶಸ್ವಿಯಾಗಿಲ್ಲ. ಈ ಗುರುಶಿಷ್ಯರ ಸಂಬಂಧ ಹೇಳುವದರಿಂದ ತಿಳಿಯುವ ವಿಷಯವಲ್ಲ. ಅದನ್ನು ಕಂಡುಕೊಂಡೇ ಆನಂದಿಸ-ಬೇಕು. ಅಷ್ಟು ಅನನ್ಯಭಕ್ತಿ ಗುರುವಿನಲ್ಲಿ, ಅಷ್ಟೇ ಅಪಾರ ಪ್ರೇಮ ಶಿಷ್ಯನ ಮೇಲೆ.

ಇಂತಹ ಧರ್ಮಮೂರ್ತಿ ಸದ್ಗುರು ಪ್ರತಿಯೊಬ್ಬ ನೊಂದಜೀವಿಯ ಕಷ್ಟಗಳನ್ನು ಪರಿಹರಿಸುತ್ತ ಉದ್ಧರಿಸುತ್ತಲಿದ್ದಾರೆ. ಗುರುವಿನ ದರ್ಶನಲಾಭ ಪಡೆ ಯಲು ದೊಡ್ಡ ಅಮಲ್ದಾರರೂ ಸಣ್ಣ ನೌಕರದಾರರು ಒಕ್ಕಲಿಗರು, ಬಡವರು, ಬಲ್ಲಿದರು ಎಲ್ಲ ತರಗತಿಯ ಜನರು ಆಗಮಿಸುತ್ತಾರೆ. ಯಾವನೇ ಬರಲಿ ಎಲ್ಲ-ರನ್ನೂ ಸಮ್ಯಕ್‌ದೃಷ್ಟಿಯಿಂದ ಕಂಡು ಕುಶಲೋಪರಿ

ಗಳನ್ನು ಕೇಳಿ ಮನಾನಂದಗೊಳಿಸಿ ಕಳಿಸುತ್ತಾರೆ. ನಾವು ಯಾವದೇ ಕಾರ್ಯವನ್ನು ಮಾಡಲಿ ಅದರಲ್ಲಿ ಸಂಪೂರ್ಣ ಶ್ರದ್ಧೆಯಿಟ್ಟು ಮನಮುಟ್ಟಿ ದುಡಿದರೆ ಆ ದೇವನು ನಮ್ಮನ್ನೆಲ್ಲ ಅನಂತ ಸುಖ ಸಮೃದ್ಧಿಗಳನ್ನು ಕೊಟ್ಟು ಸಲಹುತ್ತಾನೆ ಎನ್ನುವದರಲ್ಲಿ ಸಂದೇಹವಿಲ್ಲ.

ಜೂಜು ಆಡಬೇಡಿರಿ. ಸಂಸಾರದಲ್ಲಿ ಅವನತಿಯ ಮಾರ್ಗದೆಡೆಗೆ ಒಯ್ಯುವ ವೈವೀಶಕ್ತಿಯಿಂದ ದೂರ ಮಾಡಿ ದಾನವೀಪಾಶದ ಕಡೆಗೆ ಎಳೆದೊಯ್ಯುವಂಥ ಸೆರೆ, ಸಿಂದಿ, ಈ ಚಟಗಳಿಂದ ದೂರವಿದ್ದು ಪರಸ್ತ್ರೀ, ಪರಧನ ನನಗೆ ವಿಷಸಮಾನ ಎಂದು ತಿಳಿದು ನಡೆಯಿರಿ. ದೇವರು ಎಲ್ಲರಲ್ಲಿಯೂ ಇದ್ದಾನೆ. ಈ ಮಾನವನು ದೇವಾಂಶ ಸಂಭೂತನಿರುತ್ತಾನೆ. ಅದನ್ನು ನಿಚ್ಚಳಿಸದೆ ಕುಕರ್ಮಿಯಾಗಿ ಆತ್ಮನ ಮೇಲೆ ಧೂಳಡರುವಂತೆ ಮಾಡದೆ ತನ್ನ ಕಾಯಕದಲ್ಲಿ ನಿರತನಾಗಿ ಅಸತ್ಯ, ಅತ್ಯಾಚಾರ, ಹಿಂಸೆಗಳನ್ನು ಬಯಸಿಯೇ ತೀರುವೆನೆಂಬ ದೃಢವಿಶ್ವಾಸದಿಂದ ಮುನ್ನಡೆ ಇಟ್ಟರೆ ಇಹದಲ್ಲಿಯೂ ಪರದಲ್ಲಿಯೂ ಶಾಶ್ವತವಾದ ಸುಖವನ್ನು ಗಳಿಸಬಹುದು.

ಬಿಸಿಲ್ಗುದುರೆಗೆ ಬೆನ್ನಟ್ಟಿದ ಮರೀಚದಂತೆ ಕಲಿಯುಗದ ಮಾನವನು ಅನುಕರಣೆಗೆ ಮೆಚ್ಚಿ ಮೂಲವನ್ನು ಮರೆತು ಸಿಕ್ಕೆಡೆಗೆ ಕಾಲ್ಕಿತ್ತಹತ್ತಿದ್ದಾನೆ. ಹುಡುಕಿದೊಡೆ ಅಲ್ಲಿ ಸಿಗುವದು ಜಲವಲ್ಲ. ತೃಷೆ ಅಡ-ಗಿಸಿಕೊಂಡು ಸಂತುಷ್ಟನಾಗುವದರ ಬದಲು ಓಡೋಡಿ ಮೃತ್ಯುವನ್ನಪ್ಪಿದಂತಾಗುವದು.

ಪರಮ ಪವಿತ್ರವಾದ ವೀರಶೈವ ಸದ್ಧರ್ಮದಲ್ಲಿ ಹುಟ್ಟಿ ನೊಸಲಿಗೆ ತ್ರಿಪುಂಡ ಭಸ್ಮ ಹಚ್ಚಲು ನಾಚುತ್ತಾ-ರೆಂದರೆ ಹಾಸ್ಯಾಸ್ಪದ. ಆಧುನಿಕ ವೇಷ ಭೂಷಣಗ-ಳಿಂದ ಭೂಷಿತರಾದಾಗ ಆ ಭಸ್ಮ ನಿಮ್ಮ ಅಂದಕ್ಕೆ ಕುಂದು ತರದೆ ಮತ್ತಷ್ಟು ಮೆರಗು ಕೊಡುತ್ತದೆ. ಧರ್ಮವನ್ನು ಮರೆತಿದ್ದಾರೆ. ಆಚಾರದಿಂದ ದೂರ ಸರಿಯುತ್ತಲಿದ್ದಾರೆ. ಸುವಿಚಾರಗಳ ಸುಳಿವೇ ಇಲ್ಲ. ಜ್ಞಾನಿಗಳೂ, ವಿದ್ಯಾವಂತರೂ, ಸದ್ಧರ್ಮಸಂಭೂತರೂ ಆದಂಥ ನಾವು ಸ್ವಲ್ಪ ನಮ್ಮ ಪೂರ್ವೀ ಧಾರ್ಮಿಕ ವಿಚಾರಗಳತ್ತ ದೃಷ್ಟಿಹರಿಯಿಸಿದರೆ ತಾನೇ ಅರ್ಥ-ವಾಗುವದು. ಸತ್ಯವಾವುದು ಮಿಥ್ಯೆಯಾವುದೆಂದು. ಈ ಪ್ರಕಾರ ಜಡಮಾನವರಿಗೆ ಉಪದೇಶಿಸುತ್ತಲೇ ಇರುತ್ತಾರೆ.

ಕ್ಷಣಿಕವಾದ ಸುಖಕ್ಕೆ ಆಶೆಮಾಡಿ ಶಾಶ್ವತ ಸುಖದಿಂದ ದೂರನಾಗಬೇಡ. ಗಳಿಸು ಬೇಕಾದಷ್ಟು ಗಳಿಸು. ಗಳಿಕೆಯ ಮಾರ್ಗವು ಸಾತ್ವಿಕವಾಗಿರಲಿ. ಹಿಂದಿನ ಧನಶೆಟ್ಟಿ, ವಾರದ ಮಲ್ಲಪ್ಪನವರೇನು ಸಾಮಾನ್ಯ ಶ್ರೀಮಂತರೆ ? ಅವರು ತುಳಿದ ದಾರಿ ಎಂತಹದು ? ದೇಹಿ ಎಂದು ಯಾವನೇ ಹೋದರೂ ಬರಿಗೈಯಿಂದ ತಿರುಗಿ ಬಂದ ಉದಾಹರಣೆಯೇ ಇಲ್ಲ.

ಸಂಪಾದಿಸಿದ್ದರಲ್ಲಿ ಸ್ವಲ್ಪಾದರೂ ನಿರಾಶ್ರಿತರಿಗೆ, ಅನಾನುಕೂಲಿಗಳಿಗೆ, ದೀನ ದಲಿತರಿಗೆ ವ್ಯಯಮಾಡು. ಅದೇ ನಿನಗೆ ಎಂದೆಂದಿಗೂ ಶಾಶ್ವತವಾಗಿ ಉಳಿಯು-ವಂಥ ನಿಧಿ. ಅತೀ ಬೇಡ, ಸ್ವಲ್ಪ ವಿಚಾರಿಸಿ ನೋಡು, ಸಾಕಷ್ಟು ಧನಕನಕಗಳನ್ನು ಸಂಪಾದಿಸಿದವರು ಈ ಭೂಮಿಯಲ್ಲಿ ಶಾಶ್ವತವಾಗಿದ್ದಾರೆಯೇ ? ಇಲ್ಲ. ಉಳಿಯುವದೊಂದೇ ಕೀರ್ತಿ. ಕೊಡುಗೈದೊರೆಯಾಗಿ ಒಳ್ಳೆಯ ಬಾಳು ಬಾಳಿದವನ ಹೆಸರು ಅಂದಿಗೂ, ಇಂದಿಗೂ, ಎಂದೆಂದಿಗೂ ಅಜರಾಮರವಾಗಿರುತ್ತದೆ. ಜ್ಞಾನಿಯ ಕೆಲಸ ಪುಣ್ಯ ಮಾಡುವದು. ಅಜ್ಞಾನಿಯ ಕೆಲಸ ಪಾಪಸಂಚಯನ ಮಾಡುವದು.

ಅಷ್ಟು ಗಳಿಸಿಟ್ಟ ಧನಕನಕಗಳನ್ನೇನಾದರೂ ಅವನ ಮಕ್ಕಳು ಮೊಮ್ಮಕ್ಕಳು ತಾ ಸತ್ತಾಗ ಸಮಾಧಿ ಯಲ್ಲಿ ಇಟ್ಟು ಕಳಿಸಿದ್ದಾರೆಯೇ ? ಕಿವಿಯಲ್ಲಿ ಅಲ್ಪ ಬಂಗಾರವಿದ್ದರೆ. ತೆಗೆಯಲು ಅಸಾಧ್ಯವಾದಾಗ ಹರಿದು

ತಗೆದುಕೊಂಡ ಎಷ್ಟೋ ಉದಾಹರಣೆಗಳುಂಟು. ಇದೆಯೇ ನೀನು ಗಳಿಸಿದ್ದಕ್ಕೆ ಅವರುಗಳ ಕೆಟ್ಟಫಲ. ಅರಿತು ಮುನ್ನಡಿ ಇಡು. ಪೂರ್ತಿಆಯುಷ್ಯ ಸಂಪಾ-ದಿಸುವದರಲ್ಲಿಯೇ ಕಳೆಯದೆ ಹೆಂಡರು ಮಕ್ಕಳಿಗಾಗಿ ಲಕ್ಷಾನುಗಟ್ಟಲೇ ಸಂಪಾದಿಸಿಟ್ಟಿರುವಿ.

ಮುಪ್ಪಡರಿ ಹಲ್ಲುಬಿದ್ದು, ಬೆನ್ನುಬಾಗಿ, ಕಣ್ಣು ಕಾಣಿಸದಾದಾಗ ಒಬ್ಬರಿಗೆ ಭಾರವಾದಾಗ ಅದೇ ನಿನ್ನ ಸಂಪಾದನೆಯಲ್ಲಿ ಐಷಾರಾಮು ಜೀವನದಲ್ಲಿ ತೇಲಾಡುವ ಮಕ್ಕಳು ಮೊಮ್ಮಕ್ಕಳು ಬೇಸರಿಸಿಕೊಳ್ಳುತ್ತಾರೆ. ಅತೀ ಕಿರಿಕಿರಿ ಹೆಚ್ಚಿದರೆ "ಸಾಯಬಾರದೆ ಮುದಿಗೂಬೆ ಇನ್ನೂ ಹಾಗೇ ಬಿದ್ದಿದೆ" ಎಂದು ಅಂದ ಉದಾಹರಣೆ-ಗಳೆಷ್ಟಿಲ್ಲ, ಸಾಕಷ್ಟಿವೆ.

ಕೈ ಕಾಲುಗಳು ಗಟ್ಟಿ ಇದ್ದಾಗ ಬೆನ್ನು ಬಾಗದ ಮುನ್ನ, ಶಕ್ತಿಇದ್ದಾಗ ಆಯುಷ್ಯದ ಮೊದಲು ಭಾಗದಲ್ಲಿಯೇ ಅರಿವಿನ ಮಾನವನಾಗಿ ಸದ್ಗುರುಗಳ ಮಹಾ ಮಹಿಮಾಪುರುಷರ, ಪುಣ್ಯಕ್ಷೇತ್ರಗಳಾದ ಪಂಚಪೀಠಗಳ, ಬಾರಾ ಜ್ಯೋತಿರ್ಲಿಂಗಗಳ ದರ್ಶನ ಲಾಭ ಪಡೆದು ಅನಾಥರ ದೀನ ದಲಿತರ ಸೇವೆಗೈದು ಇಂತಹ ಪುಣ್ಯಕಾರ್ಯಗಳಿಗೆ ಸಂಪಾದಿಸಿದ ಹಣವನ್ನು ಸ್ವಲ್ಪ ಭಾಗವಾದರೂ ವ್ಯಯಿಸಿ ಜನ್ಮಸಾರ್ಥಕಪಡಿಸು.

ಇದಲ್ಲದೆ ಗುರುವರ್ಯರಿಗೆ ಹಲವು ವಿಚಿತ್ರ ಪ್ರಶ್ನೆ ಗಳನ್ನು ಕೇಳಿದ್ದುಂಟು — ನಾನು ಬೇಕಾದಷ್ಟು ನ್ಯಾಯ ಮಾರ್ಗದಿಂದಲೇ ನಡೆಯುತ್ತೇನೆ. ಅನ್ಯಾಯ ಮಾಡಲು ಮನಸ್ಸು ಹಿಂಜರಿಯುತ್ತದೆ. ಅನಾಥರ ಕೂಗು ಕೇಳಿ ಸುಮ್ಮನಿರುವದಾಗುವದಿಲ್ಲ. ಪರಸ್ತ್ರೀಯರ ಪರಧನ, ಪರಆಸ್ತಿಗೆ ಕನಸಿನಲ್ಲಿಯೂ ಆಶಿಸಿಲ್ಲ. ಸದ್ಗುರುಗಳ ಪಾದಾರವಿಂದದಲ್ಲಿಯೇ ಸದಾ ಮನಸ್ಸು ಇರಲು ಹಾತೊರೆಯುತ್ತಿದ್ದರೂ ನಮಗೆ ಈ ಭವದಲ್ಲಿ ಇಷ್ಟು ಸಂಕಟಗಳೇಕೆ ಗುರುದೇವ ?

ಒಂದಕ್ಕೆ ಎರಡರಂತೆ ಗಳಿಸಿ ಬಡವರ ಅಸ್ಥಿ-ಪಂಜರದ ಮೇಲೆ ನಾಲ್ಕಂತಸ್ತಿನ ಮನೆಕಟ್ಟಿಸಿ, ಜಾರತನದಲ್ಲಿಯೇ ಆಯುಷ್ಯ ವ್ಯಯಿಸಿ, ಆಜನ್ಮ ಪರ್ಯಂತ ಗುರುಪುಂಗವರ ದರ್ಶನಲಾಭ ಪಡೆಯದ ಶರೀರವು ಸುಖದ ಸುಪ್ಪತ್ತಿಗೆಯಲ್ಲಿಯೇ ಐಷಾರಾಮು-ವಾಗಿರುವನಲ್ಲ, ಅವನ ಜನ್ಮಕ್ಕೆ ಪಾಪದ ಲೆಕ್ಕವಿಲ್ಲವೆ? ಇದಕ್ಕೇನನ್ನಬೇಕು ಗುರುದೇವ ?

ಈ ಪ್ರಶ್ನೆಗಳಿಗೆ ಮುಗುಳುನಗೆಯಿಂದಲೇ ಮನ ಸ್ಸಿನ ಗೊಂದಲವನ್ನು ತೊಳೆದು, ತಿಳಿದು ತಲೆದೂಗು ವಂಥ ಉತ್ತರ ಅವರದು. ಹಿಂದಿನ ಜನ್ಮದ ಪುಣ್ಯ ಪ್ರಭಾವದಿಂದ ಇಹದಲ್ಲಿ ಅಷ್ಟುಸುಖ ಅನುಭವಿಸು-ತ್ತಾನೆ. ಈ ಜನ್ಮದಲ್ಲಿ ಅರಿವಿಲ್ಲದೆಯೇ ಮರೆವಿನಲ್ಲಿ ಪಾಪದ ಹೊರೆಯನ್ನು ಸಂಗ್ರಹಿಸಿಕೊಂಡು ಬಹು ಜನ್ಮ ಉಣ್ಣುವನು, ಇದಕೆ ಸಂಶಯವಿಲ್ಲ.

ನಿನಗೆ ಇಷ್ಟು ಸಂಕಟಗಳಿದ್ದರೂ ಅದನ್ನು ಶಾಂತಚಿತ್ತದಿಂದ ಸ್ವೀಕರಿಸಿ ಪುಣ್ಯಮಾರ್ಗಗಾಮಿ-ಯಾಗಿ ಮುಂದೆ ಬಹುಜನ್ಮ ಸುಖದ ಸಾಮ್ರಾಜ್ಯ-ದಲ್ಲಿ ಜೀವನ ಕಳೆಯುವಿ ಎಂದು ಆತ್ಮವಿಶ್ವಾಸದಿಂದ ಹೇಳಬಹುದು.

ಮಾತೃದೇವೋ ಭವ, ಪಿತೃದೇವೋ ಭವ, ಗುರುದೇವೋ ಭವ ಎಂದು ಅರಿತು ನಡೆದು ಉಚ್ಚ ವಾದ ವೀರಶೈವ ಸದ್ಧರ್ಮಮೂರ್ತಿಯಾಗಿ ಇಹದಲ್ಲಿ ಅನಂತ ಕಷ್ಟಕಾರ್ಪಣ್ಯಗಳು ಬಂದರೂ ತೃಣಸಮಾನ ವೆಂದು ತಿಳಿದು ಗುರುವಿನ ಅರುಹಿನ ವಾಣಿಯಂತೆ ಮುನ್ನಡೆಯೋಣ.

ಆ ಪರಮಪೂಜ್ಯ ಗುರುದೇವನ ಪರುಷವಾಣಿ-ಯನ್ನು ಕೇಳಲು ಆ ಅನಂತ ಲೀಲಾಮೂರ್ತಿಯಾದ ಪರಶಿವನು ನಾವು ಇನ್ನೊಂದು ಷಷ್ಟ್ಯಾಬ್ಧಿಯನ್ನು ಆಚರಿಸುವಂತೆ ಆಯುಷ್ಯ ಕರುಣಿಸಲೆಂದು ಹಾರೈಸಿ ನನ್ನ ಲೇಖನಿಗೆ ವಿರಾಮಕೊಡುತ್ತೇನೆ.

— ಸಿದ್ಧರಾಮಯ್ಯ ಸ್ವಾಮಿ
ಪ್ರಾಥಮಿಕ ಶಾಲಾ ಶಿಕ್ಷಕರು, ಚಿಕ್ಕಜೇವರಗಿ.



# ಸ್ತುತಿಮಾಲೆ.

ಹಿರಿಯ ಜೇವರಗಿಯ ಪೀಠಕ್ಕೆ ಬಂದಾ।
ಗುರುಶಾಂತ ದೇಶಿಕನು ಮಹಾದೇವ ತಂದಾ।
ಗುರುಪೀಠವಿದು ಬಹು ಮಹತ್ವದ್ದೆಂದಾ।
ನರನಾರಿಯೆಂದರೆ ಬಗೆದು ಬಾಗಿ ನಡಿರೆಂದಾ।
ಉರುತರ ತತ್ವದ ಮಹತ್ ತಾಣವಿದೆಂದಾ।
ಪರತರ ಪಂಡಿತಾರಾಧ್ಯರ ಶಾಖೆಯಿದೆಂದಾ ॥೧॥

ಗುರು ಪೀಠ ಧೀಶನಾದ ಗುರುಶಾಂತ ಶಿವಾಚಾರ್ಯ।
ವರ ವೀರಶೈವಕ್ಕೆ ನೀನಾದಿ ಪ್ರಾಚಾರ್ಯ।
ಕುರುವಿಡಿದು ನಡಿರೆಂದು ಒಡಿದೆಬ್ಬಿಸಿದ ಮಹಾಚಾರ್ಯ।
ಪರಮ ಪಾವನಮೂರ್ತಿಯ ದಿವ್ಯಕಾರ್ಯ।
ಹಿರಿಯ ಜೇವರಗಿಗಲ್ಲದೆ ಎಲ್ಲಿಡೆಯಲ್ಲಿಯು ಆಯಿತನಿವಾರ್ಯ।
ಧೀರ ನಿಮ್ಮಯ ಪುಣ್ಯಕೆ ಒಲಿದನಾ ಗುರುವರ್ಯ। ॥೨॥

ನೀ ಬರುವ ಕಾಲಕೆ ಪೀಠ ನಿನ್ನಂಥವರ ಬಯಸಿತ್ತು।
ನಿಖಿಲ ಸದ್ಭಕ್ತ ಜನ ಸದಾಶಿವನಲ್ಲಿ ನಿನ್ನಂಬೇಡಿತ್ತು।
ನೀಲಕಂಠನಾಸನುಯಕ್ಕೆ ಭಕ್ತರ ಮೊರೆ ಕೇಳಬೇಕಾಯ್ತು।
ನಿನ್ನಂಥ ವ್ಯಕ್ತಿ ಆಗಲ್ಲಿ ಇರಲೇಬೇಕಾಯಿತು।
ನೀನಲ್ಲದೆ ಆ ಪೀಠಕ್ಕೆ ಬೇರೆಯವರಾದರೇನಿತ್ತು।
ನೀನಿಟ್ಟ ನಿಲುವು ನಿಂತು ಪೀಠದ ಭಕ್ತಜನ ಕೇಳಿತ್ತು ॥೩॥

ನಿಮ್ಮ ಕಾಲದೊಳ್ ಪೀಠ ಪೆಸರಾಯಿತು।
ನಿಮ್ಮ ಭಾಷೆಯೊಳ್ ಜನ ಜಾಗೃತವಾಯಿತು।
ನಿಮ್ಮ ಪೂಜೆಯಿಂ ಜನ ಪುಣ್ಯಗಳಿಸಿತು।
ನಿಮ್ಮ ಪಥದಿ ಮತ ಮಹತ್ವ ಪಡೆಯಿತು।
ನಿಮ್ಮ ಪಾದಧೂಳಿ ಇಳೆಗೆ ಕಳೆಯ ತಂದಿತು।
ನಿಮ್ಮ ಇರುವು ನಮ್ಮೆಲ್ಲರಿಗೆ ವರವಾಯಿತು। ॥೪॥

ಗುರು ಪೀಠದೊಳ್ ಸದಾ ಸದ್ರತ್ನಗಳಿರಬೇಕು।
ಅರುವಿನಾ ತಾಣಾದಿದಕೆ ನಿಮ್ಮಂಥ ವ್ಯಕ್ತಿಬೇಕು।
ಅರವತ್ತು ತುಂಬಿದ ನಿಮ್ಮ ಸದ್ವಿಚಾರ ಸತತಬೇಕು।
ಮರವಿನ ಜನ್ಮಕೆ ಸದಾಸದ್ಗುರು ಬೇಕು।
ಆರು ನಾನೆಂಬ ವಿಚಾರ ತಿಳಿಸಲು ನಿಮ್ಮಂಥವರಿರಬೇಕು।
ಧೀರ ಗುರುವರ್ಯ ನಿಮ್ಮ ಪಾದಾಶೀರ್ವಾದ ಸರ್ವತ್ರ ಬೇಕು ॥೫॥

ಹಿರಿಯ ಜೇವರಗಿಯ ಹೆಸರಿನಿಂಪಿರಿಯದಷ್ಟೆ।
ಕಿರಿಯದದು ಹಳ್ಳಿ ಎನಿಸುವದಷ್ಟೆ।
ಪರಮಗುರು ತಾವಿರುವ ಸ್ಥಾನ ಹಿರಿಯದಷ್ಟೆ।
ಕರುಣದಿಂ ಪರಮ ಭಕ್ತರ ಸಹಾಯದಿ।
ಹಿರಿಯ ಶಾಲೆಯಂ ಮಾಡಿದ ನಿಮಗೆ ದುಧನಿಯೊಳ್।
ಜನಮನ ಸೆಳೆಯುವ ಇನ್ನೊಬ್ಬರುಂಟೆ? ॥೬॥

ಧರ್ಮ ದರ್ಶನ ಶಾಸ್ತ್ರಪ್ರೀಯರು ತಾವು ।
ಮರ್ಮವು ಜನ ತಿಳಿಯಲೆಂದು ಅಕ್ಕಲಕೋಟೆಯ ।
ಮರ್ಗದಲ್ಲಿಯ ಕುಂಬಾರ ಮಠದೊಳ್ ಪ್ರತಿಸಲ ।
ಕರ್ಮನಾಶ ಶ್ರೀ ಶಂಭುವಿನಂಬಿಗರಾದ ಗುರು ।
ವರ್ಯರ ಪುರಾಣಮಂ ಪಠಿಸಿ ಪೇಳ್ವ ।
ಉರ್ವಿಯೊಳ್ತಿ ಶ್ರೇಷ್ಠ ಪಂಡಿತರಂ ಕರೆಸುವದೇ ಸಾಕ್ಷಿ ॥ ೭ ॥

ಪಟ್ಟದೊಡೆಯರು ತಾವು ।
ಪುಟ್ಟ ಕೆಲಸಗಳಂ ಸರಳೈಸಿ ।
ಕಟ್ಟನಿಟ್ಟನ ಜನ ವತಿದೊಡ್ಡ ।
ಕಷ್ಟದೊಳ್ ಬಂದು ಸಲೆ ವಿನಂತಿಸಲು ।
ನಷ್ಟವಾಗದಂತೆ ಅವರಿಷ್ಟವಮಂ ಸಾಧಿಪ ।
ಶ್ರೇಷ್ಠ ಗುರುವೇ ನಿಮಗೆ ನಮೋ ನಮಃ ॥ ೮ ॥

ತೆಳ್ಳಗಾದ ನಿಮ್ಮ ದೇಹ ಬಾಲಯೋಗದ ಕಾಯ ।
ಒಳ್ಳೆತನದ ಜಡೆಯ ದುಂಡುಮುಖವಿಹ ।
ಬೆಳ್ಳಗಾದ ದಾಡಿ ಮಧ್ಯದಿ ಪರಿಶೋಭಿಸುತ್ತಿಹ ।
ಕುಳ್ಳವಿಲ್ಲದುನ್ನತದ ಕಾಯ ನಿಮ್ಮದು ।
ಸುಳ್ಳು, ಜೊಳ್ಳು, ಪೊಳ್ಳು ಪೇಳ್ವರ್ಗೆಸಲೆ ।
ಒಳ್ಳೆ ದಾರಿಯಿಂ ತೋರಿಪಾಗುರುವೇ ನಮೋ ನಮಃ । ॥ ೯ ॥

ಬಾಲಯೋಗಿಯೇ ಯಾವಾಗಲೂ ನಿಮ್ಮದು ತಪವೇ ।
ಲೀಲಾಮೂರ್ತಿಯೇ ಆವಾಗಲೂ ಸದ್ಭಕ್ತ ಚಿಂತೆಯೇ ।
ನೀಲಕಂಠ ಪ್ರೀಯರೇ ಆವಾಗಲೂ ಅಮರತ್ವದಭಿಮಾನವೇ ।
ಶೀಲಯೋಗಿಯೇ ಆವಾಗಲೂ ಕಾಲವೂಶರ್ಗೆ ದಯವೇ ।
ಬಾಲಹೊಟಗಿ ಶ್ರೀ ಚನ್ನವೀರರ ಪರಮ ಮಿತ್ರರೇ ನೀವು ।
ಅರವತ್ತು ತುಂಬಿದರೂ ಈಶನ ಕೃಪೆಯಿಂ ಮುಂದೂ ಬಾಳಿರಿ ॥೧೦॥

ಆದಿ ಪಂಚಾಚಾರ್ಯರ ಪರಮ ಮತದೊಳ್ ।
ಓದಿ ಉಳಿದ ಧರ್ಮದ ಮರ್ಮವು ತಿಳಿದನೀವ್ ।
ಮೇದಿನಿಯೋಳಧಿಕ ತತ್ವಂಗಳಂ ಪ್ರಸರಿಪ ।
ನಾಡಿಗೆ ಗುರುವಾದ ವೀರಶೈವ ತತ್ವಮಂ ।
ಸದಾ ಸದ್ಭಕ್ತರಿಗೆ ಬೋಧಿಸಲು ನಮ್ಮೊಳ್ ।
ಮುದದಿ ನೀನು ಇರಲು ಬೇಡುವೆವು ಭಾಳಲೋಚನನ ॥ ೧೧ ॥

ರಚಯಿತೃ :
ಷ. ಬ್ರ. ಸಿದ್ಧಲಿಂಗ ಶಿವಾಚಾರ್ಯ, B. A.
ನ್ಯಾಯ ಶಾಸ್ತ್ರ,
ಹಿರೇಮಠ, ಮಳಲಿ.

................

# ವೀರಶೈವ ಮತದಲ್ಲಿ ಅಷ್ಟಾವರಣದ ಮಹತ್ವ

★ ★ ★

ಗುರು, ಲಿಂಗ, ಭಸ್ಮ, ರುದ್ರಾಕ್ಷಿ, ಪಾದೋದಕ, ಪ್ರಸಾದ, ಮಂತ್ರ, ಜಪ ಎಂಬ ಎಂಟು ಆವರಣಗಳು ಮುಕ್ತಿಗೆ ಸಾಧನವಾಗಿದೆ. ಇವೆಂಟಕ್ಕೂ ಅಷ್ಟಾವರಣವೆಂದು ವೀರಶೈವ ಸಿದ್ಧಾಂತ ದಲ್ಲಿ ಸಂಕೇತ ಮಾಡಲ್ಪಟ್ಟಿರುವದು. ಪ್ರಪಂಚದಲ್ಲಿ ಕ್ಷೇತ್ರಾರಾಮಾದಿಗಳಲ್ಲಿರುವ ಪೈರನ್ನು ರಕ್ಷಿಸುವದ-ಕ್ಕೋಸ್ಕರ ಕ್ರೂರ ಮೃಗಾದಿಗಳು ಒಳಗೆ ಪ್ರವೇಶ ಮಾಡದಂತೆ ತಡೆಗಟ್ಟುವುದಕ್ಕೆ ಆವರಣವೆಂದು ಹೆಸರು. ಇಲ್ಲಿ ದೀಕ್ಷಿತವಾದ ಶರೀರದೊಳಗಣ ಆತ್ಮನನ್ನು ಕಲುಷಿತವನ್ನಾಗಿ ಮಾಡುತ್ತಿರುವ ಕಾಮ, ಕ್ರೋಧ, ಹಿಂಸಾ, ಮೋಹ, ಲೋಭಾದಿಗಳೆಂಬ ದುಷ್ಟಗುಣಗಳನ್ನು ಈ ಆವರಣಗಳು ತಡೆಗಟ್ಟುತ್ತವೆ. ಇವುಗಳಲ್ಲಿ ಭಸ್ಮಧಾರಣವು ದುಷ್ಟಕಾಮವನ್ನು ನಾಶಮಾಡುತ್ತದೆ. ರುದ್ರಾಕ್ಷಧಾರಣವು ಕ್ರೋಧಗುಣವನ್ನು ನಾಶಮಾಡು-ತ್ತದೆ. ಪಾದೋದಕ ಪ್ರಸಾದಗಳು ಶರೀರಕ್ಕೆ ಸಂಬಂಧಿಸುವ ಆದಿವ್ಯಾಧಿಗಳನ್ನು ನಾಶಮಾಡಿ ಆತ್ಮನನ್ನು ಸಮಸ್ಥಿತಿಯಲ್ಲಿರಿಸುತ್ತವೆ. ಜಂಗಮನು ಯಾವಾಗಲೂ ಎಚ್ಚರತಪ್ಪದೆ ಶಿವಚಿಂತನೆಯಲ್ಲಿರುವಂತೆ ಗುರೂಪದಿಷ್ಟವಾದ ಶೃತಿವಾಕ್ಯಗಳನ್ನು ಬೋಧಿಸುತ್ತಿರುವನು. ಶ್ರೀಗುರುವು ಶಿಷ್ಯನ ಹಸ್ತಮಸ್ತಕ ಸಂಯೋಗಮಾಡಿ ನಡೆನುಡಿ-ಗಳನ್ನು ಶುದ್ಧಿಕರಿಸಿ ಸ್ಥೂಲ, ಸೂಕ್ಷ್ಮ, ಕಾರಣ ದೇಹವನ್ನು ತ್ರಿವಿಧ ದೀಕ್ಷೆಯಿಂದ ಸಂಸ್ಕರಿಸಿ ಶಿಷ್ಯರನ್ನು ಶಿವನಚಿಂತನೆಗೆ ಅಧಿಕಾರಿಗಳನ್ನಾಗಿ ಮಾಡುವನು. ಮಂತ್ರವು ಮನಸ್ಸನ್ನು ಬಹಿರ್ಮುಖವಾಗಿ ಹೋಗ-ಗೊಡದಂತೆ ಪರಮಾತ್ಮನಲ್ಲಿಯೇ ಲೀನಗೊಳಿಸುತ್ತದೆ. ಹೀಗೆ ಒಂದೊಂದು ಆವರಣವೇ ಪಾಪವನ್ನು ನಾಶಮಾಡಿ ಪುಣ್ಯಬುದ್ಧಿಯನ್ನುಂಟುಮಾಡುತ್ತನೆ. ಜೀವಾತ್ಮನು ಪರಮಾತ್ಮನಿಂದ ಅಗಲಿ ತನ್ನಲ್ಲಿರುವ ಸರ್ವಜ್ಞತ್ವ ನಿತ್ಯತೃಪ್ತತ್ವಾದಿ ಗುಣಗಳೆಂಬ ಮಹಾಧನವನ್ನು ಕಳೆದುಕೊಂಡು ಕಿಂಚಿಜ್ಞತ್ವ, ಅಲ್ಪತೃಪ್ತತ್ವಾದಿ ದಾರಿದ್ರ್ಯ ಗುಣಗಳಿಗೀಡಾಗಿ ಆಶ್ರಯ ತಪ್ಪಿ ಚಕ್ರನೇಮಿ ಕ್ರಮದಿಂದ ನೀಚೋತ್ತಮ ಜನ್ಮಗಳನ್ನು ಧರಿಸುತ್ತ ದುಃಖಕ್ಕೀಡಾಗಿರುತ್ತಾನೆ. ಈ ದುಃಖದಿಂದ ಬಿಡುಗಡೆ ಹೊಂದುವವರಿಗೆ ಆತ್ಮಕ್ಕೆ ಶಾಂತಿಯೂ ಇಲ್ಲದೆ ಸಂಸಾರತಾಪದಲ್ಲಿ ಕಷ್ಟಪಡುತ್ತಲೇ ಇರಬೇಕಾಗಿದೆ.

ಪರಮ ಕೃಪಾಳುವಾದ ಪ್ರತಿಯೊಬ್ಬ ಮಠಾ-ಚಾರ್ಯರು ಪರಶಿವನ ಆಜ್ಞೆಯಿಂದ ಬೇರೆ ಬೇರೆ ರೂಪದಿಂದ ಭೂಲೋಕಕ್ಕೆ ಅವತರಿಸಿ ಕೆಲವು ಜೀವಾತ್ಮರಿಗೆ ಅವರವರ ಅಭಿರುಚಿಗನುಗುಣವಾಗಿ ಒಂದೊಂದು ಮಾರ್ಗವನ್ನು ಕಲ್ಪಿಸಿಕೊಟ್ಟಿರುತ್ತಾರೆ. ಈ ಮಾರ್ಗಗಳೇ ಮೋಕ್ಷಮಾರ್ಗಗಳೆಂದೂ ಕರೆಯಲ್ಪಡುತ್ತವೆ. ಮುಖ್ಯವಾಗಿ ಆತ್ಮಕ್ಕೆ ಬಿದ್ದಿರುವ ಸಂಸಾರಪಾಶವನ್ನು ಹರಿದು ಎಂದಿನಂತೆ ಆತ್ಮರನ್ನು ಸ್ವತಂತ್ರ-ರನ್ನಾಗಿ ಮಾಡುವದೊಂದೇ ಎಲ್ಲ ಮಠಾಚಾರ್ಯರ ಹಾಗೂ ಆಚಾರ್ಯರ ಧ್ಯೇಯವಾಗಿರುತ್ತದೆ. ಈ ಮುಕ್ತಿಮಾರ್ಗದಲ್ಲಿ ವೀರಶೈವಮುಕ್ತಿಮಾರ್ಗವು ಒಂದಾಗಿದೆ. ಈ ಮುಕ್ತಿಮಾರ್ಗವನ್ನು ಜಗದಾದಿಯಲ್ಲಿ ಶೃತ್ಯಾಗಮಗಳ ಅವಲಂಬನದಿಂದ ಶ್ರೀ ಜ. ರೇಣುಕಾದಿ ಭಗವತ್ಪಾದರು ಕಲ್ಪಿಸಿ ಅಷ್ಟಾವರಣ ಸ್ವರೂಪವೊಂದನ್ನು ಅನುಷ್ಠಿಸುವದರಿಂದ ಪರಶಿವನ ಜೀವಾತ್ಮನ ಜಗತ್ತಿನ ಸ್ವರೂಪಗಳೆಲ್ಲವೂ ಸ್ಪಷ್ಟವಾಗಿ "ಧ್ಯಾನ ನಿರ್ಮನಾಭ್ಯಾಸಾತ್ವಾ ಸಂದೇಹತಿ ಪಂಡಿತಃ" ಎಂಬ ಶೃತಿವಾಕ್ಯದಂತೆ ಆತ್ಮನಿಗೆ ಅಭ್ಯಾಸಶಕ್ತಿಯು ಹೆಚ್ಚಿ ಭೇದರೂಪವಾದ ಪ್ರಪಂಚವೆಲ್ಲವೂ ಪರಶಿವಾ-ಕಾರವಾಗಿ ಪರಿಣಮಿಸುತ್ತದೆ. ಅಷ್ಟಾವರಣ ಸಂಬಂಧದಿಂದ ಎಂದಿನಂತೆ ತನ್ನ ಸರ್ವಜ್ಞತ್ವಾದಿ ಕಲ್ಯಾಣ ಗುಣಗಳನ್ನು ಹೊಂದಿ ದುಃಖದಿಂದ ದೂರಾಗುವದು. ಮುಮುಕ್ಷುವಾದ ಪ್ರತಿಯೊಬ್ಬ ವೀರಶೈವನೂ ಈ ಎಂಟು ಆವರಣಗಳನ್ನು ಹೊಂದಲೇಬೇಕು. ಇವು

ಧರ್ಮ ದರ್ಶನ ಶಾಸ್ತ್ರಪ್ರೀಯರು ತಾವು ।
ಮರ್ಮವು ಜನ ತಿಳಿಯಲೆಂದು ಅಕ್ಕಲಕೋಟೆಯ ।
ದುರ್ಗದಲ್ಲಿಯ ಕುಂಬಾರ ಮಠದೊಳ್ ಪ್ರತಿಸಲ ।
ಕರ್ಮನಾಶ ಶ್ರೀ ಶಂಭುವಿನಂಬಿಗರಾದ ಗುರು ।
ವರ್ಯರ ಪುರಾಣಮಂ ಪಠಿಸಿ ಪೇಳ್ವ ।
ಉರ್ವಿಯೊಳ್‌ತಿ ಶ್ರೇಷ್ಠ ಪಂಡಿತರಂ ಕರೆಸುವದೇ ಸಾಕ್ಷಿ ॥ ೭ ॥

ಪಟ್ಟೊಡೆಯರು ತಾವು ।
ಪುಟ್ಟ ಕೆಲಸಗಳಂ ಸರಳೈಸಿ ।
ಕಟ್ಟುನಿಟ್ಟಿನ ಜನ ವಿತಿದೊಡ್ಡ ।
ಕಷ್ಟದೊಳ್ ಬಂದು ಸಲೆ ವಿನಂತಿಸಲು ।
ನಷ್ಟವಾಗದಂತೆ ಅವರಿಷ್ಟವಮಂ ಸಾಧಿಪ ।
ಶ್ರೇಷ್ಠ ಗುರುವೇ ನಿಮಗೆ ನಮೋ ನಮಃ ॥ ೮ ॥

ತೆಳ್ಳಗಾದ ನಿಮ್ಮ ದೇಹ ಬಾಲಯೋಗದ ಕಾಯ ।
ಒಳ್ಳೆತನದ ಜಡೆಯ ದುಂಡುಮುಖವಿಹ ।
ಬೆಳ್ಳಗಾದ ದಾಡಿ ಮಧ್ಯದಿ ಪರಿಶೋಭಿಸುತ್ತಿಹ ।
ಕುಳ್ಳವಿಲ್ಲದುನ್ನತದ ಕಾಯ ನಿಮ್ಮದು ।
ಸುಳ್ಳು, ಜೊಳ್ಳು, ಪೊಳ್ಳು ಪೇಳ್ವರ್ಗೆಸಲೆ ।
ಒಳ್ಳೆ ದಾರಿಯಿಂ ತೋರಿಪಾಗುರುವೇ ನಮೋ ನಮಃ । ॥ ೯ ॥

ಬಾಲಯೋಗಿಯೇ ಯಾವಾಗಲೂ ನಿಮ್ಮದು ತಪವೇ ।
ಲೀಲಾಮೂರ್ತಿಯೇ ಆವಾಗಲೂ ಸದ್ಭಕ್ತ ಚಿಂತೆಯೇ ।
ನೀಲಕಂಠ ಪ್ರೀಯರೇ ಆವಾಗಲೂ ಅಮರತ್ವದಭಿಮಾನವೇ ।
ಶೀಲಯೋಗಿಯೇ ಆವಾಗಲೂ ಕಾಲವೂಪರ್ಗೆ ದಯವೇ ।
ಬಾಲಹೊಟಗಿ ಶ್ರೀ ಚನ್ನವೀರರ ಪರಮ ಮಿತ್ರರೇ ನೀವು ।
ಅರವತ್ತು ತುಂಬಿದರೂ ಈಶನ ಕೃಪೆಯಿಂ ಮುಂದೂ ಬಾಳಿರಿ ॥೧೦॥

ಆದಿ ಪಂಚಾಚಾರ್ಯರ ಪರಮ ಮತದೊಳ್ ।
ಓದಿ ಉಳಿದ ಧರ್ಮದ ಮರ್ಮವು ತಿಳಿದನೀವ್ ।
ಮೇದಿನಿಯೋಳಧಿಕ ತತ್ವಂಗಳಂ ಪ್ರಸರಿಪ ।
ನಾಡಿಗೆ ಗುರುವಾದ ವೀರಶೈವ ತತ್ವಮಂ ।
ಸದಾ ಸದ್ಭಕ್ತರಿಗೆ ಬೋಧಿಸಲು ನಮ್ಮೊಳ್ ।
ಮುದದಿ ನೀನು ಇರಲು ಬೇಡುವೆವು ಭಾಳಲೋಚನನ ॥ ೧೧ ॥

ರಚಯಿತೃ :
ಷ. ಬ್ರ. ಸಿದ್ಧಲಿಂಗ ಶಿವಾಚಾರ್ಯ, D. A.
ನ್ಯಾಯ ಶಾಸ್ತ್ರ,
ಹಿರೇಮಠ, ಮಳಲಿ.

................

# ವೀರಶೈವ ಮತದಲ್ಲಿ ಅಷ್ಟಾವರಣದ ಮಹತ್ವ

★ ★ ★

ಗುರು, ಲಿಂಗ, ಭಸ್ಮ, ರುದ್ರಾಕ್ಷಿ, ಪಾದೋದಕ, ಪ್ರಸಾದ, ಮಂತ್ರ, ಜಪ ಎಂಬ ಎಂಟು ಆವರಣಗಳು ಮುಕ್ತಿಗೆ ಸಾಧನವಾಗಿದೆ. ಇವೆಂಟಕ್ಕೂ ಅಷ್ಟಾವರಣವೆಂದು ವೀರಶೈವ ಸಿದ್ಧಾಂತ ದಲ್ಲಿ ಸಂಕೇತ ಮಾಡಲ್ಪಟ್ಟಿರುವದು. ಪ್ರಪಂಚದಲ್ಲಿ ಕ್ಷೇತ್ರಾರಾಮಾದಿಗಳಲ್ಲಿರುವ ಪೈರನ್ನು ರಕ್ಷಿಸುವದ– ಕ್ಕೋಸ್ಕರ ಕ್ರೂರ ಮೃಗಾದಿಗಳು ಒಳಗೆ ಪ್ರವೇಶ ಮಾಡದಂತೆ ತಡೆಗಟ್ಟುವುದಕ್ಕೆ ಆವರಣವೆಂದು ಹೆಸರು. ಇಲ್ಲಿ ದೀಕ್ಷಿತವಾದ ಶರೀರದೊಳಗಣ ಆತ್ಮನನ್ನು ಕಲುಷಿತವನ್ನಾಗಿ ಮಾಡುತ್ತಿರುವ ಕಾಮ, ಕ್ರೋಧ, ಹಿಂಸಾ, ಮೋಹ, ಲೋಭಾದಿಗಳೆಂಬ ದುಷ್ಟಗುಣಗಳ ನ್ನು ಈ ಆವರಣಗಳು ತಡೆಗಟ್ಟುತ್ತವೆ. ಇವುಗಳಲ್ಲಿ ಭಸ್ಮಧಾರಣವು ದುಷ್ಟಕಾಮವನ್ನು ನಾಶಮಾಡುತ್ತದೆ. ರುದ್ರಾಕ್ಷಧಾರಣವು ಕ್ರೋಧಗುಣವನ್ನು ನಾಶಮಾಡು- ತ್ತದೆ. ಪಾದೋದಕ ಪ್ರಸಾದಗಳು ಶರೀರಕ್ಕೆ ಸಂಬಂಧಿ ಸುವ ಆದಿವ್ಯಾಧಿಗಳನ್ನು ನಾಶಮಾಡಿ ಆತ್ಮನನ್ನು ಸಮ ಸ್ಥಿತಿಯಲ್ಲಿರಿಸುತ್ತವೆ. ಜಂಗಮನು ಯಾವಾಗಲೂ ಎಚ್ಚ ರತಪ್ಪದೆ ಶಿವಚಿಂತನೆಯಲ್ಲಿರುವಂತೆ ಗುರೂಪದಿಷ್ಟವಾದ ಶ್ರುತಿವಾಕ್ಯಗಳನ್ನು ಬೋಧಿಸುತ್ತಿರುವನು. ಶ್ರೀಗುರು ವು ಶಿಷ್ಯನ ಹಸ್ತಮಸ್ತಕ ಸಂಯೋಗಮಾಡಿ ನಡೆನುಡಿ– ಗಳನ್ನು ಶುದ್ಧಿಕರಿಸಿ ಸ್ಥೂಲ, ಸೂಕ್ಷ್ಮ, ಕಾರಣ ದೇಹ ವನ್ನು ತ್ರಿವಿಧ ದೀಕ್ಷೆಯಿಂದ ಸಂಸ್ಕರಿಸಿ ಶಿಷ್ಯರನ್ನು ಶಿವನಚಿಂತನೆಗೆ ಅಧಿಕಾರಿಗಳನ್ನಾಗಿ ಮಾಡುವನು. ಮಂತ್ರವು ಮನಸ್ಸನ್ನು ಬಹಿರ್ಮುಖವಾಗಿ ಹೋಗ– ಗೊಡದಂತೆ ಪರಮಾತ್ಮನಲ್ಲಿಯೇ ಲೀನಗೊಳಿಸುತ್ತದೆ. ಹೀಗೆ ಒಂದೊಂದು ಆವರಣವೇ ಪಾಪವನ್ನು ನಾಶಮಾಡಿ ಪುಣ್ಯಬುದ್ಧಿಯನ್ನುಂಟುಮಾಡುತ್ತವೆ. ಜೀವಾತ್ಮನು ಪರಮಾತ್ಮನಿಂದ ಅಗಲಿ ತನ್ನಲ್ಲಿರುವ ಸರ್ವಜ್ಞತ್ವ ನಿತ್ಯತೃಪ್ತತ್ವಾದಿ ಗುಣಗಳೆಂಬ ಮಹಾಧನ ವನ್ನು ಕಳೆದುಕೊಂಡು ಕಿಂಚಿಜ್ಞತ್ವ, ಅಲ್ಪತೃಪ್ತತ್ವಾದಿ ದಾರಿದ್ರ್ಯ ಗುಣಗಳಿಗೀಡಾಗಿ ಆಶ್ರಯ ತಪ್ಪಿ ಚಕ್ರ ನೇಮ ಕ್ರಮದಿಂದ ನೀಚೋತ್ತಮ ಜನ್ಮಗಳನ್ನು ಧರಿಸುತ್ತ ದುಃಖಕ್ಕೀಡಾಗಿರುತ್ತಾನೆ. ಈ ದುಃಖದಿಂದ ಬಿಡುಗಡೆ ಹೊಂದುವವರಿಗೆ ಆತ್ಮಕ್ಕೆ ಶಾಂತಿಯೂ ಇಲ್ಲದೆ ಸಂಸಾರತಾಪದಲ್ಲಿ ಕಷ್ಟಪಡುತ್ತಲೇ ಇರಬೇಕಾಗಿದೆ.

ಪರಮ ಕೃಪಾಳುವಾದ ಪ್ರತಿಯೊಬ್ಬ ಮತಾ– ಚಾರ್ಯರು ಪರಶಿವನ ಆಜ್ಞೆಯಿಂದ ಬೇರೆ ಬೇರೆ ರೂಪದಿಂದ ಭೂಲೋಕಕ್ಕೆ ಅವತರಿಸಿ ಕೆಲವು ಜೀವಾತ್ಮರಿಗೆ ಅವರವರ ಅಭಿರುಚಿಗನುಗುಣವಾಗಿ ಒಂದೊಂದು ಮಾರ್ಗವನ್ನು ಕಲ್ಪಿಸಿಕೊಟ್ಟಿರುತ್ತಾರೆ. ಈ ಮಾರ್ಗಗಳೇ ಮೋಕ್ಷಮಾರ್ಗಗಳೆಂದೂ ಕರೆಯ ಲ್ಪಡುತ್ತವೆ. ಮುಖ್ಯವಾಗಿ ಆತ್ಮಕ್ಕೆ ಬಿದ್ದಿರುವ ಸಂಸಾರ ಪಾಶವನ್ನು ಹರಿದು ಎಂದಿನಂತೆ ಆತ್ಮರನ್ನು ಸ್ವತಂತ್ರ- ರನ್ನಾಗಿ ಮಾಡುವದೊಂದೇ ಎಲ್ಲ ಮತಾಚಾರ್ಯರ ಹಾಗೂ ಆಚಾರ್ಯರ ಧ್ಯೇಯವಾಗಿರುತ್ತದೆ. ಈ ಮುಕ್ತಿಮಾರ್ಗದಲ್ಲಿ ವೀರಶೈವಮುಕ್ತಿಮಾರ್ಗವು ಒಂದಾಗಿದೆ. ಈ ಮುಕ್ತಿಮಾರ್ಗವನ್ನು ಜಗದಾದಿ ಯಲ್ಲಿ ಶೃತ್ಯಾಗಮಗಳ ಅವಲಂಬನದಿಂದ ಶ್ರೀ ಜ. ರೇಣುಕಾದಿ ಭಗವತ್ಪಾದರು ಕಲ್ಪಿಸಿ ಅಷ್ಟಾವರಣ ಸ್ವರೂಪವೊಂದನ್ನು ಅನುಷ್ಠಿಸುವದರಿಂದ ಪರಶಿವನ ಜೀವಾತ್ಮನ ಜಗತ್ತಿನ ಸ್ವರೂಪಗಳೆಲ್ಲವೂ ಸ್ಪಷ್ಟವಾಗಿ "ಧ್ಯಾನ ನಿರ್ಮನಾಭ್ಯಾಸಾತ್ವಾ ಸಂದೇಹತಿ ಪಂಡಿತಃ" ಎಂಬ ಶೃತಿವಾಕ್ಯದಂತೆ ಆತ್ಮನಿಗೆ ಅಭ್ಯಾಸಶಕ್ತಿಯು ಹೆಚ್ಚಿ ಭೇದರೂಪವಾದ ಪ್ರಪಂಚವೆಲ್ಲವೂ ಪರಶಿವಾ– ಕಾರವಾಗಿ ಪರಿಣಮಿಸುತ್ತದೆ. ಅಷ್ಟಾವರಣ ಸಂಬಂಧ ದಿಂದ ಎಂದಿನಂತೆ ತನ್ನ ಸರ್ವಜ್ಞತ್ವಾದಿ ಕಲ್ಯಾಣ ಗುಣಗಳನ್ನು ಹೊಂದಿ ದುಃಖದಿಂದ ದೂರಾಗುವದು. ಮುಮುಕ್ಷುವಾದ ಪ್ರತಿಯೊಬ್ಬ ವೀರಶೈವನೂ ಈ ಎಂಟು ಆವರಣಗಳನ್ನು ಹೊಂದಲೇಬೇಕು. ಇವು

ಗಳಲ್ಲಿ ಒಂದನ್ನು ಬಿಟ್ಟು ಒಂದರಿಂದ ಕಾರ್ಯವು ಸಾಧಿಸಲಾರದು. ಭಸ್ಮವಿದ್ದೆಡೆಗೆ ರುದ್ರಾಕ್ಷಿ ಇರಬೇಕು. ರುದ್ರಾಕ್ಷಿಯಿದ್ದಲ್ಲಿ ಶಿವಲಿಂಗವಿರಬೇಕು. ಶಿವಲಿಂಗ–ವಿದ್ದಲ್ಲಿ ಪ್ರಸಾದ ಪಾದೋದಕಗಳು ಇರಬೇಕು. ಇವುಗಳಿದ್ದಲ್ಲಿ ಮಂತ್ರವಿರಬೇಕು. ಮಂತ್ರವಿದ್ದಲ್ಲಿ ಧ್ಯೇಯನಾದ ಪರಮಾತ್ಮನ ಸಾನಿಧ್ಯವಿರಬೇಕು. ಪರಮಾತ್ಮ ಸಾನಿಧ್ಯವಿದ್ದಲ್ಲಿ ಚರನಿರಬೇಕು. ಚರನಿದ್ದಲ್ಲಿ ಗುರುವಿರಬೇಕು. ಇವುಗಳಲ್ಲಿ ಕೆಲವು ಬಾಹ್ಯಶರೀರವನ್ನು ಶುದ್ಧಿಗೊಳಿಸುವವು. ಕೆಲವು ಆತ್ಮನನ್ನು ಶುದ್ಧಿಗೊಳಿಸುವವು. ಪ್ರಥಮತಃ ಶರೀರವು ಶುದ್ಧವಾಗದ ಹೊರತು ಶರೀರದೊಳಗಣ ಆತ್ಮವು ಶುದ್ಧವಾಗುವದಿಲ್ಲ. ಪಾತ್ರೆಯನ್ನು ಮೊದಲು ಶುದ್ಧಿಮಾಡಿಕೊಂಡು ಹೊರಗೆ ಬೆಂಕಿಯನ್ನು ಹಾಕುವುದರಿಂದ ಪಾತ್ರೆಯೊಳಗಿರುವ ಧಾನ್ಯವು ಪಕ್ವವಾಗುವಂತೆ ಹೊರಗಿರುವ ಈ ಅಷ್ಟಾವರಣಗಳ ಉಪಾಸನೆಯಿಂದ ಅಂತರಾತ್ಮವು ಪರಿಶುದ್ಧವಾಗಿ ಆತ್ಮಕ್ಕೆ ಬಿದ್ದಿರುವ ಪಾಶವು ಸಡಿಲವಾಗುವದು. ಯಾವ ದೇಹದಲ್ಲಿ ಈ ಅಷ್ಟಾವರಣಗಳು ಕಂಡುಬರುವವೋ ಆ ದೇಹದಲ್ಲಿ ಯಾವ ವಿಧವಾದ ಹಿಂಸಾವೃತ್ತಿಯು ನಡೆಯಲಾರದು. ಹಿಂಸಾವೃತ್ತಿಯು ಯಾವ ದೇಹದಲ್ಲಿ ಕಂಡುಬರುವದೋ ಆ ದೇಹದಲ್ಲಿ ಅಷ್ಟಾವರಣಗಳಿರುವದಿಲ್ಲ. ವೀರಶೈವಮತಾವಲಂಬಿಯಾಹ ಮಾನವನು ನಡೆನುಡಿಗಳಲ್ಲಿ ಶುದ್ಧನಾಗಿತಮ್ಮಆತ್ಮರನ್ನು ಪವಿತ್ರಗೊಳಿಸಲೆಂಬ ಉದ್ದೇಶದಿಂದಲೇ ಜ್ಞಾನಕ್ರಿಯಾ ಬಾಹುಳ್ಯವಾದ ಈ ವೀರಶೈವಮತವೆಂಬ ಮಹಾ ಮಂದಿರವನ್ನು ಜ. ರೇಣುಕಾದಿ ಪೂರ್ವಾಚಾರ್ಯರು ಈ ಜಗತ್ತಿನಲ್ಲಿ ರಚಿಸಿ ಈ ಮಂದಿರ ರಕ್ಷಣೆಗಾಗಿ ಅಷ್ಟದಿಗ್ಗಜಗಳಂತೆ ಅಷ್ಟಾವರಣವನ್ನು ಅನುಗ್ರಹಿಸಿರುತ್ತಾರೆ.

ಈ ಅಷ್ಟಾವರಣಗಳಿಲ್ಲದವನು ಶಿವನಿಗೆ ಪ್ರೇಮಾಸ್ಪದವಿಲ್ಲ. ಶಿವನನ್ನು ಕಾಣಬೇಕೆನ್ನುವವನು ಶ್ರೀ ಗುರುಮುಖದಿಂದ ಈ ಅಷ್ಟಾವರಣಗಳನ್ನು ಹೊಂದದೆ ಕಾಣಲಾರನು. ರಾಜನನ್ನು ಕಾಣಬೇಕಾದರೆ ರಾಜ–ಭಕ್ತಿಯೊಡನೆ ರಾಜದರ್ಶನೋಚಿತ ಉಡುಪನ್ನು ಧರಿಸುವದು ಹೇಗೆ ಅವಶ್ಯಕವಾಗಿದೆಯೋ ಹಾಗೆ ಇವುಗಳು ಶಿವಭಕ್ತಿಯೊಡನೆ ಶಿವದರ್ಶನೋಚಿತವಾದ ಚಿನ್ಹೆಗಳನ್ನು ಹೊಂದುವದರಿಂದ ವೀರಶೈವನೆನಿಸಿಕೊಂಡು ಪ್ರತಿಯೊಬ್ಬನ ಹೃದಯದಲ್ಲಿ ಶಿವನೊಲುಮೆಯು ನೆಲೆಗೊಳಿಸಿ ಶಿವಭಕ್ತರೆಂಬ ನಾಮವನ್ನು ಜಗತ್ತಿನಲ್ಲಿ ಸಾರ್ಥಕವಾಗಬೇಕು.

— ಷ. ಬ್ರ. ಡಾ|| ವಿಶ್ವಾರಾಧ್ಯ ಶಿವಾಚಾರ್ಯ ಸ್ವಾಮಿಜಿ
ಬೃಹನ್ಮಠ, ಮಾಗಣಗೇರಿ M. B. H. S. ವೇದಾಂತಶಾಸ್ತ್ರಿ.

‡‡ ‡‡ ‡‡ ‡‡ ‡‡ ‡‡ ‡‡

ಕೆಲವರು ಇಷ್ಟಲಿಂಗವೇಕೆ ಬೇಕೆಂದು ವಾದಿಸುವವರಿದ್ದಾರೆ. ಆತ್ಮಲಿಂಗ ಒಳಗೆ ಇರುವಾಗ ಹೊರಗಿನ ಈ ಇಷ್ಟಲಿಂಗ ಕಟ್ಟಿಕೊಂಡರೇನು ಪ್ರಯೋಜನವೆಂದು ಲಘುವಾಗಿ ಮಾತನಾಡುವವರ ಸಂಖ್ಯೆ ಇಂದು ವಿಶೇಷವಾಗಿ ಕಲಿತವರಲ್ಲಿ ಹೆಚ್ಚುತ್ತಲಿದೆ. ನಾಸ್ತಿಕತೆಯು ಹಬ್ಬುತ್ತಿರುವ ಇಂದಿನ ಕಾಲದಲ್ಲಿ ಅದು ಸ್ವಾಭಾವಿಕ. ಒಳಗೇನೋ ಆತ್ಮಲಿಂಗವಿದೆ ನಿಜ. ಆದರೆಅದು ಭವರೋಗವನ್ನು ಕಳೆಯಲಾರದು. ಉದಾ : ಒಂದು ಆಕಳವಿದೆ. ಅದು ಬಿದ್ದು ಅದರ ತೊಡೆಗೆ ಗಾಯವಾಗಿದೆ, ಬಾವು ಬಂದಿದೆ, ನೋವಾಗಿದೆ. ಡಾಕ್ಟರರು ಅದಕ್ಕೆ ತುಪ್ಪಹಚ್ಚಿ ತಿಕ್ಕಿದರೆ ವಾಸಿಯಾಗುತ್ತದೆಯೆಂದು ಹೇಳಿದಾಗ, ಅದರ ಹೊಟ್ಟೆಯಲ್ಲಿ ಹಾಲಿದೆ, ಹಾಲಿನಲ್ಲಿ ಮೊಸರಿದೆ, ಮೊಸರಿನಲ್ಲಿ ಬೆಣ್ಣೆಯಿದೆ; ಬೆಣ್ಣೆಯಲ್ಲಿ ತುಪ್ಪವಿದೆ, ಆದ್ದರಿಂದ ತಾನೇ ಆ ಆಕಳ ಕಾಲುನೋವು ವಾಸಿಯಾಗಲಿದೆಯೆಂದರೆ ಗುಣವಾಗಬಹುದೆ ? ಸಾಧ್ಯವಿಲ್ಲ. ಆ ಹಸುವನ್ನು ಕರೆದು ಹಿಂಡಿಕೊಂಡು, ಆ ಹಾಲನ್ನು ಕಾಸಿ, ಹೆಪ್ಪುಹಾಕಿ ಮೊಸರುಮಾಡಿ, ಬೆಣ್ಣೆ ಕಡಿದು ತುಪ್ಪಕಾಸಿ ನಂತರ ಆಕಳ ಕಾಲಿಗೆ ಹಚ್ಚಿ ತಿಕ್ಕಿದರೆ ಆ ನೋವು ಹೇಗೆ ಗುಣಮುಖವಾಗುವದೋ ಅದರಂತೆ ಒಳಗಿರುವ ಆತ್ಮಲಿಂಗ ನಮ್ಮ ಭವರೋಗವನ್ನು ನಾಶಗೊಳಿಸುವದು. ಆ ಆತ್ಮಲಿಂಗವು ಸದ್ಗುರುವಿನಿಂದ ಕರಸ್ಥಲಕ್ಕೆ ಬಂದು, ಅದನ್ನು ಅನುಸಂಧಾನಗೈದರೆ ನಮ್ಮ ಭವರೋಗ ದೂರವಾಗುವದರಲ್ಲಿ ಸಂಶಯವಿಲ್ಲ.

( ಪ್ರತಿಭಾದವರಿಂದ ಸಂಗ್ರಹ )

ಶ್ರೀ ಷ. ಬ್ರ. ಬಾಲಶಿವಯೋಗಿ ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳವರ

# ಜೀವನ ಪರಿಚಯ ನಿರೂಪಣೆ.



ಪರಮ ಪೂಜ್ಯ ಶ್ರೀ ಬಾಲಶಿವಯೋಗಿ ಗುರುಶಾಂತ ಶಿವಾಚಾರ್ಯರು ಶ್ರೀಶೈಲ ಸಿಂಹಾಸನ ಜಗದ್ಗುರು ಪಂಡಿತಾರಾಧ್ಯ ಪೀಠದ ಶಾಖಾನವರ್ತಿಗಳು. ಇವರ ಮೂಲ ಮಠವು ಅಫಜಲಪೂರ ತಾಲೂಕಿನ ಹಿರೇಜೇವರಗಿಯಲ್ಲಿದೆ.

ಇವರು ಮಹಾನ್ ತಪಸ್ವಿಗಳೂ ಮತ್ತು ಭೀಷ್ಮ ಬ್ರಹ್ಮಚಾರಿಗಳೂ, ಆತ್ಮನಿಗ್ರಹಿಗಳೂ, ಆಗಿರುವರು. ಆತ್ಮನಿಗ್ರಹವನ್ನು ಮಾಡಿದ ಮನುಷ್ಯನು ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖಿಯಾಗುತ್ತಾನೆ ಎಂಬುದನ್ನು ಅರಿತವರು. ಇವರು ಚಿಕ್ಕವರಿರುವಾಗಲೇ ಕಠಿಣ ತಪಶ್ಚರ್ಯವನ್ನು ಮಾಡಿದರು. ಇವರ ತಪಶ್ಚರ್ಯವನ್ನು ಕಂಡು ಇವರಿಗೆ "ಬಾಲಶಿವಯೋಗಿ" ಗಳೆಂದು ಹೆಸರು ಬಂದಿದೆ.

"ದ್ವೇಷಗಳು ಕರ್ಮದ ಬೀಜಗಳು. ಕರ್ಮವು ಮೋಹದಿಂದ ಉತ್ಪತ್ತಿಯಾಗುತ್ತದೆ. ಕರ್ಮವು ಜನನ ಮರಣಗಳಿಗೆ ಕಾರಣೀಭೂತವಾಗಿದೆ. ಜನನ-ಮರಣಗಳು ದುಃಖಮೂಲವಾಗಿವೆ" ಎಂಬ ಮರ್ಮವನ್ನು ಅರಿತ ಈ ಯೋಗಿಗಳು ತಮ್ಮ ದ್ವೇಷಿಗಳನ್ನು ಪ್ರೀತಿಸಿ ಅವರ ಹಿತವನ್ನೇ ಬಯಸಿದವರು, ಗಿಡವು ಯಾವ-ರೀತಿಯಾಗಿ ಬೇರುಗಳಿಂದ ಬೆಳೆದು, ಅದಕ್ಕೆ ಕವಲೊಡೆದು ಶಾಖೆಗಳಿಂದ ಉಪಶಾಖೆಗಳೂ ಎಲೆಗಳೂ ಹೊರಡುತ್ತವೆಯೋ. ಆಮೇಲೆ ಹೂವು, ಕಾಯಿ, ಹಣ್ಣು ರಸವಾಗುತ್ತವೆ. ಅದರಂತೆಯೇ ಧರ್ಮವೃಕ್ಷದ ಮೂಲವು ವಿನಯ, ಕೊನೆಯ ಹಣ್ಣುಗಳ ರಸದಂತಿದ್ದ ಫಲರಸವೇ ಮೋಕ್ಷ. ಇದನ್ನೇ ತಮ್ಮ ಆಧಾರವನ್ನಾಗಿ-ಟ್ಟುಕೊಂಡೇ ಬಾಳುತ್ತಿದ್ದಾರೆ. ಇವರು ನಿರ್ಮಲರೂ, ಸತ್ಯವಂತರೂ ಆಹುದು. ಧರ್ಮವೇ ಪವಿತ್ರವಾದು-ದೆಂದು ತಮ್ಮ ಜೀವನದುದ್ದಕ್ಕೂ ಸಾರುತ್ತಿದ್ದಾರೆ.

"ದಾರವಿರುವ ಸೂಜಿಯು ಎಲ್ಲಿಯಾದರೂ ಬಿದ್ದು ಹೋದರೂ, ಆ ದಾರದಮೂಲಕ ಅದು ಸಿಕ್ಕೆಸಿಗುವದು. ಹಾಗೆಯೇ ಧರ್ಮ ಸೂತ್ರವನ್ನು ಹಿಡಿದಿರುವ ಶ್ರೀ ಗುರುಶಾಂತ ಶಿವಾಚಾರ್ಯರು ಐಹಿಕ ಜೀವನದಲ್ಲಿ ಅಮರರು.

ಇವರು ಸಮಾಜ ಸುಧಾರಕರು. ಯಾಕಂದರೆ, ಜೇವರಗಿಯನ್ನು ಶಿಕ್ಷಣದ ತವರುಮನೆಯನ್ನಾಗಿ ಮಾಡಿದ್ದಾರೆ. ಅದೂ ಒಂದು ಶಾಂತನಿಕೇತನವೆಂದರೆ ಅತಿಶಯೋಕ್ತಿಯಾಗಲಾರದು. ಶಿಕ್ಷಣದ ಬಗ್ಗೆ ಇವರ ಆಸ್ಥೆಯನ್ನು ಕಂಡರೆ ಇವರನ್ನು ಆಧುನಿಕ ರಾಜಾರಾಮ ಮೋಹನರನ್ನು ಹೋಲಿಸಬಹುದು. ಶಿಕ್ಷಣದ ಕಾರ್ಯದಲ್ಲಿ ಎಂತಹ ಎಡರುಗಳು ಬಂದರೂ ಅವನ್ನು ಸಹಜವಾಗಿ ಎದುರಿಸಿ ಕಾರ್ಯವನ್ನು ಸುಗಮಗೊಳಿಸುವರು. ಯಾವಮನುಷ್ಯನು ಭವಿಷ್ಯದಲ್ಲಿ ಆಪೋತ್ತರಗಳನ್ನಿಟ್ಟು ಕೊಂಡಿರುವನೋ ಅವನ ಮೈಯಲ್ಲಿ ಕಬ್ಬಿಣದ ಸೂಜಿಗಳು ಚುಚ್ಚಿದರೂ ಅವುಗಳ ಬಾಧೆಯನ್ನು ಸಹಿಸು-ವದು ಸಾಧ್ಯ. ಐಹಿಕ ಜೀವನದಲ್ಲಿ ಆಪೋತ್ತರಗಳನ್ನು ಇಟ್ಟುಕೊಳ್ಳದಿರುವ ಯಾವ ಯೋಗಿಯು ಜನರಾಡುವ ನಿಷ್ಠುರದ ಮಾತುಗಳನ್ನು ಶಾಂತವಾಗಿ ಸಹಿಸುತ್ತಾ-ನೆಯೋ ಅವನೇ ನಿಜವಾಗಿಯೂ ಪೂಜ್ಯನಾದ ಯೋಗಿಯು. ಶ್ರೀ ಬಾಲಶಿವಯೋಗಿಗಳೂ ಇದೇ ಸಾಲಿನಲ್ಲಿ ಕೂಡತಕ್ಕವರು.

ಇವರು ಹೆಸರಿಗೆ ತಕ್ಕಂತೆ ಶಾಂತ ಸ್ವಭಾವದವರು. ಯಾಕಂದರೆ, ಇವರು ಯಾವಾಗಲೂ "ಕ್ರೋಧವನ್ನು ಕ್ಷಮೆಯಿಂದ ಜಯಿಸಬೇಕು; ಅಹಂಕಾರವನ್ನು ವಿನಯದಿಂದ ಜಯಿಸಬೇಕು. ಮೋಸವನ್ನು ಪ್ರಾಮಾಣಿಕತೆ-ಯಿಂದಲೂ; ಲೋಭವನ್ನು ತೃಪ್ತಿಯಿಂದಲೂ ನಾಶ-ಮಾಡಬೇಕು" ಎಂದು ಹೇಳುತ್ತಾರೆ. ಒಟ್ಟನಲ್ಲಿ ಶುದ್ಧ ಮನಸ್ಸಿನಲ್ಲಿ ಮಾಡುವದೆಲ್ಲವೂ ಭಗವಂತನ ವಾಣಿಯೇ

ಎಂದು ತಿಳಿಯುವರು.

ಇವರು ಮಿತಭಾಷಿಗಳೂ, ಮೃದುಸ್ವಭಾವದವರೂ ಆಹುದು. ಆದರೂ ಇವರ ಕೆಲಸಗಳು ಮಾತ್ರ ಕಠಿಣ ಪರಿಶ್ರಮದಿಂದ ಕೂಡಿದವುಗಳು. "ಸಾಮಾನ್ಯವಾಗಿ ಬೀಜವೂ ಮೃದು. ಅದರ ಮೊಳಕೆಯೂ ಮೃದು. ಆದರೂ ಅದು ಗಟ್ಟಿ ನೆಲವನ್ನು ಭೇದಿಸಿಬಿಡುತ್ತದೆ. ಅದರಂತೆಯೇ ಇವರ ಕಾರ್ಯಕುಶಲತೆಯೂ ಸರಿ. ಇವರು ಸರಳಸ್ವಭಾವದವರೂ ಅಹುದು. "ಸರಳತೆ-ಯಿದ್ದರೆ ಭಗವಂತನ ಸಾಕ್ಷಾತ್ಕಾರ ಬೇಗ ದೊರೆತು ಬಿಡುತ್ತದೆ" ಎಂಬ ಮಾತಿಗೆ ಅಂಟಕೊಂಡ ಇವರು, ಅದನ್ನು ಹೇಗೆ ಬಿಟ್ಟಾರು? ಶ್ರೀ ಬಾಲ ಶಿವಯೋಗಿಗಳು ತಮ್ಮ ಜೀವನದ ತುಂಬ ಪರೋಪಕಾರದ ಕಾರ್ಯವನ್ನೇ ಕೈಕೊಂಡಿದ್ದಾರೆ. ಆ ಪರೋಪಕಾರದ ಗುಣದಿಂದಲೇ ಇವರಿಗೆ ಮಠಾಧಿಪತಿಗಳ ಅಧಿಕಾರವು ಸಿಕ್ಕಿದೆ. ಆ ಅಧಿಕಾರ ಬರುವಾಗಲೂ ಕೂಡ ಇವರಿಗೆ ವಿರೋಧಗಳು ಬಂದದ್ದುಂಟು. ಆದರೂ ಅದಕ್ಕೆ ಲೆಕ್ಕಿಸದೇ ಯಶಸ್ಸು ಸಂಪಾದಿಸಿದ್ದಾರೆ. ಇದಕ್ಕೆ ಇವರ ಸಹನೆಯೇ ಕಾರಣ. "ಹೊಗೆಯು ಗೋಡೆಯನ್ನು ಕಪ್ಪು ಮಾಡಬಲ್ಲುದು. ಆದರೆ ಅದು ಆಕಾಶವನ್ನೇನೂ ಮಾಡಲಾರದು. ಆಕಾಶದಷ್ಟು ಎತ್ತರವಾದ ಇವರ ಉಚ್ಚ ವಿಚಾರಗಳೇ ಇವಕ್ಕೆ ಸಾಕ್ಷಿಗಳು. "ಯಾರೇ ಆಗಲಿ ಮಹಾತ್ಕಾರ್ಯಗಳನ್ನು ಸಾಧಿಸುತ್ತಿದ್ದರೆ ಭಗವಂತನ ವಿಶೇಷ ಶಕ್ತಿ ಆತನಲ್ಲಿ ವ್ಯಕ್ತವಾಗುತ್ತಿದೆ" ಎಂದು ಅರಿತುಕೊಳ್ಳಬೇಕು.

ಇವರು ಅಂತರಜ್ಞಾನಿಗಳೂ ಅಹುದು. ಕೆಲವೊಂದು ಇವರ ಘಟನೆಗಳೇ ಸಾಕ್ಷಿಯಾಗಿವೆ. ಬಾಯಿಯಿಂದ ನುಡಿ ಬರುತ್ತಲೇ ಅದರಂತೆ ಆಗುವದು. ಜಡ್ಡು ಕಡಿಮೆಯಾಗುವದು ಮುಂತಾದವು. ಇದರ ಮೊದಲ ಲಕ್ಷಣ ಶಾಂತ ಸ್ವಭಾವ, ಎರಡನೆಯದು ಅಹಂಕಾರಶೂನ್ಯತೆಯು ಇವರು ದುಧನಿಯ ಮಠದ ಒಡೆಯರಾಗಲು ಕೆಲವು ಎಡರುಗಳೂ ಬಂದವು. ಆದರೂ ಅದರಲ್ಲಿ ಯಶಸ್ಸನ್ನು ಗಳಿಸಿದರು. ಇವರು ಯಾವ ಉತ್ತಮ ಕೆಲಸ ಮಾಡಲು ಹಿಂಜರಿಯಲಾರರು. ಒಮ್ಮೊಮ್ಮೆ ಇವರು "ಭಗವಂತ ಯಾರ ಕೈಹಿಡಿದಿರು-ವನೋ ಅವರು ಯಾವದಕ್ಕೂ ಭಯಪಡಬೇಕಾಗಿಲ್ಲ" ಅದರಂತೆ ಯಾರು ಭಗವಂತನನ್ನು ಸಂಪೂರ್ಣವಾಗಿ ಆಶ್ರಯಿಸಿರುವರೋ ಅವರ ಇಡಿಯ ಭಾರವನ್ನು ಭಗವಂತನು ಹೊತ್ತುಕೊಳ್ಳುತ್ತಾನೆಂದು ಹೇಳುತ್ತಾರೆ.

ಶ್ರೀ ಬಾಲ ಶಿವಯೋಗಿ ಗುರುಶಾಂತ ಶಿವಾ-ಚಾರ್ಯರು ಅವತಾರಿ ಪುರುಷರು. "ಸತ್ಯವಚನವೇ ಕಲಿಯುಗದ ತಪಸ್ಸು, ಸತ್ಯತೆ, ನಮ್ರತೆ, ಪರಸ್ತ್ರೀಯರನ್ನು ಮಾತೃಭಾವದಿಂದ ಕಾಣುವಿಕೆ, ಇವೆಲ್ಲ ಭಗವಂತನ ಸಾಕ್ಷಾತ್ಕಾರಕ್ಕೆ ಸಾಧನಗಳು ಎಂದು ಹೇಳುವರು. ಹಿರೇಜೇವರಗಿ ಚಂದ್ರಶೇಖರರೊಬ್ಬರ ಧೀರ್ಘಾ-ವಧಿಯ ಜಡ್ಡನ್ನು ಕೇವಲ ತೀರ್ಥದಿಂದಲೇ ಕಡಿಮೆ ಮಾಡಿದ್ದಾರೆಂದು ವದಂತಿ. ಯಾವನು ಪರರನ್ನು ಕಷ್ಟದಿಂದ ಮುಕ್ತರನ್ನಾಗಿ ಮಾಡುವನೋ ಅವನೇ ಅವತಾರಿ ಪುರುಷ. ಈ ಹಿಂದೆ ತಿಳಿಸಿದಂತೆ ಇವರು ಶಿಕ್ಷಣಪ್ರೇಮಿಗಳು. ಜ್ಞಾನ, ವೈರಾಗ್ಯ, ಭಕ್ತಿ ಇವು ವಿದ್ಯಾಮಾಯೆಯ ಸಂಪತ್ತು. ವಿದ್ಯಾಮಾಯೆಯನ್ನು ಹಿಡಿದು ಮುಂದುವರಿದರೆ ಬ್ರಹ್ಮಜ್ಞಾನ ದೊರೆಯುತ್ತದೆ ಎಂದು ಹೇಳುವ ಇವರು ಬ್ರಹ್ಮ-ಜ್ಞಾನಿಗಳೇ ಸರಿ.

ಮಹಾಸ್ವಾಮಿಗಳು ಕರ್ತೃತ್ವಶಾಲಿಗಳು. ಇವ-ರಿಗೆ ಯಾವಾಗಲೂ ಕೆಲಸವು ಬೇಕು- ಬಸವಣ್ಣನವರು ಹೇಳಿದಂತೆ "ಕಾಯಕವೇ ಕೈಲಾಸ" ಅದನ್ನೇ ಆಧಾರವಾಗಿಟ್ಟುಕೊಂಡು ದುಡಿಯುತ್ತಾರೆ. ನನಗೆ ಇದರ ಬಗ್ಗೆ ಬಂದ ಅನುಭವದ ಮಾತೆಂದರೆ-ಕರ್ನಾಟಕದಲ್ಲಿ ಎಲ್ಲಿಯೋ ಒಬ್ಬ ಶಿಕ್ಷಣಾಧಿಕಾರಿಗಳ

ದೋಷದೋಷಗಳನ್ನು ತಿದ್ದಲು ಪ್ರಯತ್ನಕ್ಕೆ ಬಿದ್ದರು. ಆದರಿಂದ ಶಿಕ್ಷಕರಿಗೆ ಆಗುತ್ತಿದ್ದ ಅನ್ಯಾಯವನ್ನು ದೂರೀಕರಿಸಲು ಪ್ರಯತ್ನಿಸಿ ಆದರಲ್ಲಿ ಕೊನೆಗೆ ಯಶಸ್ಸನ್ನು ದೊರಕಿಸಿದರು. ಇದರಮೇಲಿಂದ ತಿಳಿದುಬರುವದೇನಂದರೆ, ಶಿಕ್ಷಕರ ಬಗ್ಗೆ ಆಸ್ಥೆ, ಪ್ರೇಮ, ಕಳಕಳಿ. ಪ್ರಯತ್ನ ಮಾಡುವದು ಮನುಷ್ಯನ ಕರ್ತವ್ಯ. ಮನುಷ್ಯನು ಏನೂಮಾಡದಿದ್ದರೆ ದೇವರಾದರೂ ಏನೂ ಕೊಡಲಾರನು. ದೇವರ ಮೇಲೆ ಭಾರಹಾಕಿ ಮನುಷನು ಸದಾಪ್ರಯತ್ನ ಮಾಡಲಿಕ್ಕೇಬೇಕು. ಕರ್ತವ್ಯನಿಷ್ಠೆಯುಳ್ಳ ಮನುಷ್ಯನಿಗೆ ಅಸಾಧ್ಯವೆಂಬುದೇ ಇಲ್ಲ. ಇವರಿಗೆ ಅಸಾಧ್ಯ ಕೆಲಸಗಳೂ ಸಹ ಒಮ್ಮೊಮ್ಮೆ ಸಾಧ್ಯವಾಗುತ್ತವೆ. ಆಯುಷ್ಯವನ್ನು ಸಾರ್ಥಕವಾದ ರೀತಿಯಲ್ಲಿ ಕಳೆಯುವದೇ ನಿಜವಾದ ಸುಖದ ಮಾರ್ಗವಾಗಿದೆ. ಗ್ರೀಕ ತತ್ವಜ್ಞಾನಿಯೊಬ್ಬನು ಸೆರೆಮನೆಯಲ್ಲಿರುವಾಗ್ಗೆ ಉತ್ತಮೋತ್ತಮವಾದ ಗ್ರಂಥಗಳನ್ನು ಬರೆದನು. ಅವನಿಗೆ ಗ್ರಂಥಗಳನ್ನು ಬರೆಯುವ ಆನಂದದಲ್ಲಿ ಸೆರೆಮನೆಯ ದುಃಖವು ಕೂಡ ಕಲ್ಪನೆಗೆ ಬರಲಿಲ್ಲವಂತೆ. ಲೋಕಮಾನ್ಯ ತಿಲಕರು ಸೆರೆಮನೆಯಲ್ಲಿದ್ದಾಗ ಗೀತಾ ರಹಸ್ಯದಂತಹ ಲೋಕೋಪಕಾರವಾದ ಗ್ರಂಥವನ್ನು ರಚಿಸಿದರು. ಉಪಯುಕ್ತಕಾರ್ಯಗಳಲ್ಲಿ ತೊಡಗಿಸುವದರಿಂದ ನಮಗೆ ಸುಖವೂ ಉಂಟಾಗುವದಲ್ಲದೆ ಆದರಿಂದ ನಮ್ಮ ಆತ್ಮಕ್ಕೂ ಆನಂದವುಂಟಾಗುವದು. ಶ್ರೀ ಬಾಲ ಶಿವಯೋಗಿ ಗುರುಶಾಂತ ಶಿವಾಚಾರ್ಯರೂ ಇದಕ್ಕೆ ಹೊರತಾಗಿಲ್ಲವೆಂಬುದು ಅವರ ಕಾರ್ಯಗಳ ಮೇಲಿನಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

ಶ್ರೀ ಷ. ಬ್ರ. ಬಾಲಶಿವಯೋಗಿ ಗುರುಶಾಂತ ಶಿವಾಚಾರ್ಯರು ಜಗತ್ತಿನಲ್ಲಿಯ ಜನರನ್ನು ನಾಲ್ಕು ವಿಧವಾಗಿ ಬಣ್ಣಿಸಿದ್ದಾರೆ. ಪರರ ಸುಖಕ್ಕಾಗಿ ಶ್ರಮಿಸುವವರು ಉತ್ತಮ ಜನರು. ಪರರ ಸುಖಕ್ಕಾಗಿಯೂ, ತಮ್ಮ ಸುಖಕ್ಕಾಗಿ ಶ್ರಮಿಸುವ ಜನರು ಮಧ್ಯಮ ಜನರು. ಕೇವಲ ತಮ್ಮ ಸುಖಕ್ಕಾಗಿ ಶ್ರಮಿಸುವ ಜನರು ಅಧಮರು. ತಮ್ಮ ಸುಖವನ್ನು ಮಾಡಿಕೊಳ್ಳದೆ ದುಷ್ಕೃತ್ಯಗಳಿಗಾಗಿ ಶ್ರಮಿಸುವವರು ಮಹಾನೀಚರು. ಉತ್ತಮರಿಗೆ ಶ್ರೇಷ್ಠ ಸುಖ, ಮಧ್ಯಮರಿಗೆ ಸಾಧಾರಣ ಸುಖ, ಅಧಮರಿಗೆ ಸುಖ-ದುಃಖಗಳು ಸಮನಾಗಿಯೂ ಮಹಾನೀಚರಿಗೆ ಸದಾ ದುಃಖವೂ ಪ್ರಾಪ್ತವಾಗುವದೆಂದು ಇವರ ದೃಢವಾದ ನಂಬಿಕೆಯು.

ಶ್ರೀ ಗುರುಶಾಂತಲಿಂಗ ಶಿವಾಚಾರ್ಯರು ಸಹಿಷ್ಣುಗಳು. ಯಾರಾದರೂ ನಮಗೆ ಅಪರಾಧವನ್ನು ಬಗೆದರೆ, ಅವರ ಮೇಲೆ ಒಮ್ಮೆಲೇ ಸಿಟ್ಟಿಗೇಳದೆ ಅವರನ್ನು ಕ್ಷಮಿಸಬೇಕು. ದ್ವೇಷದಿಂದ ದ್ವೇಷವು ಹೆಚ್ಚುತ್ತದೆ. ಕ್ಷಮಿಸುವದರಿಂದ ದ್ವೇಷವು ತಣ್ಣಗಾಗುತ್ತದೆ. ಎಂದು ಹೇಳುವ ಇವರು ಬುದ್ಧನ ಅವತಾರಿಗಳೆಂದರೂ ಸರಿಯೆ.

ನಾವೆಲ್ಲರೂ ಒಂದು ದಿವಸ ಪರಮಾತ್ಮನ ಮುಂದೆ ನಿಂತು ನಮ್ಮ ನಮ್ಮ ಕರ್ಮಗಳ ವರದಿಯನ್ನು ಒಪ್ಪಿಸ ಬೇಕಾಗುತ್ತದೆ. ಆದ್ದರಿಂದ ಐಹಿಕ ಜೀವನದಲ್ಲಿ ಪರಿ ಶುದ್ಧರಾಗಿ ವರ್ತಿಸಿರಿ ಎಂದು ಹೇಳಿದ ಮಹ್ಮದ ಪೈಗಂಬರರ ತತ್ವಗಳಂತೆ ನಡೆಯಿರಿ. ಎಂದು ಉಪದೇಶಿಸುತ್ತಾರೆ. ಶ್ರೀ ಬಾಲಶಿವಯೋಗಿ ಗುರುಶಾಂತ ಶಿವಾಚಾರ್ಯರರು ಹಿಂದು ಧರ್ಮದವರಿದ್ದು, ಒಂದು ಪಂಗಡಕ್ಕೆ ಅಂಟಿಕೊಂಡರೂ ಇವರು ಪರಧರ್ಮ ಸಹಿಷ್ಣುಗಳು. ಎಲ್ಲ ಧರ್ಮದವರೂ, ಎಲ್ಲ ಮತೀಯರೂ ನೆಮ್ಮದಿಯಾಗಿ, ಆತ್ಮೀಯತೆಯಿಂದ ಬಾಳಬೇಕೆಂದೇ ಇವರ ಹಿರಿಯಾಸೆ.

ಇವರಿಗೆ ಆನಂದನಾಮ ಸಂವತ್ಸರ ಶಕೆ ೧೮೯೬ ಭಾದ್ರಪದ ಮಾಸ ಶುಕ್ಲ ೧೨ ಕ್ಕೆ ಅರವತ್ತು ವರ್ಷಗಳು ಮುಗಿದವು. ಆದರೂ ಇವರು ಮೂವತ್ತು ವರ್ಷದ ತರುಣರಂತೆ ಕಾರ್ಯವನ್ನು ಮಾಡುತ್ತಲಿದ್ದಾರೆ. ಇವರಲ್ಲಿ ದಣಿವು ಎಂಬುದು ಎಲ್ಲಿಯೂ ಸುಳಿಯದು.

ಶ್ರೀ ಬಾಲಶಿವಯೋಗಿ ಗುರುಶಾಂತಶಿವಾಚಾ-ರ್ಯರು ತಮ್ಮ ಶಕ್ತಿಸಾಹಸಗಳಿಂದಲೇ ಹಿರಿಯರೆನಿ-ಸಿದ್ದಾರೆ. ಇಂದು ಅರವತ್ತನ್ನು ದಾಟುವ ಇವರು ನೂರನ್ನೂ ದಾಟಲಿಯೆಂದು ಆ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ನಿರೂಪಕ : ವೆ. ಮ. ಪಠಾಣ
ಕನ್ನಡ ಶಾಲೆ, ಅಕ್ಕಲಕೋಟ.

# ಕರ್ಮಯೋಗಿ.... ●●●

— ಶ್ರೀ ಷ. ಬ್ರ. ಷಡಕ್ಷರ ಶಿವಾಚಾರ್ಯ
ಸಂಸ್ಥಾನಮಠ, ಶಿರಾಢೋಣ.

ಜಗತ್ತಿನಲ್ಲಿ ಪ್ರತಿಯೊಂದು ಸಜೀವ ಪ್ರಾಣಿಗೆ ಹುಟ್ಟು ಸಾವುಗಳು ಅಂಟಿಕೊಂಡಿಯೇ ಇರುತ್ತವೆ. ಇಂಥ ಪ್ರಾಣಿಗಳಲ್ಲಿ ಮನುಷ್ಯಪ್ರಾಣಿಯೂ ಒಂದಾಗಿದೆ. ಆದರೆ ಪ್ರತಿಯೊಂದು ಪ್ರಾಣಿಗಿಂತಲೂ ಮನುಷ್ಯ ಪ್ರಾಣಿಗೆ ಹೆಚ್ಚು ಮಹತ್ವ ಕೊಡಲಾಗಿದೆ. ಕಾರಣ ಇದಕ್ಕೆ ಬುದ್ಧಿವಂತಿಕೆ ಸಾರಾಸಾರಾ ವಿಚಾರಮಾಡತಕ್ಕ ಶಕ್ತಿ, ಸುಖ, ದುಃಖಗಳ ಅರಿವೆ ಹಾಗೂ ಮಾನ ಮರ್ಯಾದೆಗಳ ತಿಳಿವಳಿಕೆ ಇರುತ್ತದೆ. ಇದರಲ್ಲಿ ಅನೇಕರು ಮಹಾತ್ಮರಾಗಬಹುದು ಅಥವಾ ಮಂಕ-ರಾಗಬಹುದು. ಮಹಾತ್ಮರಾದರೂ ಮಹಾತ್ಮರಲ್ಲಿ ಮಹಾತ್ಮರು. ಇದೇ ಪ್ರಕಾರ ಮಹಾತ್ಮರಲ್ಲಿ ಮಹಾತ್ಮ ರೆಂದರೆ, “ ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳು ಹಿರೇಜೇವರಗಿ ” ಒಬ್ಬರು.

ಇವರು ಭಕ್ತ ರಕ್ಷಣೆಗಾಗಿ, ಭಕ್ತರ ಉದ್ಧಾರಕ್ಕಾಗಿ ಹಗಲಿರುಳೂ ಅನೇಕ ಕಾರ್ಯಗಳನ್ನು ಮಾಡುತ್ತಲಿ-ದ್ದಾರೆ. ಇಂದು ಅವನ್ನು ನಾವು ಪೆನ್ನಿನಿಂದ ಹಾಳೆಯ ಮೇಲೆ ಬರೆಯಬೇಕಾದರೆ ಆಕಾಶದಲ್ಲಿ ಚುಕ್ಕೆಗಳನ್ನು ಎಣಿಸಿದಂತಾಗುತ್ತದೆ. ಹೇಳುವ ತಾತ್ಪರ್ಯವೇನಂದರೆ ಇವರನ್ನು ಎಷ್ಟು ವರ್ಣಿಸಿದರೂ ಕಡಿಮೆ ಆದರೂ ಅಲ್ಪಮಟ್ಟಿಗೆ ಬರೆಯಬೇಕಾದರೆ ಇವರಿಂದ ನೈತಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ಕಾರ್ಯಗಳು ಅನೇಕ ಜರುಗಿಸಲ್ಪಟ್ಟವೆ. ಜರಗುತ್ತಾ ನಡೆದಿವೆ.

ಇವರು ಮಾಡಿದ ಸಾಮಾಜಿಕ ಕಾರ್ಯಗಳ ಬಗ್ಗೆ ಹೇಳಬೇಕಾದರೆ ಇವರು ನಿಜವಾಗಿಯೂ ಸಮಾಜದ ಹಿತಚಿಂತಕರು, ಹಿತೋಪದೇಶಿಗಳು, ಹಿತಕರ್ತರು, ಅಂತೆಯೇ ಇವರು ಸ್ಥಾಪಿಸಿದ, ಇವರು ನಡೆಸಿದ ಜೇವರಗಿಯ ಶಾಂತಲಿಂಗೇಶ್ವರ ಹಾಗೂ ದುಧನಿ ಸಿದ್ಧೇಶ್ವರ ಹೈಸ್ಕೂಲಗಳು ಇಂದು ನಮ್ಮೆದು-ರಿಗೆ ಪ್ರಜ್ವಲಿಸುತ್ತಿವೆ.

ಇನ್ನು ಇವರ ಧಾರ್ಮಿಕ ಕಾರ್ಯಗಳ ಬಗ್ಗೆ ಹೇಳಬೇಕಾದರೆ, ಇವರು ಕಠೋರ ನಿಷ್ಠಾವಂತರು. ಪೂಜಾನಿಷ್ಠರು ಇವಲ್ಲದೆ ಇವರು ಭಕ್ತರ ರಕ್ಷಣೆಗಾಗಿ ಬಾಲ್ಯಾವಸ್ಥೆಯಿಂದಲೇ ಅನೇಕ ಉಗ್ರತಪಸ್ಸುಗಳನ್ನು ಮಾಡಿರುತ್ತಾರೆ.

ಅವು ಯಾವುವೆಂದರೆ ಅಕ್ಕಲಕೋಟದಲ್ಲಿ ಫತ್ತೆ ಸಿಂಹ ಬಗೀಚದಲ್ಲಿ, ಕಾಳಿಕಾಭವಾನಿ ಗುಡ್ಡದಲ್ಲಿ ಹಾಗೂ ಜೇವರಗಿಯ ವಾಡೆತೋಟದಲ್ಲಿ. ಇನ್ನೂ ಅನೇಕ ಕಠಿಣ ಸ್ಥಳಗಳಲ್ಲಿ ಉಗ್ರಾನುಷ್ಠಾನಗಳನ್ನು ಮಾಡಿರುತ್ತಾರೆ. ಇವರು ಭೀಷ್ಮ ಬ್ರಹ್ಮಚಾರಿಗಳಿರು ವದರಿಂದ ಅಪಾರ ಶಕ್ತಿಯುಳ್ಳವರಾಗಿದ್ದಾರೆ.

ದಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ
ಮಮುಏಕೇನ ಯೋಗದಂಡೆನ ಸರ್ವಸೈನ್ಯ ಹತ್ಯಾಮಹಂ

ಅರ್ಥ :– “ ರಾಜನೇ ದಶದಿಕ್ಕುಗಳ ಹಾಗೂ ನಿನ್ನ ಅಶ್ವದಳ, ಕಾಲ್ದಳ, ಗಜದಳಗಳ ಮೊದಲಾದುವೆಲ್ಲ ಸರ್ವಸೈನ್ಯದ ಬಲಕ್ಕೆ ನನ್ನ ಬ್ರಹ್ಮಚರ್ಯದ ತೇಜಸ್ಸಿನ ಬಲದಿಂದ ನನ್ನ ಒಂದೇಒಂದು ಯೋಗದಂಡದಿಂದ ನಾಶಗೊಳಿಸುವೆನು. ”

ಎಂದು ಈ ಮಾತನ್ನು ಹರ್ಷವರ್ಧನನು ಒಮ್ಮೆ ಯುದ್ಧದ ಸಮಯದಲ್ಲಿ ಋಷಿಯ ಸ್ಥಾನವನ್ನು ತೆಗೆದು ಕೊಳ್ಳಲು ಪ್ರಯತ್ನಿಸುತ್ತಿರುವಾಗ ಋಷಿಯು ಹೇಳಿದ ಮಾತಿದು. ಇದೇ ಪ್ರಕಾರ ಶ್ರೀಗಳವರು ಶಕ್ತಿವಂತ ರಾದವರಾಗಿದ್ದಾರೆ ಎನ್ನುವಲ್ಲಿ ಸಂದೇಹವಿಲ್ಲ.

ಇಂಥ ಮಹಾಪುರುಷರೆಂದೇ ಅಕ್ಕಲಕೋಟ, ಜೇವರಗಿ, ದುಧನಿ ಮೊದಲಾದ ಕಡೆಗಳ ಶಿಷ್ಯವೃಂದವು ಕೂಡಿ ಷಷ್ಠ್ಯಬ್ಧಿಯನ್ನು ನೆರವೇರಿಸುತ್ತಿದ್ದಾರೆ.

ಇದೊಂದೇ ಷಷ್ಠ್ಯಬ್ಧಿಯಲ್ಲದೆ ಶ್ರೀಗಳವರ ಇನ್ನೊಂದು ಷಷ್ಠ್ಯಬ್ಧಿಯನ್ನಾಚರಿಸುವಂತೆ ಈಶನು ಅವರಿಗೆ ದೀರ್ಘಾಯುಷ್ಯವನ್ನೀಯಲೆಂದು ಪ್ರಾರ್ಥಿಸುವೆ

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ವೀರಶೈವ ಮತಪ್ರಸಾರ

ಲೇಖಕಿ : ಕುಮಾರಿ ನಾಗಮ್ಮ ಕಲ್ಯಾಣಪ್ಪ ಮಂಠಾಳ, ಅಕ್ಕಲಕೋಟ.

ಪಂಚಜಗದ್ಗುರುಗಳಾದ ಶ್ರೀ ರೇವಣಾರಾಧ್ಯ, ದಾರುಕಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯರು ಪಂಚಶಿವಲಿಂಗಗಳಿಂದ ಉದಯಿಸಿ ಯುಗಯುಗಾಂತರದಲ್ಲಿ ಪರಮ ಪವಿತ್ರವಾದ ಶ್ರೀ ವೀರಶೈವ ಮತವನ್ನು ಸ್ಥಾಪಿಸಿದರೆಂದು ಶಿವಾಗಮಗಳು ಘಂಟಾಘೋಷವಾಗಿ ಸಾರುತ್ತಲಿವೆ. ಇವರು ಪರಮೇಶ್ವರನ ಆಪ್ಪಣೆಯ ಪ್ರಕಾರವಾಗಿ ಭೂಮಂಡಲದಲ್ಲಿ ದಿವ್ಯದೇಹಧಾರಿಗಳಾಗಿ ಶಿವಲಿಂಗ-ಗಳಿಂದುದಯಿಸಿ ಭೂಮಂಡಲದಲ್ಲಿ ಸಂಚಾರಮಾಡಿ ಶಿವನೇ ಸರ್ವೋತ್ತಮನೆಂದೂ ಶಿವನ ಹೊರತಾಗಿ ಅನ್ಯದೇವತೆಗಳೆಲ್ಲ ಗೌಣವೆಂದೂ ಪರಶಿವನಿಂದಲೇನೆ ವಿಶ್ವನಿರ್ಮಾಣಹೊಂದಿತೆಂದೂ ಪ್ರತಿಯೊಬ್ಬನು ಪರ-ಮೇಶ್ವರನ ಪೂಜೆಯಲ್ಲಿ ಆಸಕ್ತನಾಗಿ ಶಾಶ್ವತ ಸುಖವನ್ನನುಭವಿಸಬೇಕೆಂದೂ ಭೂಮಂಡಲದ ಯಾವತ್ತು ಜನರಿಗೆ ಬೋಧೆಮಾಡಿದರು.

ಭಾರತದಲ್ಲಿ ಎಲ್ಲಾ ಕಡೆಗಳಲ್ಲಿಯೂ ಇಂದು ನಾವು ಶಿವಾಲಯಗಳನ್ನು ನೋಡಬಹುದು. ಪ್ರತಿ-ಯೊಂದು ನದಿಗಳ ದಂಡೆಯ ಮೇಲೆಯೂ ಶಿವಾಲಯಗಳನ್ನು ಕಾಣಬಹುದು. ಶಿವಾಲಯವಿಲ್ಲದ ಗ್ರಾಮವೇ ಇಲ್ಲವೆಂದು ಧಾರಾಳವಾಗಿ ಹೇಳಬಹುದು. ಇದಕ್ಕಾಗಿ, "ಶಿವಾಲಯವಿಲ್ಲದ ಊರಿಗೂ ಭಸ್ಮವಿಲ್ಲದ ಹಣೆಗೂ ಧಿಕ್ಕಾರವಿರಲಿ" ಎಂದು ಶೃತಿವಚನವಿದೆ. ಪ್ರಾಚೀನ ಸಂಸ್ಕೃತಿಗಳಲ್ಲಿ ಖ್ಯಾತಿಹೊಂದಿದ ಇಜಿಪ್ತ ಮತ್ತು ಮೆಸಪೊಟೇಮಿಯಾ ದೇಶಗಳಲ್ಲಿಯೂ ನಾವು ಅನೇಕ ಶಿವಲಿಂಗಗಳನ್ನು ಕಾಣಬಹುದು. ಮುಸಲ್ಮಾನರಿಗೆ ಪರಮ ಪವಿತ್ರ ಯಾತ್ರಾಸ್ಥಳವಾಗಿರುವ ಮಕ್ಕಾ ಕ್ಷೇತ್ರದಲ್ಲಿ ಮಕ್ಕೇಶ್ವರ ಲಿಂಗವಿರುವದನ್ನು ಆದನ್ನು ಪೂಜಿಸಿ-ದವನೇ ಹಾಜಿಯಾಗುವನೆಂದು ಖಚಿತವಾಗಿ ನಮಗೆ ತಿಳಿದುಬಂದಿದೆ. ಈ ಲಿಂಗವು ಕರಿ ಶಿಲೆಯಿಂದ ನಿರ್ಮಿತವಾದುದ್ದಾಗಿದೆ.

ಪುಣ್ಯಭೂಮಿಯಾದ ಭರತಖಂಡದ ಎಲ್ಲ ಮೂರ್ತಿಗಳ ತಲೆಯಲ್ಲಿ, ಕಂಠದಲ್ಲಿ ಇಲ್ಲವೆ ಕೈಯಲ್ಲಿ ಲಿಂಗವಿದ್ದದ್ದು ಕಂಡುಬರುತ್ತದೆ. ಕೊಲ್ಹಾಪುರದ ಮಹಾಲಕ್ಷ್ಮೀ, ತುಳಜಾಪುರದ ಭವಾನಿ, ಪಂಢರಪುರದ ವಿಠ್ಠಲ, ಕಾಂಚಿಯ ಕಾಮಾಕ್ಷಿಯ ಮಸ್ತಕದಲ್ಲಿ ಲಿಂಗವಿರುವದನ್ನು ನಾವು ಪ್ರತ್ಯಕ್ಷವಾಗಿ ಕಾಣುತ್ತೇವೆ. ಶ್ರೀರಾಮಚಂದ್ರನೂ ಕೂಡ ರಾವಣನ ವಧೆಯ ಸಲು-ವಾಗಿ ರಾಮೇಶ್ವರದಲ್ಲಿ ಶ್ರೀ ಶಿವಲಿಂಗವನ್ನು ಪ್ರತಿಷ್ಠಾ-ಪಿಸಿದನೆಂದು ಪುರಾಣ ಗ್ರಂಥಗಳಿಂದ ತಿಳಿದುಬರುತ್ತದೆ.

ಶ್ರೀ ವೀರಶೈವ ಸಿದ್ಧಾಂತದಲ್ಲಿ ಶಿವಶಕ್ತಿಯರ ಸಂಬಂಧ ಹೇಳಲಾಗಿದ್ದು ಶಿವಶಕ್ತಿಯರನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಸೂರ್ಯನ ಪ್ರಖರತೆ, ಚಂದ್ರನ ಶೀಲತೆ, ಅಗ್ನಿಯ ಉಷ್ಣತೆ, ಸಾಗರದ ಗಾಂಭೀರ್ಯ ಕುಸುಮದ ಸುಗಂಧ, ಸಕ್ಕರೆಯ ರುಚಿ ಹಾಲಿನಲ್ಲಿರುವ ತುಪ್ಪ, ಯಾವ ರೀತಿಯಾಗಿ ಅವಿನಾಭಾವದಿಂದ ಕೂಡಿಕೊಂಡಿರುವವೋ ಅದೇ ರೀತಿಯಾಗಿ ಶಿವಶಕ್ತಿಯರು ಕೂಡಿಕೊಂಡಿದ್ದಾರೆ. ಸ್ಥೂಲದೇಹದ ಮೇಲೆ ಧಾರಣಮಾಡುವದು ಇಷ್ಟಲಿಂಗ, ಸೂಕ್ಷ್ಮಶರೀರದ ಮೇಲೆ ಧಾರಣ ಮಾಡುವದು ಪ್ರಾಣಲಿಂಗ, ಮತ್ತು ಕಾರಣ ಶರೀರದ ಮೇಲೆ ಧಾರಣಮಾಡುವದು ಭಾವಲಿಂಗವಾಗಿದೆ. ವೀರಶೈವನಾದವನಿಗೆ ಗುರು, ಲಿಂಗ,

ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ ಎಂಬ ಅಷ್ಟಾವರಣವು ಅವಶ್ಯವಾಗಿ ಬೇಕು. ಗುರು: ಲಿಂಗ ಜಂಗಮಕ್ಕೆ ಅರ್ಪಣೆಮಾಡಿದ ಪ್ರಸಾದವನ್ನು ಸ್ವೀಕರಿಸಿ ವೀರಶೈವನು ಸುಖಿಯಾಗ ಬೇಕು. ಇಂದಿನ ಕಾಲದಲ್ಲಿ ಸುಶಿಕ್ಷಿತ ಜನರಲ್ಲಿ ಭಕ್ತಿ ಭಾವ ಅಳಿಯುತ್ತ ನಡೆದಿದೆ. ಪರಕೀಯರ ವೇಷ–ಭೂಷಣಗಳಿಗೆ ಬಲಿಯಾದ ಇವರನ್ನು ಕಂಡು ಯಾರಿಗೆ ತಾನೆ ದುಃಖವೆನಿಸಲಿಕ್ಕಿಲ್ಲ? ಅದಕ್ಕಾಗಿ ಪ್ರತಿಯೊಬ್ಬರು ಅಷ್ಟಾವರಣ, ಪಂಚಾಚಾರ, ಷಟಸ್ಥಲಗಳನ್ನು ಆಚರಿಸಿ ವೀರಶೈವತ್ವವನ್ನು ನೆಲೆಗೊಳಿಸಲು ಯತ್ನಿಸಬೇಕು. ಡಾಂಭಿಕ ಗುರುಗಳನ್ನು ನಂಬಬಾರದು. ವೀರಶೈವ ಮತಸ್ಥಾಪಕರಾದ ಜಗದಾದಿ ಜಗದ್ಗುರು ಪಂಚಾಚಾರ್ಯರ ಪಂಚಪೀಠಗಳ ಸೂತ್ರಕ್ಕೆ ಸಂಬಂಧಪಟ್ಟ ಹಿರೇಮಠದ ಪಟ್ಟಾಧ್ಯಕ್ಷರೇ ಗುರುಗಳೇ ಹೊರತಾಗಿ ಅನ್ಯರು ಯಾರೂ ಆಗಲಾರರು. ಇಂದಿನ ದಿನ ವೀರಶೈವರಿಗೆ ತಮ್ಮ ಸೂತ್ರಗಳು ಗೋತ್ರಗಳು ಗೊತ್ತಿಲ್ಲ. ಹೀಗಾಗಿ ಸಗೋತ್ರಿಯ ವಿವಾಹವಾದ ಉದಾಹರಣೆಗಳಿವೆ. ಇದು ಅವರ ತಪ್ಪಲ್ಲ- ಇದನ್ನು ತಿಳಿಸುವ ಗುರುಮೂರ್ತಿಗಳು ಬೇಕು. ಸರಿಯಾಗಿ ತಿಳುವಳಿಕೆ ಇಲ್ಲದಮೂಲಕವಾಗಿಯೇ ವೀರಶೈವರು ಅನ್ಯಮತೀಯರಲ್ಲಿ ಹೋಗುವದುಂಟು. ಅನೇಕ ಸಾಧುಗಳಿಂದ ಉಪದೇಶ ಹೊಂದಿದ ದುರ್ದೈವಿ ಘಟನೆಗಳುಂಟು. ಆದುದರಿಂದ ಇನ್ನು ಮುಂದಾದರೂ ನಮ್ಮ ಜನರು ಮೂಲ ಮತಸ್ಥಾಪಕರಾದ ಜಗದ್ಗುರು ಪಂಚಾಚಾರ್ಯರನ್ನು ಮರೆಯಬಾರದು. ಅವರ ಬೋಧಾಮೃತವನ್ನು ಸದಾಕಾಲ ಪಾನಮಾಡುತ್ತ ಸದ್ಗುರುವಿನ ಪಾದತೀರ್ಥವನ್ನು ಸೇವಿಸುತ್ತ ಜೀವನ್ಮುಕ್ತರಾಗುವ ಯೋಗ ಜಗದ್ಗುರು ಪಂಚಾಚಾರ್ಯರು ತಂದುಕೊಡಲೆಂದು ಹಾರೈಸುವೆ.

ವೀರಶೈವ ಮತವು ವರ್ಧಿಂಗತವಾಗಲಿ. ಅದು ವಿಶ್ವಧರ್ಮವಾಗಲಿ ಎಂದು ಹೇಳಿ. ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ಎಂಬ ಘೋಷಣೆಯೊಂದಿಗೆ ನನ್ನ ಲೇಖನಿಗೆ ವಿರಾಮಗೊಳಿಸುತ್ತೇನೆ.

# ಪುಣ್ಯಜೀವಿ.

ಶ್ರೀ ಸದ್ಗುರು ಗುರುಶಾಂತ<br>
ಷಟಸ್ಥಲದೀ ಬ್ರಹ್ಮನ ।<br>
ಪಾದಕಮಲದಲ್ಲಿ ಚಿನ್ನ<br>
ರನ್ನ ಆವುದು ಅರ್ಪಣ ? ॥ ೧ ॥

ಗುರುವೆ ನಿನ್ನ ಪಾದಪಂಕಜ<br>
ದಲ್ಲಿ ಪೊಡಮಡು ವೀತನ ।<br>
ಅಂತರಂಗದಿ ಮೂಡಿ ಬಂದ<br>
ಕವನ ಕುಸುಮವೆ ಅರ್ಪಣ ॥ ೨ ॥

ಕರದಿ ಲಿಂಗ ಶಿರದಿ ಜಡೆಯು<br>
ಕಾಯ ಭಸ್ಮದ ಲೇಪನ ।<br>
ಪಠಿಸುತಿಹೆನು ಪಂಚವಕ್ಷರ<br>
ಮಂತ್ರ ಶಿವ ಸದ್ಗುರುವಿನ ॥ ೩ ॥

ಬಾಲಯೋಗಿ ಬ್ರಹ್ಮಚಾರಿ<br>
ಅಂತರಂಗದ ಆತ್ಮನ ।<br>
ಪೂಜೆ ಪುಣ್ಯ ಕಾರ್ಯದಿಂದ<br>
ಲಭಿಸುತಿಹುದು ಚಿನ್ಮನ ॥ ೪ ॥

ಹರನೆ ನರನಾಗಿಳೆಗೆ ಬಂದನು<br>
ಎಂಬ ಭಕ್ತರ ಭಾವನ ।<br>
ಬೋರಿ ತೀರದ ಪತ್ರಿವನದಲಿ<br>
ಕಾಲ ಕಳೆವನು ಪಾವನ ॥ ೫ ॥

ಅಂಗದಲ್ಲಿ ಲಿಂಗ ಧರಿಸಿ<br>
ಸಂಗ ಸುಖದಲಿ ಇರ್ಪನ ।<br>
ಕಂಗಳಲ್ಲಿ ಕಾಂಬುದಯ್ಯ<br>
ಜ್ಯೋತಿ ಸದಮಲ ಸಂಗನ ॥ ೬ ॥

ಕಾಮ ಕ್ರೋಧ ಲೋಭ ಅರಿಯದ
ಮಗುವಿನಂಥಾ ಮುಗ್ಧನ ।
ಪುಟ್ಟ ನಮಿಸಿದ ಜೀವಿಗಿಲ್ಲ
ದುರಿತ ಕರ್ಮದ ಲೇಪನ ॥ ೭ ॥

ಆರು ಗುಣಗಳು ಅಳಿದ ಮೇಲೆ
ಉಳಿಯುವದೇನು ಕಾಮನ ?
ಅಂಗವೇ ಲಿಂಗಾದ ಮೇಲೆ
ಬಯಸುವದೇನು ಈ ಮನ ? ॥ ೮ ॥

ಪಾಪಿಯಿಂದ ಪತಿತನಿಂದ
ಕೇಳಬಂದರೆ ಕ್ರಂದನ ।
ಹಿಂದೆ ನೋಡದೆ ಹಾರಿಬರುವನು
ಶಮನಕಾಗಿ ಮುಂದಿನ ॥ ೯ ॥

ನಿದ್ದೆ ನೀರು ಅನ್ನ ಅರಿವೆ
ಒಂದು ಮಾಡನು ಚಿಂತನ ।
ಜಗದ ದುಗುಡ ದೂರ ಸರಿದರೆ
ಅದುವೇ ಆತನ ಭೋಜನ ॥ ೧೦ ॥

ಜಗದಿ ನೆಮ್ಮದಿ ಶೀಲ ಸಾಹಸ
ಪ್ರಗತಿ ಹೊಂದಲಿ ಆತ್ಮನ ।
ಎಂದು ಶಿವನ ಮೂರ್ತಿ ಎದುರಿಗೆ
ಮಾಡುತಿಹನು ಪ್ರಾರ್ಥನ ॥ ೧೧ ॥

ಕಾಯಕವೆ ಕೈಲಾಸವೆಂಬ
ತತ್ವ ತಿಳಿದನು ಅಣ್ಣನ ।
ಮಾತನಾಡದೆ ಕೃತಿಯ ಗೈವೆನು
ಫಲಿಸಿತ್ತೈ ಸದ್ಭಾವನ ॥ ೧೨ ॥

ಏನು ಜೀವನ ಎಂಥ ಪಾವನ
ಹೇಗೆ ಮರೆಯಲಿ ಈತನ ।
ಪುಣ್ಯಗರ್ಭದಿ ಜನಿಸಿ ಬಂದ
ಬೋರಿತೀರದ ಯೋಗಿನ ॥ ೧೩ ॥

ಶಿವನ ಸತ್ಕಳೆ ರೂಪತೊಟ್ಟು
ಇಳೆಗೆ ಬಂದೀ ಗುರುವಿನ ।
ನಾಮಸ್ಮರಣೆ ಪಠಿಸುವಾತ್ಮಗೆ
ಲಭಿಸುದ್ಯೈ ಸುಖಜೀವನ ॥ ೧೪ ॥

ಸತ್ಯ ಶಾಂತ ವಿನಯಭರಿತ
ನೇಮ ನಿಷ್ಠಾ ಜೀವನ ।
ಆರು ಹತ್ತರ ವರುಷ ಗತಿಸಿ
ಬಾಳು ಬದುಕಿದೆ ಪಾವನ ॥ ೧೫ ॥

ಭಕ್ತಕೋಟಿ ತನ್ನ ಪಾಲಿನ
ಖುಷಿಯ ಖಣದ ಭಾಜನ ।
ತ್ರಿವಿಧ ಭಕ್ತಿರೂಪದಲ್ಲಿ
ಗುರುವೆ ನಿಮಗೆ ಬಾಗಿನ ॥ ೧೬ ॥

ಮತ್ತ ಮನ್ಮಥ ಪಾಪಿಗಳಿಗೆ
ತಿಳಿಯದಯ್ಯಾ ಗುರುವಿನ ।
ಲೀಲೆ ಮಾಯೆ ಕರುಣೆ ಕೋಪ
ಆವುದ್ಯೈ ಸತ್ಪುರುಷನ ॥ ೧೭ ॥

ನಾಮ ಪಾವನ ಪಠಿಸು ಹೇ
ಮನ ಜೀವರಗಿ ಗುರುಶಾಂತನ ।
ನರನರೂಪದಲ್ಲಿ ಇಳೆಗೆ
ಬಂದ ಗುರು ನಂಜುಂಡನ ॥ ೧೮ ॥

ಕೃಷಿಕ ಶಿಕ್ಷಕ ಧರ್ಮರಕ್ಷಕ
ರಲ್ಲಿ ಬೆಳೆಯಲಿ ಒಮ್ಮನ ।
ಎಂಬ ಹಂಬಲ ಹಮ್ಮಿಕೊಂಡಿದೆ
ಸಲ್ಲದ್ಯೈ ನಮಗಿಮ್ಮನ ॥ ೧೯ ॥

ನಿಷ್ಕಾಮ ಕರ್ಮ ಜೀವಿಯಾಗಿ
ಬೆಳೆದು ಬಂದ ಗುರುವಿನ ।
ಬಾಳುನೌಕೆ ನಡೆಸು ದೇವಾ
ನಲಿಯುವಂತೆ ಕಣ್ಮನ ॥ ೨೦ ॥

ಆಯುರಾರೋಗ್ಯವನು ಕೊಟ್ಟು
ಪಾಲಿಸೈ ಶಿವಯೋಗಿನ ।
ಎಂಬ ಪ್ರಾರ್ಥನೆ ಪಾದಪಂಕಜ
ದಲ್ಲಿ ಆ ಗೌರೀಶನ ॥ ೨೧ ॥

— ಸಿ. ಜಿ. ಸವುಗೊಂಡ, M. A., B. Ed. ಮುಧೋಳ.

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ನಾ ಕಂಡ ಸದ್ಗುರು

ಗುರುಬ್ರಹ್ಮ ಗುರುವಿಷ್ಣು, ಗುರುರ್ದೇವೋ ಮಹೇಶ್ವರಃ ।
ಗುರು ಸಾಕ್ಷಾತ್ ಪರಬ್ರಹ್ಮ, ತಸ್ಮೈ ಶ್ರೀಗುರುವೇ ನಮಃ ॥

++++~~~~++++

ಜಗತ್ತಿನ ಜೀವಕೋಟಿಗಳೆಲ್ಲ ಬದುಕಿ ಬಾಳಿ ಮುಕ್ತಿ ಹೊಂದುವದೇ ಜೀವನಚಕ್ರದ ಕೊನೆಯ ಗುರಿ. ಇದನ್ನರಿಯದೆ ಜೀವಿ ಭವಸಾಗರ ದಾಟಿ ದಡ ಮುಟ್ಟಲು ಅನೇಕ ಮಾರ್ಗಗಳಿದ್ದರೂ ನೋಡದೆ ಕಣ್ಮುಚ್ಚಿ ಕುಣಿಯುತ್ತಿರುವ ಮಾನವನಿಗೆ ಎಂದು ಸದ್ಬುದ್ಧಿ ಬರುವದೋ ಬಲ್ಲವರಾರು? ಬಂದೀತು ಬುದ್ಧಿಯುಲ್ಲದವನು ಬಾಳಲು ಸಾಧ್ಯವೆ? ಇಲ್ಲ. ಅಂದ ಮೇಲೆ ಅವನೇಕೆ ಬುದ್ಧಿವಂತನಾಗುತ್ತಿಲ್ಲ? ಅದಕ್ಕೆ ಅನೇಕ ಕಾರಣಗಳಿವೆ. ಅವೇ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ. ಅಲ್ಲದೆ ತ್ರಿಗುಣ ಗಳೂ ಇದರಲ್ಲಿ ಅಡಗಿವೆ. ಇವೆಲ್ಲ ಒಟ್ಟಿಗೆ ದಾಳಿ ಮಾಡಿ ಮಾನವನನ್ನು ಕಾಡುದಾರಿಗೊಯ್ಯುತ್ತಿವೆ- ಜೀವನದಲ್ಲಿ ಸುಖಕ್ಕಿಂತ ದುಃಖಗಳೇ ಹೆಚ್ಚಾಗಿವೆ. ಇದನ್ನೇ ಶಿವಶರಣರು "ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ" ಎಂದು ನುಡಿದಿದ್ದಾರೆ. ಆದರೂ ಮಾನವ ನಿಜವಾದ ಸುಖ ಯಾವುದೆಂಬುದನ್ನು ಅರಿಯದೇ ಬೇಸಿಗೆಯಲ್ಲಿ ನೀರ್ಗುದುರೆಯನ್ನು ಕಂಡು ಮೂಕಪ್ರಾಣಿಗಳು ನೀರೆಂದು ಭಾವಿಸಿ ಓಡಿ ಓಡಿ ದಣಿಯುವಂತೆ ಮಾನವನು ನೈಜಸುಖದ ಮಾರ್ಗವ ನ್ನರಿಯದ ತೊಳಲಾಡಿ ಕೊನೆಗೆ ಇಹದಲ್ಲೂ, ಪರದಲ್ಲೂ ಸುಖವಿಲ್ಲದವನಾಗುತ್ತಾನೆ. ಕಾರಣ ಅವನಿಗೆ ಸುಖ ದುಃಖಗಳ ಸರಿಯಾದ ಜ್ಞಾನದ ಅಭಾವ.

ಇಂಥ ಮಾನವಕೋಟಿಯನ್ನು ಉದ್ಧರಿಸಿ ಜಗತ್ತಿನಲ್ಲಿ ಧರ್ಮನ ಪತಾಕೆ ಹಾರಿಸಿ ನಿಜಮೋಕ್ಷದ ದಾರಿ ತೋರಿಸುವವನೇ ಗುರು. ಅವನು ಸರ್ವರಿಗೂ ಸರ್ವಕಾಲದಲ್ಲೂ ದೇವನು. ಈತನ ಕೃಪಾದೃಷ್ಟಿಯೇ ಮಾನವನನ್ನು ದುಃಖದಿಂದ ಸುಖದೆಡೆಗೆ ಒಯ್ಯ ಬಲ್ಲದು. ಅಂತೆಯೇ ನಮ್ಮ ಪೂರ್ವಿಕರು "ಹರ ಮುನಿದರೂ ಗುರು ಕಾಯ್ವ" ಎಂಬ ಮಾತನ್ನು ಬರೆದಿದ್ದಾರೆ. ಇದನ್ನು ನೋಡಿ ಅನುಭವಿಸಿ ಅರಿತರೂ ಮಾನವ ಜನಾಂಗ ಇನ್ನೂ ತನ್ನ ಅಜ್ಞಾನದಲ್ಲಿಯೇ ಬಳಲಿ ಬೆಂಡಾಗುತ್ತಿದೆ. ಇದನ್ನರಿತ ಗುರುವೃಂದ ನೊಂದು ಭಕ್ತನನ್ನು ಉದ್ಧರಿಸಿ ಅವನಿಗೆ ಮೋಕ್ಷ ಮಾರ್ಗದ ತಿಳುವಳಿಕೆ ಕೊಡುವಕಾರ್ಯ ಕೈಗೊಂಡಿದೆ. ಆದರೂ ಪ್ರಪಂಚವೆಂಬ ಮಾಯೆಯ ಪರದೆಯಿಂದ ಹೊರಬರಲು ಮಾನವನಿಗೆ ಆಗುತ್ತಿಲ್ಲ. ಏಕೆ? ಏಕೆ?? ಏಕೆ??? ಇದು ಅವನ ಕರ್ಮವೋ ಕಾಲದ ಮಹಿ-ಮೆಯೋ ತಿಳಿಯಲೊಲ್ಲದು.

ಇದನ್ನೆಲ್ಲ ಪರಾಮರ್ಶಿಸಿ ಇಂದಿನ ಜಗತ್ತಿನೆಡೆ ನೋಡಲಾಗಿ ಅದೂ ಯಾವದೋ ತಪ್ಪುಹಾದಿಯ ಮೇಲೆ ನಡೆದಿದೆ ಎಂಬುದು ವಿದಿತವಾಗುತ್ತಿದೆ. ಅಂತ-ರ್ಧಾನದಿಂದಲೂ ಬಹಿರಂಗ ದೃಷ್ಟಿಯಿಂದಲೂ ವೀಕ್ಷಿಸಿದ ಗುರುವೃಂದವು ಜಗತ್ತಿನಲ್ಲೆಲ್ಲ ಸಂಚರಿಸಿ ಜನರ ಮನೋಭಾವನೆಗಳನ್ನೆಲ್ಲ ತಿದ್ದಿ ಅವರಿಗೆ ಸರಿಯಾದ ತಿಳುವಳಿಕೆ ಕೊಟ್ಟು ಮುಕ್ತಿಮಾರ್ಗ ತೋರಿ ಸುತ್ತಿದ್ದಾರೆ. ಆದ್ದರಿಂದಲೇ ಎಂದೋ ನಾಶವಾಗ-ಬೇಕಾಗಿದ್ದ ಜಗತ್ತು ಇಂದು ಇನ್ನೂ ಉಳಿದಿದೆ. ಇದರ ಮೂಲ ಮಾನವನು ದೇವಸ್ವರೂಪನಾಗಿರುವ ಗುರುವೇ ಎಂದು ಬೇರೆ ಹೇಳಬೇಕಾಗಿಲ್ಲ. ಇಷ್ಟಲ್ಲದೆ ಅನೇಕ ಗುರುಗಳು ಹಳ್ಳಿಯಲ್ಲಿಯೇ ವಾಸವಾಗಿ

ಜನರಲ್ಲಿ ಬೆರೆತು ಅವರ ಮಳ್ಳತನ ಕೊಳ್ಳೆಹೊಡೆದು ಸುಳ್ಳರನ್ನು ಸತ್ಯವಂತರನ್ನಾಗಿಯೂ, ವಂಚಕರನ್ನು ನಿರ್ವಂಚಕರನ್ನಾಗಿಯೂ, ಕೋಪಿಷ್ಟರನ್ನು ಶಾಂತರನ್ನಾಗಿಯೂ, ಕಳ್ಳಕೊರಮರನ್ನು ಸುಜನರನ್ನಾಗಿಯೂ ಮಾಡುತ್ತಿದ್ದಾರೆ. ಜನಸೇವೆಯಲ್ಲಿಯೇ ಈಶನನ್ನು ಕಾಣುತ್ತಿದ್ದ ನಮ್ಮ ಗುರುವೃಂದದ ಮಹೋಪಕಾರ-ವನ್ನು ನಾವೆಷ್ಟು ಜನ್ಮ ಅವತರಿಸಿ ಬಂದು ತೀರಿಸಿ-ದರೂ ಸಾಲದು.

ಶರೀರ ಸ್ಥಿರವಿಲ್ಲ, ಅದು ಅಸ್ಥಿರ. ಆತ್ಮವೊಂದೇ ಚಿರಸ್ಥಾಯಿ. ಅದನ್ನು ನಂಬಿ ಅದರ ಉನ್ನತಿಗಾಗಿಯೇ ದುಡಿಯಿರಿ ಎಂದು ಬೋಧಿಸುವ ಗುರು ಮಾತು ವೇದ್ಯ. ಇಂಥ ಸುಸಮಯಗಳನ್ನು ಆಗಾಗ ಊರಲ್ಲಿ ತಂದುಕೊಟ್ಟು ಜನರು ತಪ್ಪುದಾರಿಯಿಂದ ಸರಿದಾರಿಗೆ ಬರುವಂತೆ ಮಾಡುತ್ತಿದ್ದಾರೆ. ಜಗದ ಕಲ್ಯಾಣವೇ ತಮ್ಮ ಜೀವನದ ಪರಮ ಗುರಿಯೆಂದು ಭಾವಿಸಿ ದುಡಿಯುತ್ತಿದ್ದಾರೆ. ಲೌಕಿಕದ ಆಡಂಬರಕ್ಕೆ ಮೆಚ್ಚಿ ಹಣವನ್ನು ನೆಚ್ಚಿ ಬಚ್ಚಲು ಕುಣಿಯಲ್ಲಿ ಬಿದ್ದ ನರ ಕುರಿಗಳನ್ನು ಉದ್ಧರಿಸುತ್ತಿದ್ದಾರೆ. ಇಂಥ ಮಹಾ ಮಹಿಮರಲ್ಲಿ ನಮ್ಮ ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯರೊಬ್ಬರು ಎಂದು ಅವರನ್ನು ಕಂಡು ಮಾತನಾಡಿದ ಎಲ್ಲರಿಗೂ ವಿದಿತವಾಗುತ್ತದೆ. ಏಕೆಂದರೆ ನಾನು ಗುರುವೆಂದು ಹೇಳಿ ಕಾವಿಬಟ್ಟೆ ಧರಿಸಿ ಜನರನ್ನು ನಾನಾರೀತಿಯಿಂದ ಸುಲಿದು ಸುಲಿಗೆದಾರರ ನಾಯಕ-ರೆಷ್ಟೋ ನಮ್ಮ ದೇಶಗಳಲ್ಲಿದ್ದಾರೆ. ಅದನ್ನು ಆತ್ಮಜ್ಞಾನದ ಅಭಾವವಿದ್ದ ನಮ್ಮ ಜನ ತಿಳಿಯದೆ ಅವರನ್ನೇ ನಂಬು ತ್ತಾರೆ. ಅವರ ಸೇವೆ ಮನಮುಟ್ಟಿ ಮಾಡುತ್ತಾರೆ. ಅವರಲ್ಲಿದ್ದ ಮೂರ್ಖತನವನ್ನು ಹೇಸಿ ಗುಣಗಳನ್ನು ಕಲಿಯುತ್ತಾರೆ. ಇದರಿಂದ ಮಾನವನು ದೇವನಾಗದೆ ದಾನವನಾಗುತ್ತಿದ್ದಾನೆ. ಈ ದಾನವೀಯತೆಯನ್ನು ಹೋಗಲಾಡಿಸಿ ಮಾನವೀಯತೆಯ ಜ್ಞಾನನೀಡಿ ದೇವತನದ ಸುಮಾರ್ಗ ನೀಡುತ್ತ ಸದಾ ಲೋಕಪುಣ್ಯ ಗೈಯುತ್ತಿರುವ ಶ್ರೀ ಗುರುಶಾಂತ ಶಿವಾಚಾರ್ಯರು ಆರಾಧ್ಯರು.

ಶ್ರೀ ಗುರುಶಾಂತ ಶಿವಾಚಾರ್ಯರು ಬಾಲಬ್ರಹ್ಮ-ಚಾರಿಯಾಗಿದ್ದು ಶಾಂತರೂ, ಮಹಾತಪಸ್ವಿಗಳೂ ಆಗಿದ್ದಾರೆ. ಇವರು ತಮ್ಮನ್ನೇ ದೇವನಲ್ಲಿ ಸಮರ್ಪಿಸಿದ ಮಹಾಸಾಧುಗಳಾಗಿದ್ದಾರೆ. ಇವರ ತಪಃಪ್ರಭಾವದಿಂದ ಅನೇಕ ಪವಾಡಗಳು ಜರುಗಿವೆ. ಅವನ್ನೆಲ್ಲ ವರ್ಣಿಸು-ವದು ಹುಲುಮಾನವನಾದ ನನ್ನಿಂದ ಸಾಧ್ಯವಿಲ್ಲ. ಅಲ್ಲದೆ ವರ್ಣನೆಗೆ ನಮ್ಮ ಗುರುಗಳೂ ಬಹಳ ದೂರವಿದ್ದಾರೆ. ಇದೇ ಗುಣದಿಂದ ನಾವು ಅವರ ನಿರ್ಲಿಪ್ತತೆಯನ್ನು ಅರಿಯಬಹುದು. ಅವರು ಜನರನ್ನು ಉದ್ದೇಶಿಸಿ. ನನ್ನದೆಂಬುದೆಲ್ಲವೂ ನಿಮ್ಮದು ನಿಮ್ಮದೆಲ್ಲವೂ ನನ್ನದು ನಮ್ಮೆಲ್ಲರದ್ದು ಆ ಪರಶಿವ ಪರಬ್ರಹ್ಮನದು. ನಮ್ಮ ದಿನದ ಕಾರ್ಯಗಳನ್ನೆಲ್ಲ ಅವಲೋಕಿಸುತ್ತಿರುವ ಆ ಪರಶಿವನನ್ನು ಧ್ಯಾನಿಸಿ ಕಾರ್ಯೋನ್ಮುಖರಾಗ ಬೇಕೆಂದು ಬೋಧಿಸುವ ಅವರ ಅಮೃತವಾಣಿ ಎಂಥ ನಾಸ್ತಿಕನನ್ನೂ ಆಸ್ತಿಕನನ್ನಾಗಿಸುತ್ತದೆ. ಮಾಡಿಸುವ-ವನೂ ಅವನೆ, ನೋಡುವವನೂ ಅವನೆ, ನಾವೆಲ್ಲ ಅವನು ಕುಣಿಸಿದಂತೆ ಕುಣಿಯುವ ಬೊಂಬೆಗಳು. ಆದ್ದರಿಂದ ನಾವು ಮಾನವೀಯತೆಯನ್ನು ಅರಿತು ಅದರ ಶ್ರೇಷ್ಠತೆಯನ್ನುಮುಟ್ಟಿ ದೇವತ್ವವನ್ನು ಹೊಂದು ವದೇ ನಮ್ಮ ಏಕೈಕ್ಯ ಗುರಿಯಾಗಬೇಕೆಂಬುದನ್ನು ಮನಮುಟ್ಟುವಂತೆ ಬೋಧಿಸುತ್ತಾರೆ. ಅವರ ಇಂತಹ ಪಾವನ ನುಡಿ ಆಲಿಸುತ್ತಿರುವ ಜನ್ಮವೇ ಪರಮಪಾವನ. ಆ ಮಹಿಮರ ಪಾದದರ್ಶನವೇ ಪುಣ್ಯಕ್ಷೇತ್ರ ದರ್ಶನ. ಅವರ ನುಡಿಯೇ ಪವಿತ್ರತೀರ್ಥ. ಅವರಿರುವ ಸ್ಥಳವೇ ಪಾವನಗಂಗಾ, ಇಂತಿದ್ದು ಇದೊಂದು ಸ್ವರ್ಗಸುಖದ ಅನುಭವವನ್ನೇ ಮೂಡಿಸುವ ಪುಣ್ಯತಾಣ. ಈ ಮಹಾ ಮಹಿಮಾತೀತರ ಮಂಗಲ ಮಾತಿನ ಮುತ್ತುಗಳು ಸದಾ

ನನ್ನ ಕೈಯಲ್ಲಿ ಬೀಳಲಿ ಎಂದು ಜಗನ್ಮಯನನ್ನು ಬೇಡಿ ಕೊಳ್ಳುತ್ತೇನೆ. ಈ ಮಹಿಮರು ಶಿಕ್ಷಣದ ಬಗ್ಗೆ ಅಪಾರ ಆಸ್ಥೆಯುಳ್ಳವರಾಗಿದ್ದು ಇವರ ಕೃಪಾಕಟಾಕ್ಷದಿಂದ ನೊಳಕೆಒಡೆದು ಬೇರುಬಿಟ್ಟು ಮರವಾಗಿ ಫಲವನ್ನೀಯುವ ದುಧನಿಯ ಶ್ರೀ ಶಾಂತಲಿಂಗೇಶ್ವರ ಹೈಸ್ಕೂಲವೇ ಸಾಕ್ಷಿಯಾಗಿದೆ. ಇವರು ಎಂಥ ಪ್ರಸಂಗದಲ್ಲಿಯೂ ಸಿಟ್ಟಿಗೇಳುವವರಲ್ಲ. ಮತ್ತು ತಪ್ಪಿತಸ್ಥರನ್ನು ಕ್ಷಮಿಸುವಲ್ಲಿಯೂ ಮತ್ತು ಅವರನ್ನು ಸರಿಯಾದ ದಾರಿಯಲ್ಲಿ ತರುವಲ್ಲಿಯೂ ಇವರು ಹೆಚ್ಚಿನವರಾಗಿದ್ದಾರೆ. ಈ ಮಹಿಮರ ಶಿಕ್ಷಣಪ್ರೇಮ, ಅವರ ಬಗ್ಗೆ ಇದ್ದ ಆಸಕ್ತಿ ಮತ್ತು ಕ್ಷಮಾಗುಣಗಳನ್ನು ನೋಡಿದರೆ ಜೈನಧರ್ಮದ ಒಂದು ಪದ್ಯ ನನ್ನ ಸ್ಮೃತಿಗೆ ಬರುತ್ತಿದೆ.

शील वर कुलावो
दालिद्दं भव्वंच रोगावो
विज्जा रज्जाउ वरं
खमा सुहुवि तवावो ।

ಅಂದರೆ, ಕುಲಕ್ಕಿಂತ ಶೀಲವೇ ಶ್ರೇಷ್ಠ. ಮಹಾರೋಗಕ್ಕಿಂತ ಬಡತನವೇ ಶ್ರೇಷ್ಠ ಹಾಗೂ ರಾಜ್ಯಕ್ಕಿಂತ ವಿದ್ಯೆಯೇ ಶ್ರೇಷ್ಠ ಮತ್ತು ತಪಸ್ಸಿಗಿಂತ ಕ್ಷಮಾಗುಣವೇ ಶ್ರೇಷ್ಠ.

ಇಂತು ಹಗಲಿರುಳು ಮಾನವಕೋಟಿಗಾಗಿ ಶ್ರಮಿಸುತ್ತಿರುವ ಶ್ರೀಗಳ ೬೦ನೇ ಹುಟ್ಟುಹಬ್ಬ ಆಚರಿಸುವದನ್ನು ಕೇಳಿ ಮಹದಾನಂದವಾಗಿದೆ. ಇಂತಹ ಮಹಿಮರ ಹುಟ್ಟುಹಬ್ಬ ಆಚರಿಸುವದರಿಂದಲೂ ಇವರ ಅಮೃತ ವಾಣಿಯಿಂದಲೂ ಪಾಪಿಯಾದ ಮಾನವಜನ್ಮ ಪುನೀತವಾಗುವದರಲ್ಲಿ ಯಾವ ಸಂದೇಹವೂ ಇಲ್ಲ.

ಶ್ರೀಗಳು ಆಶೆ ಆಮಿಷಗಳನ್ನು ತೊರೆದವರು. ಆರಾದರೂ ಭಕ್ತರು ಏನಾದರೂ ಕಾಣಿಕೆ ಕೊಟ್ಟರೆ ಅದನ್ನು ಸದ್ವಿನಿಯೋಗಮಾಡಿ ಬಡವರಿಗೋ, ವಿದ್ಯಾರ್ಥಿಗಳಿಗೋ ಹಂಚಿ ಬಿಡುವರು. ಇವರು ಭಕ್ತರಿಂದ ಆವ ಕಾಣಿಕೆಯನ್ನೂ ಬಯಸಿದವರಲ್ಲ. ಆದರೆ ಭಕ್ತಿಯ ಕಾಣಿಕೆ ಬಿಡುವವರಲ್ಲ. ಭಕ್ತಿಯ ಮಹಿಮೆಯನ್ನು ತಿಳಿಸಿ ಶಿವನ ಒಲುಮೆಗೆ ಭಕ್ತಿಯೇ ಮೂಲ ಶಿವನು ಸಿರಿಸಂಪತ್ತನ್ನು ಆಶಿಸುವವನಲ್ಲ. ಭಕ್ತಿಯೊಂದೇ ಅವನನ್ನು ಒಲಿಸುವ ಸುಲಭಮಾರ್ಗ ಎಂದು ತಿಳಿಯಪಡಿಸುವರು. ಹಾಗೂ ವಿಷಯ ಸುಖಗಳಿಂದ ಮುಕ್ತನಾಗಲು ಅವರು ಅನೇಕ ರೀತಿಯಿಂದ ಬೋಧಿಸುವರು. ಒಕ್ಕಲಿಗನು ಹೊಲವನ್ನು ಹಸನು ಮಾಡುವಂತೆ ಜೀವಿಯು ತನ್ನ ಮನವೆಂಬ ಹೊಲವನ್ನು ಹಸನಿಸಿ ಭಕ್ತಿಯ ಬೆಳೆಬೆಳೆಯಲು ಅರಹುವರು. ಅವರ ಈ ಬಗೆಯು ಶ್ರೀ ಹರಿಹರನ ರಗಳೆಯಲ್ಲಿಯ ಪದ್ಯವೊಂದು ನೆನಪಿಗೆ ತರುತ್ತದೆ.

ಸಮಚಿತ್ತವೆಂಬ ಭೂಮಿಯನೆ ಹಸನಾಗಿರಿಸಿ ।
ಆಮರ್ದ ಶಂಕರನ ನೆನೆಹೆಂಬ ನೇಗಿಲನಿರಿಸಿ ।
ಅರಿಷಡ್ವರ್ಗರುವಂ ಹೂಡುವೆತ್ತಂ ಮಾಡಿ ।
ಹರಿವ ಮನಂ ಕಟ್ಟಿ ಹಿಡಿವ ಹಗ್ಗಂ ಮಾಡಿ ।
ಗರ್ವಿಸುವಹಂಕಾರ ಮುಮುನಚ್ಚುವಂ ಮಾಡಿ ।
ಸುರಚಿರ ಶಿವಜ್ಞಾನ ಶಶಿಕರಂ ಸೋಂಕುತಿರೆ ।
ಹರನ ಪರಮಾನಂದ ರಸದ ಮಳೆ ಕೊಳುತಮಿರೆ ।
ಬಿತ್ತಿ ಬೆಳೆವಂ ಶಿವನ ಸದ್ಭಕ್ತಿ ಸಸಿಗಳಂ ।
ಕಿತ್ತು ಕಳೆವಂ ಬೆಳೆವ ಪಾಪಾದಿ ಕಳೆಗಳಂ ।
ಇಂತು ತನ್ನೊಳಗೆ ಭಕ್ತ್ಯಾರಂಭವಂ ಮಾಳ್ಪ ।।

ಈ ರೀತಿ ಇಲ್ಲಿಯ ಜನರನ್ನು ಭಕ್ತಿಯೆಡೆಗೆ ತಿರುಗಿಸಿ ಕಗ್ಗಲ್ಲಾದ ಅವರ ಮನವನ್ನು ಕಟೆದು ದೇವ ಮೂರ್ತಿಮಾಡಿದ್ದಾರೆ. ಇವರು ಬಡವ ಶ್ರೀಮಂತರೆಂಬ ಭೇದಭಾವವಿಲ್ಲದೆ ಎಲ್ಲರನ್ನೂ ಎಲ್ಲ ಕಾಲದಲ್ಲಿಯೂ ಪ್ರೀತಿಯಿಂದ ನೋಡಿಕೊಳ್ಳುತ್ತಾರೆ. ಇವರ ಅಗಾಧ ಮಹಿಮೆಯಿಂದಲೇ ಇಂದು ಹಿರೇಜೇವರಗಿ ಭಕ್ತರ ಬೀಡಾಗಿ ಧರ್ಮದ ಊರಾಗಿ ನಾಡಿನಲ್ಲಿ ಮೆರೆಯುತ್ತಿದೆ. ಅಂತೆಯೇ ನಾಡಿನ, ದೇಶದ ಮುಖಂಡರು ಇವರನ್ನು ಹಾಡಿಹಾಡಿ ಹೊಗಳುತ್ತಾರೆ. ದರ್ಶನಭಾಗ್ಯ ಪಡೆಯಲು ಎಡತಾಕುತ್ತಾರೆ.

ಸಂಸಾರವೆಂಬ ಮಾಯೆಯಲ್ಲಿ ಬಿದ್ದು ಬೆಂಡಾದ ಮಾನವನಿಗೆ ನಿಜ ಸುಖದ ದಾರಿತೋರಿ ಸನ್ಮಾರ್ಗದ ಸುದಾರಿಯಲ್ಲಿ ಕೊಂಡೊಯ್ಯುವ ಈ ಮಹಿಮರು ನಿಜವಾಗಿ ದೇವಾಂಶ ಸಂಭೂತರು, ಸದಾ ಶಿವನಾಮ, ಶಿವಕೀರ್ತನೆಗಳಲ್ಲಿ ಕಾಲಕಳೆಯುತ್ತ ಜನರ ಉದ್ಧಾರ ಗೈಯುವ ಇವರ ನಡೆ ಆದರ್ಶವಾಗಿ ಲೋಕದಲ್ಲಿ ಬೆಳಗುತ್ತಿದೆ ಮೊಳಗುತ್ತಿದೆ. ಅಂತೆಯೇ ಜನ ತಲೆ-ಬಾಗುತ್ತಿದೆ. "ಜಗತ್ತೇ ನನ್ನ ಮನೆ, ಮಾನವ ಕುಲವೇ ನನ್ನ ಕುಟುಂಬ" ಎಂಬ ಮೇಲ್ಪಂಕ್ತಿಯನ್ನನುಸರಿಸಿ ಸದಾ ಸುವಿಚಾರದಲ್ಲಿ ನಡೆದು ಶಿವನನ್ನು ಮೆಚ್ಚಿಸುವ ವನೇ ಕುಲಜನೆಂದು ಹೇಳುವ ಇವರ ಮಾತಿನಲ್ಲಿ ಸತ್ಯ ಪುಟಿದೆದ್ದು ನಿಂತಿದೆ. ಅವರ ಅಮರವಾಣಿಯನ್ನು ಆಲಿಸಿ ಆಚರಣೆಯಲ್ಲಿ ತಂದರೆ ದೈವತ್ವವನ್ನೇ ಪಡೆಯಬಹುದು.

ಇದರ ವ್ಯತಿರಿಕ್ತವಾಗಿ ನಡೆದು ನಾನುಎಂಬ ಅಹಂಕಾರದ ಅಮಲಿನಲ್ಲಿದ್ದವರು ಯಾರಿದ್ದರೂ ಸರಿ ಅವರನ್ನು ಶ್ರೀಗಳು ಬೋಧಾಮೃತದ ಕುಲುಮೆಯಲ್ಲಿ ಹಾಕಿ ಶುದ್ಧರಾಗಿಸಿ ನಿಜ ಸನ್ಮಾರ್ಗ ತೋರುತ್ತಾರೆ. ಅಂತೆಯೇ ಸಕಲರೂ ಜಾತಿ ಮತ ಭೇದಗಳಿಲ್ಲದೆ ಶ್ರೀಗಳವರ ಸತ್ಕಾರ್ಯಗಳಲ್ಲಿ ಭಾಗವಹಿಸಿ ಶುದ್ಧರಾಗಿ ನಿಜಜೀವನ ಮಾರ್ಗವನ್ನು ಕಂಡುಕೊಂಡಿದ್ದಾರೆ.

ಪಾಪಿಗಳ ಪಾಪವನ್ನು ಪರಿಹರಿಸಿ ಪರಮ ಪವಿತ್ರರೆಂದೆನಿಸಿದ ಪವಾಡ ಪುರುಷರ ಪಾದಾರವಿಂದ-ಗಳಿಗೂ ಪರಮ ಪವಿತ್ರ ಕಾರ್ಯ ಕೈಕೊಂಡು ಪಂಚ ಪೆಡಂಭೂತಗಳನ್ನು ಓಡಿಸಿ ಪಾವನಪಥದಲ್ಲಿ ನಡೆದು ಪವಿತ್ರವಾದ ಷಷ್ಟ್ಯಬ್ಧಿಯ ಪರಮ ಕಾರಣಿಕರಿಗೆ ನಮನಗಳನ್ನು ಅರ್ಪಿಸಿ ಮಂಗಲ ಹಾಡುತ್ತೇನೆ.

"ಸತ್ಯಂ ಶಿವಂ ಸುಂದರಂ."

— ಗಂಗಾಧರ ಗುರುಬಸಯ್ಯ ಸಾಲೀಮಠ
ಹೆಡ್‌ಮಾಸ್ತರ ಸರಕಾರಿ ಕಿರಿಯ ಪ್ರಾಥಮಿಕ ಶಾಲೆ
ಹಿರೇಜೇವರಗಿ.

---

"ಲಿಂಗಾಯತ ಸಮಾಜವು ಕಾರ್ಯತಹ ಸಾಧಿಸಿ ತೋರುವ ಸಮನ್ವಯ ದೃಷ್ಟಿಯ ತತ್ವಜ್ಞಾನಿಗಳ ಸಂಗಮ; ಅದೊಂದು ಅತೀತವಾದ ಆತ್ಮಸಾಕ್ಷಾತ್ಕಾರದ ಅನುಭಾವಿಗಳ ಕೂಟ; ಆಧ್ಯಾತ್ಮಿಕ ಸಹಯೋಗವನ್ನು ಸಾಧಿಸುವ ವಿಶ್ವವಿದ್ಯಾಸಂಸ್ಥೆ; ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ದೇವರನ್ನೇ ರಕ್ಷಕನನ್ನಾಗಿ ನಂಬಿರುವ ಸ್ವತಂತ್ರ ಧೀರಾತ್ಮರನ್ನುಳ್ಳ ಪ್ರಜಾಸಂರಕ್ಷಕ ಮಹಾಸಂಸ್ಥೆ."

ಸುಪ್ರಸಿದ್ಧ ಪಂಡಿತರಾದ ಸರೋಜನಿಯವರು "ಈ ವೀರಶೈವ ಧರ್ಮವು ಸರ್ವ ಸೌಹಾರ್ದಭಾವಾದಿ ಉದಾತ್ತ ತತ್ವಗಳನ್ನು ಲಕ್ಷದಲ್ಲಿಟ್ಟುಕೊಂಡು ಇದು ವಿಶ್ವಧರ್ಮವಾಗಿರಲು ತಕ್ಕದ್ದು" ಎಂದು ಘೋಷಿಸಿದ್ದಾರೆ.

— (ಲಿಂಗತತ್ವದರ್ಪಣದಿಂದ)

# ಷಷ್ಟ್ಯಬ್ಧಿಃ



ಲೇಖಕರು : 'ಕಾವ್ಯತೀರ್ಥ' 'ವೇದಾಂತಾಚಾರ್ಯ'
ಶ್ರೀ ಷ॥ ಬ್ರ॥ ಚಂದ್ರಶೇಖರ ಶಿವಾಚಾರ್ಯರು
ಗುಳೇದಗುಡ್ಡ.
(ರಿಸರ್ಚ ಸ್ಕಾಲರ ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸಿ)



" ಜಗದ ಚೇಷ್ಟೆಗೆ ರವಿಬೀಜಪಾದಂತೆ " ಮಹಾನುಭಾವರ ನಡೆನುಡಿಗಳು ಜಗತ್ತಿನ ಜನಜಂಗುಳಿಗಳಿಗೆ ಪ್ರೇರಕವಾದವುಗಳು. ಮಹಾತ್ಮರ ಜನ್ಮ, ಜಯಂತಿಯೆಂತಲೂ, ಐಕ್ಯ, ಪುಣ್ಯತಿಥಿಯೆಂತಲೂ, ಇಷ್ಟೇ ಅಲ್ಲ, ಜೀವನ ಕಾಲದ ಪ್ರತಿಯೊಂದು ವರ್ಷಗಳು ಜನಜೀವನದಲ್ಲಿ ಹಬ್ಬಗಳಾಗಿ ಆಚರಿಸಲ್ಪಡುತ್ತವೆ.

ಅವರು ಅಧಿಕಾರ ವಹಿಸಿದ ೨೫ ನೇ ವರ್ಷಕ್ಕೆ ರಜತಮಹೋತ್ಸವವಾದರೆ, ಜನ್ಮದ ೬೦, ೮೦, ೧೦೦ ವರ್ಷಗಳಿಗೆ ಕ್ರಮವಾಗಿ ಷಷ್ಟ್ಯಬ್ಧ, ಹೀರಕ ಹಾಗೂ ಶತಮಾನೋತ್ಸವಗಳೆಂದು ಅವರ ಭಕ್ತ ಶಿಷ್ಯ ಶಿರೋಮಣಿಗಳವರು ಈಗಲೂ ಆಚರಿಸುತ್ತಲಿರುತ್ತಾರೆ. ಈ ಪ್ರತಿಯೊಂದು ಆಚರಣೆಗಳು ಜನರಿಗೆ ಒಂದೊಂದು ವಿಲಕ್ಷಣವಾದ ಉಪದೇಶವನ್ನಿತ್ತು ಮಾರ್ಗದರ್ಶಕಗಳಾಗಿವೆ.

ಇಂತಹ ಅನುಕರಣಾರ್ಹ ಮಹಾತ್ಮರ ಸ್ತೋಮದಲ್ಲಿ ಗುಲಬರ್ಗಾ ಜಿಲ್ಲಾ, ಅಫಜಲಪೂರ ತಾಲೂಕಿನ ಹಿರೇ-ಜೇವರಗಿಯ ಬೃಹನ್ಮಠಾಧ್ಯಕ್ಷರಾದ "ಬಾಲಶಿವಯೋಗಿ" ಶ್ರೀ ಷ॥ ಬ್ರ॥ ಗುರುಶಾಂತ ಶಿವಾಚಾರ್ಯ ಮಹಾಸ್ವಾಮಿಗಳೊಬ್ಬರಾಗಿದ್ದಾರೆ. "ಬೆಳೆಯ ಸಿರಿ ಮೊಳಕೆಯಲ್ಲಿ" ಎಂಬಂತೆ ಬಾಲ್ಯದಲ್ಲಿಯೇ ಶಿವಯೋಗಿಯ ಲಕ್ಷಣ ಲಕ್ಷಿತರಾದ್ದರಿಂದಲೂ ಮತ್ತು ಶಿವಯೋಗಿಯಾಗಿದ್ದರೂ ಬಾಲಾನುರಾಗಿಯಾಗಿದ್ದರಿಂದ ಇವರಿಗೆ ದೊರೆತ "ಬಾಲಶಿವಯೋಗಿ" ಎಂಬ ಅಂಕಿತನಾಮವು ಕೇವಲ ಅಂಕಿತನಾಮವಾಗಿರದೆ ಅನ್ವರ್ಥಕವೂ ಆಗಿರುತ್ತದೆ. ಪಾಠಶಾಲೆಯಲ್ಲಿ ಬಹು ಸಮಯ ವ್ಯತೀತವಾಗದ ಇವರ ಜೀವನ, ಇವರು ಹುಟ್ಟಿಕಲಿತವರಲ್ಲ, ಕಲಿತೇ ಹುಟ್ಟಿದವರೆಂದು ಕೈತಟ್ಟಿ ಹೇಳುವಂತಿದೆ. "ಶಿವಯೋಗಿಯ ದೇಹ ವೃಥಾ ಸವೆಯಲಾಗದೆಂಬ" ಶಿವಯೋಗಿ ಸಿದ್ಧರಾಮೇಶ್ವರರ ಸುವಚನದಂತೆ ಇವರ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಕಲಾಪಗಳು; ಇವರು ಕೇವಲ ಜ್ಞಾನಯೋಗಿಗಳಲ್ಲ, ಕರ್ಮಯೋಗಿಗಳೂ ಆಹುದೆಂದು ಹಾಡಿಹರಿಸುತ್ತಲಿವೆ. ಇಷ್ಟು ಸಾಲದೇ—

कर्णस्त्वच शिबिर्मांसं जीवं जीमूतवाहनः ।
ददौ दधीचिरस्थीनि नास्त्यदेयं महात्मनाम् ॥

ಎಂಬ ಕವಿಯಂತೆ ಶಿಕ್ಷಣ ಕ್ಷೇತ್ರಕ್ಕಾಗಿ ಮಾಡಿದ ಇವರ ತನು, ಮನ, ಧನಗಳ ತ್ಯಾಗ, ಇವರು ತ್ಯಾಗಯೋಗಿಗಳೂ ಆಹುದೆಂದು ಪ್ರಸಿದ್ಧಿಸುತ್ತಲಿವೆ.

ಇವರ ಹಣ್ಣಾದ ಶರೀರ, ಬಿಳಿಯ ಜಟಾಮುಕುಟಗಳು ಕೇವಲ ಶರೀರದ ಮುಪ್ಪನ್ನಲ್ಲ ಜೊತೆಗೆ ಮನಸ್ಸಿನ ಮಹಾಮುಪ್ಪನ್ನು ಪ್ರತಿಪಾದಿಸುತ್ತಲಿವೆ. ಅಂತೆಯೇ ಶಿವಯೋಗಿಗಳಿಗೆ ಚಿಂತೆ ಎಂಬುದು ಶಾಸ್ತ್ರ ವಿಷಯಕವಲ್ಲದೆ ಅನ್ನ ನೀರುಗಳಿಗಲ್ಲ. ದ್ವೇಷವು ವಿಷಯದಲ್ಲಲ್ಲದೇ ಪರರಲ್ಲಲ್ಲ. ಕಾಮಕಾಮಾರಿಯಲ್ಲಿಯೇ ವಿನಹ ವಿಷಯದಲ್ಲಲ್ಲ. ಕ್ರೋಧ ಕಾಲಾರಿ ಭಕ್ತಿರಹಿತರಲ್ಲಲ್ಲದೆ ಭಕ್ತರಲ್ಲಲ್ಲ. ಅರಿಷಡ್ವರ್ಗರಹಿತರಾದ ಇವರು ಈಗ ತಾನೇ ಜೀವನದ ಪೂರ್ವಾರ್ಧವನ್ನು ದಾಟಿ, ಉತ್ತರಾರ್ಧದ ೬೦ನ್ನು ಮೀರಿದ್ದಾರೆ. ಅಂತೆಯೇ ಇವರ ಭಕ್ತಸಮೂಹ ಶ್ರೀಗಳ ಷಷ್ಟ್ಯಬ್ಧಮಹೋತ್ಸವವನ್ನು ಆಚರಿಸಲು ಅಣಿಯಾಗಿದ್ದಾರೆ.

ಷಷ್ಟ್ಯಬ್ಧವೆಂದರೆ ೬೦ನೇ ವರ್ಷವೆಂದು ಸಹಜವಾದ ಅರ್ಥವಾದರೆ, ಅದರ ಮಾರ್ಮಿಕಾರ್ಥ ಮಹತ್ತರವಾಗಿರುತ್ತದೆ. ಅದು ಹೇಗೆಂದರೆ ೬೦ ರ ಅಂಕಿಯನ್ನು ಅವಲೋಕಿಸಿದಾಗ ಕ್ರಮವಾಗಿ ೬ ಮತ್ತು ೦ (ಶೂನ್ಯ) ಇವುಗಳು ದೃಷ್ಟಿಗೋಚರಗಳಾಗುತ್ತವೆ. ಇವುಗಳ ತಾತ್ವಿಕಾರ್ಥವೆಂದರೆ ೬ ಎಂದಾಗ ಷಡೂರ್ಮಿ, ಷಡ್ವೈರಿ ಎಂದರ್ಥ. ಶೂನ್ಯವೆಂದರೆ =೦, =೦, ಎಂದರೆ ಪೂರ್ಣ, ಪೂರ್ಣವೆಂದರೆ ಪರಮಾತ್ಮನೆಂದರ್ಥ. ಯಾವ ವಯಸ್ಸಿನಲ್ಲಿ ಅರಿಷಡ್ವರ್ಗಗಳನ್ನು ನಾಶಮಾಡಿ ಪೂರ್ಣತ್ವಯೋಗ ಪ್ರಾಪ್ತಿಮಾಡಿಕೊಳ್ಳಬೇಕಾದುದೇ ೬೦ ರ ವಯಸ್ಸಿನಾರ್ಥ.

ಇನ್ನು ಸಾಮಾನ್ಯವಾಗಿ ಲೋಕದಲ್ಲಿ "೬೦ ಕ್ಕೆ ಅರೆಮರೆ" ಎಂದು ಅನ್ನುತ್ತಾರೆ. ಇದರ ತಾತ್ವಿಕಾರ್ಥವೆಂದರೆ ಅರೆ ಎಂದರೆ ಅರ್ಧ. ಅಂದರೆ ಪೂರ್ವಾರ್ಧ, ೬೦ ರ ಮೊದಲಿನ ಜೀವನ, ಇಂತಹ ಜೀವನದ ಮರೆವೆಯೇ ಅರೆ-ಮರೆ. ಪೂರ್ವಾರ್ಧ ಪೂರ್ಣ ಮರೆತು ಉತ್ತರಾರ್ಧ ಜರೆಯುವಿಕೆಯೇ ಅರೆ-ಮರೆ ಎಂಬುದು ಅದರರ್ಥ. ಇನ್ನು ೬೦ ಕ್ಕೆ ಅರಿವುಮರೆವು ಎಂದೂ ಕೂಡಾ ಕರೆಯುವರು. ಇದರರ್ಥವಾದರೋ ಅರಿವು= ಆತ್ಮ- ಪರಮಾತ್ಮರ ಜ್ಞಾನ, ಮರೆವು=ಸಂಸಾರದ ವಿಸ್ಮೃತಿ.

ಹೀಗೆ ೬ ರಿಂದ ೦ (ಶೂನ್ಯ) ದವರೆಗೆ ಪ್ರಯಾಣ ಬೆಳೆಸಿ ಅರಿಷಡ್ವರ್ಗರಹಿತರೂ, ಅರಿವು-ಮರೆವೆಗಳಿಂದ ಕೂಡಿರುವವರೂ ಆದ ಜೀವರಗಿಯ ಪೂಜ್ಯ ಶ್ರೀಗಳ ಷಷ್ಟ್ಯಬ್ಧ ಮಹೋತ್ಸವವು ೬೦ ರ ಎಡಬಲದ ಸರ್ವ ಸಾಮಾನ್ಯರಿಗೆಲ್ಲ ೬ ರಿಂದ ೦ ದವರೆಗೆ ಸಾಗಿರಿ, ಅರಿವೆ ಮರೆವೆಗಳಿಂದ ಜೀವನಹಗ್ಗವನ್ನು ಹುರಿಹಾಕಿರೆಂಬ ಪರಮ ತಾತ್ವಿಕಾರ್ಥವನ್ನು ತಿಳಿಯಪಡಿಸುತ್ತಲಿದೆ. ಮಹಾಸ್ವಾಮಿಗಳ ಷಷ್ಟ್ಯಬ್ಧವಷ್ಟೇ ಅಲ್ಲ, ಹೀರಕ ಶತಮಾನೋತ್ಸವಗಳೂ ಆಚರಿಸಲ್ಪಟ್ಟು ಜನರಿಗೆ ಮಾರ್ಗದರ್ಶಕಗಳಾಗಲೆಂದು ಪರಶಿವ ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇವೆ.



ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ.

— ಬಸವೇಶ್ವರ

ಪ್ರಯತ್ನವೇ ಪ್ರಾರಬ್ಧವಾಗಿ ಫಲವೀವುದರಿಂದ, ಪ್ರಾರಬ್ಧಕ್ಕಿಂತ ಪ್ರಯತ್ನವೇ ಮಿಗಿಲಾಗಿಪ್ಪುದು ಕಾಣಾ.

— ಚನ್ನಬಸವೇಶ್ವರ

ಸ್ತುತಿನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ, ಸಮಾಧಾನಿಯಾಗಿರಬೇಕು.

— ಅಕ್ಕಮಹಾದೇವಿ

ಸತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತ ನಿಚ್ಛಂದವಾಗಿರಬೇಕು.

— ನುಲಿಯ ಚಂದಯ್ಯ

ಅಡಿಗಡಿಗೆ ಭವಹರನ ನೆನೆವುತ್ತ, ಭಸಿತವ ಧರಿಸುತ್ತ, ಭವವ ತಪ್ಪಿಸಿಕೊಂಬ ಸುಖಕ್ಕಿನ್ನು ಸರಿಯುಂಟೆ?

— ತೋಂಟದ ಸಿದ್ಧಲಿಂಗ

# ಬಾರಪ್ಪ ಬಾ ತಮ್ಮ ಹೋಗೋಣ.



ಬಾರಪ್ಪ ಬಾ ತಮ್ಮ ಹೋಗೋಣ ।
ಗುರುಶಾಂತಲಿಂಗರ ನೋಡೋಣ ।
ಅವರ ಷಷ್ಟ್ಯಾಬ್ಧಿಯಲ್ಲಿ ಭಾಗವಹಿಸೋಣ ।
ಜೀವನ್ಮುಕ್ತಿಯನೂ ಪಡೆಯೋಣ ॥ ೧ ॥

ಜಗದ ಜನರ ಪಾಪವ ಹರಿಸಿ ।
ಲೋಕ ಕಲ್ಯಾಣದಿ ಮನವನು ಇರಿಸಿ ।
ಸುನೀತಿ ಸುಮಾರ್ಗ ತೋರಿಸಿ ।
ಸದಾ ಮೋಕ್ಷದ ದಾರಿಯ ಬಿಂಬಿಸಿ ।
ಭಕ್ತಿಯ ಬೀಜವ ಮೊಳೆಯಿಸಿ ।
ಅದರ ಫಲಗಳ ಸರ್ವರಿಗೂ ಹಂಚಿಸಿ ॥ ೨ ॥

ಸತ್ಯದ ನೆಲೆ ತಿಳಿಸಿ ಮಾಯವ ಹರಿಸಿ ।
ಮಿಥ್ಯದ ಪಥವ ದೂರೀಕರಿಸಿ ।
ಸತ್ಯಾಸತ್ಯಗಳ ವಿಂಗಡಿಸಿ ।
ಅಸತ್ಯ ಅನ್ಯಾಯ ಸರಿಸಿ ।
ನಿಜ ಸನ್ಮಾರ್ಗದ ದಾರಿ ತಿಳಿಸಿ ।
ಮೋಕ್ಷದ ಮೆಟ್ಟಲು ನಿರ್ಮಿಸಿ ॥ ೩ ॥

ಶಿಕ್ಷಣಕೆ ಹೆಚ್ಚಿನ ಮಹತ್ವವನಿರಿಸಿ ।
ಅಲ್ಲಲ್ಲಿ ಶಾಲೆಗಳನ್ನು ನಿರ್ಮಿಸಿ ।
ಎಲ್ಲ ಬಾಲರ ಜನ್ಮ ಉದ್ಧರಿಸಿ ।
ಸಾಕ್ಷರತೆ ಮಹತಿಯ ಬೋಧಿಸಿ ।
ನಾಳಿನ ರಾಜರೆಂದು ಭಾವಿಸಿ ।
ಸರ್ವರೂ ಜಾಣರಾಗೆಂದು ಹರಿಸಿ । ॥ ೪ ॥

ಶಿಕ್ಷಾ ಗುರುವ ನೋಡಲು ಬಾರೋ ।
ಮೋಕ್ಷಾ ಗುರುವ ಕೂಡಲು ಬಾರೋ ।
ದೀಕ್ಷಾ ಗುರುವ ಭಜಿಸ ಬಾರೋ ।
ಗುರುಶಾಂತಲಿಂಗರ ಬೇಡ ಬಾರೋ
ಶಿಕ್ಷಾ, ದೀಕ್ಷಾ, ಮೋಕ್ಷಾ ಹೊಂದ ಬಾರೋ
ಬಾಲಗಂಗಾಧರ ಹೇಳಿದ ಮಾತು ಕೇಳಬಾರೋ
॥ ೫ ॥

— ಗಂಗಾಧರ ಗುರುಬಸಯ್ಯ ಸಾಲಿಮಠ
ಹೆಡ್‌ಮಾಸ್ತರ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಹಿರೇಜೇವರಗಿ



# ಶ್ರೀ ಗುರುಶಾಂತನಡಿಗೆ ನಮೋ ನಮೋ



ಕರ್ಪೂರದಾರುತಿ ನಿತ್ಯದಿ ಬೆಳಗಿರೆ ।
ಕೋಮಲ ಈಶ್ವರ ಸ್ವರೂಪನಿಗೆ ।
ಹಿರಿಮೆಯ ಹಿರಿಗುರು ಹಿರೇಜೇವರಗಿಯ ।
ಶಾಂತಚಿತ್ತ ಗುರುಶಾಂತನಿಗೆ ॥ ಪಲ್ಲ ॥

ಪ್ರಖರದ ಕೆಂಡ ಜ್ವಲಂತ ಜ್ವಾಲೆ ।
ನಿರ್ಮಲ ಭಾಸ್ಕರ ಸ್ವರೂಪನಿಗೆ ।
ಪಾವನ ಶೀಲರ ತ್ರಿಶೂಲ ಮಂಡಲ ।
ವಿಭೂತಿ ಧಾರಣ ಮಂಡಿಪಗೆ ॥ ೧ ॥

ಮಲ್ಲಿಗೆ ಹೂವಿನ ಪರಿಮಳ ಗಂಧದ ।
ಪ್ರೇರಣೆ ಬೀರುವ ಪ್ರೇರಪಗೆ ।
ಸಂಕಟ ನಾಶಕ ರೋಗ ನಿವಾರಕ ॥
ಕಂಟಕ ಕಳೆಯುುವ ಯೋಗೀಶಗೆ ॥ ೨ ॥

ಕಾವಿಯ ಉಡುಪು ।
ಜಡಿಕೇಶ ಗಂಟು ರುದ್ರಾಕ್ಷಿ ಮಾಲೆ ।
ನಸುಗೆಂಪು ಬಣ್ಣ ಹರವಾದ ಹಣೆ ।
ಕಾಯಕವೇ ಪೂಜೆ ।
ಸಾದಾ ಉಡುಗೆ ಸೀದಾ ನಡಿಗೆ ।
ಗುರುವಿನ ಅಡಿಗೆ ನಮೋ ನಮೋ ॥ ೩ ॥

— ರಮಾನಂದ
ಲೇಖಕ, ದಿಗ್ದರ್ಶಕ, ಕಲಾವಿದರು.

# ಆರುತಿ ಪದ್ಯ

ಆರುತಿ, ಆರುತಿ, ಶಿವನ ಶರಣಗ ಆರುತಿ
ಭವಬಂಧನ ಬಿಡಿಸಿ ಭಕ್ತಿ ಮಾರ್ಗವ ರೂಪಿಸಿ
ಅಜ್ಞಾನವ ಅಳಿಸಿ ಸುಜ್ಞಾನವ ಬೆಳಗಿಸಿ
ಮುಕ್ತಿ ಮಾರ್ಗವ ತೋರಿದ ಗುರುವರ್ಯಗೆ ಆರುತಿ ॥ ೧ ॥

ಚಿಕ್ಕಮಕ್ಕಳ ಜ್ಞಾನವೃದ್ಧಿಗೋಸ್ಕರ ವಿದ್ಯಾ
ಮಂದಿರಗಳ ಸ್ಥಾಪಿಸಿದ ಯತಿವರ್ಯರಿಗೆ
ಹರಗುರು ಚರಮೂರ್ತಿಗೆ ಜ್ಞಾನದಾಸೋಹಿಗೆ ಆರುತಿ ॥ ೨ ॥

ಲೋಕ ಕಲ್ಯಾಣಕ್ಕೆ ತಪೋಗಯಿದ ಮಹಿಮಗೆ
ವೈರಾಗ್ಯಮೂರ್ತಿಗೆ ಸ್ವಯಂ ಪ್ರಕಾಶ ವಿಭುವಿಗೆ
ಲಿಂಗಾನಂದಗೆ ಮಹಾವಿಭೂತಿಗೆ ಆರುತಿ ॥ ೩ ॥

ನಿತ್ಯ ಪವಾಡ ಮತಿವರ ಬ್ರಹ್ಮ ಜ್ಞಾನಿ ಮುನಿವರ
ಸತ್ಯ ಶಾಂತಿ ತೇಜ ನೀ ನಿತ್ಯಮುಕ್ತ ರೂಪನೇ
ಜ್ಞಾನ ಸುಧೆಯ ದಿನಕರ ಮಂಗಲಾಂಗ ಗುರುವಿಗೆ ಆರುತಿ ॥ ೪ ॥

ಶಿವಮತೋದ್ಧಾರಕ ಶರಣ ಕುಲದ ದೀಪಕ
ಭಕ್ತರ ಭಾಗ್ಯ ನಿಧಿ ಮುಕ್ತಿಯ ಪಥದೊಡೆಯ
ಮಂಗಲಾಂಗ ಯತಿವರ ಶಾಂತಲಿಂಗ ಗುರುವಿಗೆ ಆರುತಿ ॥ ೫ ॥

ಕವಿಯತ್ರಿ :
— ಸೌ॥ ಗೋದಾವರಿ ಸಂಗೋಳಗಿ ಮನ್ನಾಎಕ್ಕೆಳ್ಳಿ.

ॐ

परम पूज्य "बालशिवयोगी"

श्री. ष. ब्र. गुरुशांत शिवाचार्य महास्वामीजी

बृहन्मठाध्यक्ष अक्कलकोट.

# श्री गुरुशांत दर्शन



"षष्ट्यब्धी समारंभ संभावना ग्रंथ"

# मराठी विभाग

दिनांक ५-२-१९७६

# अनुक्रमणिका



# बालशिवयोगी श्री ष. ब्र. गुरुशांत शिवाचार्य
## यांची मनीषा



उधळू नका वैखरी स्तुतीचीं सुमने मजवर तरी
स्तुती नको मज कृती हवी खरी ॥ धृ ॥

तळमळ मनीची अंशत: जरी
शमली असता मोद कितीतरी
मिळेल जगती अमय रसा परी उधळू नका वैखरी ॥ १ ॥

प्रज्ञापुरीचा विहार अपुला
जीर्ण जीर्णतर पहा जहाला
आव्हान देई हा सांप्रत काला
' जीर्णोद्धारां कोण करी मज?" मार्ग प्रतिक्षाकरी ॥२॥

थेंबें थेंबें तळे सांचते
कणा कणाने रासही बनते
कवडी कवडी सहस्र जमते
'दसकी लकडी एकका बोजा म्हण नव्हे
का खरी कृतीला लागू झडकरी ॥ ३ ॥

धर्मकारणी दान देऊनी
मानवता साकार करूनी
जीर्णाचा नव विहार बनुनी
समाजकार्यामध्ये होऊनी लीन जगू या तरी
नको वैखरी मला भरजरी ॥ ४ ॥

काय हवे मज ते ते द्यावे
तळमळ मनीची मज शमनावे
उचित ते तुम्ही सदा करावे
पुरवावी मागणी मनीची शांतचित्त मजकरी
नको ती जरतारी वैखरी ॥ ५ ॥

केंद्र असे हे सत्धर्मांचे
सदाचार वा शिवनीतीचे
सत्ज्ञानाचे यम नियमाचे
तारुण्याचा साज चढवुनी देऊ चारुता खरी
तयावर उधळू सुमने खरी ॥ ६ ॥

धा. भी. करशेट्टी.

# महा बालतपस्वी पूज्य श्री गुरुशांतलिंग शिवाचार्य महास्वामी जवरगी.
## षष्ट्यब्धी समारोह
# अल्प परिचय

आपला भारत देश ऋषिमुनींचा देश म्हणून प्राचीन कालापासून विख्यात आहे. या ऋषिमुनींच्या तपस्येनें, त्यागानें. उपदेशानें व त्यांच्या मार्गदर्शनानें भारतीय जनतेला व भारत देशाला एक महान तात्विक पीठिका व थोर लौकिक प्राप्त झाला आहे. अलीकडच्या काळांतहि या प्राचीन मुनिजनांचा वारसा व परंपरा पाठींशी घेऊन या देशाला ललामभूत बनविणारे थोर तत्वज्ञ व संत या देशांत होऊन गेले व आज हयात आहेत. अशा या संत महात्म्याच्यां मालिकेंत शोभूशक तील असे पूज्य गुरुशांतलिंग महास्वामी जेवरगीकर हे एक आहेत. त्यांच्या षष्ठ्याब्धी समारोहा निमित्त मी एक त्यांचा परम भक्त या नात्यानें त्यांच्या बाबतींत हीं चार शद्वसुमनें त्यांच्या चरणकमलावर वाहून त्यांचा हा अल्प परिचय सादर करीत आहे.

परमपूज्य महा बालतपस्वी श्री गुरुशांतलिंग महा स्वामी यांचा जन्म कर्नाटक राज्यातील जेवरगी ता. अफजलपूर जि. गुलबर्गा येथे इ. स. १९१५ साली एका अत्यंत गरीब परंतु धर्मनिष्ठ अशा कुटुंबात झाला. बालपणीच त्यांच्या ठिकाणीं असलेल्या तेजस्विते चा परिचय आला. या त्यांच्या तेजाला फुंकर लालून प्रज्व-लित करावें. या प्रकाशांत जनतेच्या उद्धार करावा म्हणून जेवरगी मठाचे पट्टाधिकारी यांनीं त्यांचे शिक्षण गुरुकुलांत पूर्ण करून घेऊन त्यांना योग्य वेळीं मठाधि पती म्हणून पट्टाभिषेक केला. तेही बालवयांतच. त्यांच्या पुनित वास्तव्यानें जेवरगी मठ आज भक्त गणांचें तीर्थक्षेत्र बनले आहे. अशा महान तपस्व्याच्या ज्ञानाचा व मार्गदर्शनाचा लाभ केवळ जेवरगी परिस राला तर मिळतोच. परंतु त्यांच्या मार्गदर्शनाचा लाभ अन्यत्र जनांना मिळून त्यांच्या आशीर्वादानें लोककल्याण साधावें म्हणून अक्कलकोट एथील हिरेमठाचे (कुंभार मठ) आधिपत्य त्याना बहाल केले. व कर्नाटक आणि महाराष्ट्र या दोनही राज्यांतील जनतेंला त्याच्या कृपा शीर्वादाचा लाभ अनेक वर्षापासून मिळत आहे. हजारो भक्तगण त्यांच्या उपदेशामृताने न्हाऊन निघून त्यांनीं आपले जीवन कृतार्थ बनविले आहे.

अक्कलकोट येथील हिरेमठाचे पट्टाधीकारी म्हणून दरवर्षी श्रावण महिन्यांत वास्तव्य करुंलागले. श्रावण महिना वीरशैव व हिंदू जनांनां अत्यंत पवित्र असा असतो. या महिन्यांत भजन, कीर्तन, पुराण आदी धार्मिक उपक्रम सुरुं करून जनतेचे मनरंजन करीत करीत सतधर्माची व जीवनाची खरी ओळख पटवून दिली. सदरचा कार्यक्रम आजतागायत अखंडपणें येथे चालू आहे. तपः सामर्थ्यानें मनःशांती आत्मबल व लोक कल्याण साधता येतें म्हणून बालवयांतच तपोनुष्ठानाला त्यांनी सुरुवात केली. व तपोबलानें जनकल्याणाचे महान व दिव्य कार्य आरंभले. इ. स. १९३९ साली अक्कल-कोट येथील फत्तेबाग मळयांत ४२ दिवसाचे अनुष्ठान करून ते यशस्वीपणें पार पाडले.

या धार्मीक कार्याबरोबरच समाजोन्नतीसाठी शैक्षणीक प्रसाराचे महत्तम कार्यहि त्यांनीं हाती घेतलें. गोरगरीब विद्यार्थी ज्ञानोपासने पासून वंचित होऊंनये, ग्रामीण भागातील विद्यार्थी माध्यमिक शिक्षणाला मुकु नये म्हणून त्यांनीं जेवरगी, दुधनी आदि छोटया छोटया खेडयांतून मराठी व कन्नड माध्यमाच्या विद्यार्थी साटीं माध्यमीकशाळा काढल्या. विद्यार्थ्यांना वसतीगृहाची सोयहि केली. आज या प्रशालांतून अनेक गरीब विद्यार्थ्यांना मोफत अन्न व शालेचे साहित्य देऊन त्यांचे माध्यमिक शिक्षण पूर्ण केले व अनेकांना मदतीचा हात देऊन पदवीधरहि बनविले आहे.

महास्वामीनीं २।४ वेळां भारत यात्रा करून प्रसिद्ध अशा तीर्थक्षेत्रांत वास्तव्य केलें आहे. याच प्रका रच्या भारत यात्रेच्या वेळीं भूतपूर्व राष्ट्रपती स्व. राधा कृष्णन् यांची भेटघेऊन त्याच्याशी तात्विक चर्चाहि केली

आहे. या प्रसंगी मी त्यांच्या समवेत असल्यानें मला या दोन महान पुरुषांच्या भेटीचा व तात्विक देणाणघेवा णीच्या सोहळ्याचा अवीट आनंद लुटता आला. हें मी माझे परम भाग्य समजतो याच वेळीं वीरशैव धर्मांची जीं पंचमहापीठे आहेत तेथें जाऊन पंचजगद्गुरुची भेट घेतली व त्यानां जेवर्गी सारख्या एका लहान खेड्यांत आणून आपणासह जनतेंला त्यांच्या दर्शनांचा व मार्ग-दर्शनाचा लाभ मिळवून दिला.

महास्वामी विद्वान आहेत, थोर तत्वज्ञ आहेत, महान समाज सेवक आहेत, महान तपस्वी आहेत, इतके असूनही त्यानां कसलाही मोह नांहीं. स्वभावाने दिल दार व त्यागी आहेत. वाक्पांडित्यानें जनतेला भारावून सोडतात. शांती, निगर्वीपणा व हास्य मुखमन्डल या मुळें तें सर्वांनां अति प्रिय बनले आहेत विविध जमातींतहि त्यांचे भक्तगण आहेंत. त्याचा भक्तगण कर्नाटक महाराष्ट्र व आंध्रा या तीन्ही राज्यांतून विखुरलेला आहें. या त्याच्या थोर व्यक्तिमत्त्वामुळे त्यांची कीर्ति दाही दिशांत आज दुमदुमत आहे. यापुढेहि ती दुमदुम णार आहे. अशा महा तपस्वीला उदंड आयु लाभो हीच ईशचरणी प्रार्थना करून ही शद्ब सुमभंजलि त्यांच्या षष्ठयाब्दिनिमित्त त्यांच्या चरणी परमपवित्र भावनेनें वाहतो.

लेखक—

**धर्मभूषण ना. रे. हिरेमठ, पत्रकार**

**अक्कलकोट.**

---

॥ श्री १००८ जगद्गुरु पंचाचार्य : प्रसीदंतु ॥

परमपूज्य बालशिवयोगी

# श्री ष. ब्र. गुरुशांत शिवाचार्य हिरेजेवरगी महास्वामीजींचा,

## षष्ट्याब्धी पूर्ती समारंभा निमित्त

# स्मरणिका



परमपूज्य बालशिवयोगी श्री ष. ब्र. गुरुशांत शिवाचार्य हिरेजेवरगी महास्वामीजी हे एक शांतवृत्तिचें निर्मळ आदर्श चारित्र्याचें भिष्मब्रम्हचारी सत्पुरुष आहेत. अशा सत्पुरुषाच्या षष्ठब्धी समारंभ मोठया महोत्सवाने करण्याचे त्यांच्या अनेक सद्भक्तानी मोठया भक्तीपूर्वक करण्याचे ठरविले आहे. हे अभिनंदनीय होय.

लिंगैक्य श्री ष. ब्र. वीरतपस्वी चन्नवीर शिवाचार्य होटगी महाराज यांचे महाराष्ट्रातील सोलापूर जिल्हयातील सनातन वैदिक वीरशैव स मा जि क " जिल्हा परिषदा " ' धर्मोन्नती परिषदा ' त से च धार्मिक सभा संमेलने कार्यामध्ये श्री बालशियोगी हिरेजेवरगी महाराज यांचा धनिष्ट संबंध आला. व तें पंढरपूर क्षेत्री श्री१००८ जगद्गुरु पंचाचार्य महाराजांचे व इतर धार्मिक व सामाजिक कार्यांत आपुलकीने भाग घेवून आम्हा श्री क्षेत्र पंढरपूरवासी वीरशैवाना उपकृत केले आहे.

श्री ष. ब्र. बालशिवयोगी गुरुशांत शि वा चा र्य हिरेजेवरगी हे आणि श्री ष. ब्र. वीरतपस्वी चन्नवीर शिवाचार्य हे परमपुज्य दिव्य मूर्ती वीरशव धर्मोद्धारा-साठी व समाजकार्यांसाठी एकाच ध्येयाने प्रेरित होते. हे त्यांचे कार्य प्रत्यक्ष पाहिल्यास दिसून येत आहे.

स्वतःचा डामडौल ऐषाराम या कडे किंचितही लक्ष न देता वैराग्यपूर्ण निःस्वार्थबुद्धिनें समाजातील अज्ञान नाहिसे करणेंकडे व समाज धर्मनिष्ठ शिवाचा-राने वीरशैवांची तत्वे आचरणांत आणण्यासाठी वीरशैव धर्मांची ध्वजा तेजस्वी ठेवण्यासाठी त्यानी जिद्ध घेतली आहे. व त्यानी आज पर्यंत केलेले कार्य आदर्श व संस्मरणीय असेच आहे.

श्री बालशिवयोगी यानी हिरेजेवरगी येथे आपले भागामध्ये शिशोद्धारासाठी श्री १००८ जगद्गुरु पंच पिठाधिशांचें महोत्सव पूर्वक स्वागत करून सर्वांनां धर्मामृत पाजून महत्वाचे कार्य केले आहे. वीरशैव व इतर समाजामध्ये धार्मिक सात्विक गुणाचे पैदास व्हावी व माणुसकीने वागण्याची बुद्धी निर्माण करण्यासाठी सततस्वयं आचरण करून इतरानां धडा देण्याचा प्रयत्न करीत. असतात अशा परमपूज्य बालशिवयोगी हिरेजेवरगी महाराजाना त्यांचे षष्ठयाब्धी पूर्वी समारंभ प्रसंगी श्री १००८ जगद्गुरु पंचाचार्यांचे मंगलचरणाचें स्मरण पूर्वक त्यानां दीर्घायुरारोग्य लाभो अशी प्रार्थना करितो.

शुभं भवतु



आपले नम्र,
प्रवचनरत्न : कललय्या महालिंगय्या स्वामी,
कासेगांवकर.

गुरुभक्तावतंस, धर्मभूषण, महागुरु सेवाचंद्रः—
श्री शंकर बाबुराव कटप.
मु. पंढरपूर. जि. सोलापूर.

॥ ॐ ॥

# श्री ष. ब्र. बालशिवयोगी गूरुशांत शिवाचार्य

यांचे

# अनुष्ठान [ऑगष्ट १९३८]

कवि : धानप्पा भीमण्णा करशेट्टी

चाल :– चन्द्रकांत

श्रावण महिना श्रेष्ठ असे हो योगी महात्म्याना ।
जप-तप ध्यानी वेळ घालण्यां संधि मिळे त्यांना ॥ १ ॥

जेऊरगी स्थली जन्म घेऊनी गुरुशांत स्वामी ।
जणु का आले वसुंधरेला उद्धरण्या कामी ॥ २ ॥

तारा वालक विजय नृपाची थोर असे कीर्ती ।
वसती करतें या तव नगरी स्वामी सम मूर्ती ॥ ३ ॥

जिथे पशू श्वापदे खेळती रजनी हृदयांत ।
शांत स्वामीचा असे हो आश्रम अशा काननात ॥ ४ ॥

आश्रमीं यांच्या द्वय वाजूला असे वृक्षबेल ।
पुढे तयाच्या शोभे हिरवे हरित–गार वेल ॥ ५ ॥

प्रातःकाळी सृष्टी देवी ही शुचिर्भूत दिसते ।
गुरुशांतच्या दर्शनालागी सदा सज्ज असते ॥ ६ ॥

पर्णकुटीच्या सव्य–वाजुला विवर भुजंगाचे ।
जणू का आहे श्री स्वामीनां रक्ष भुजंगाचे ॥ ७ ॥

ऊठ गे मैना, ऊठ गडे तू, उठ सखे आता ।
मंगल स्तोत्रे टाक रिझवुनी स्वामीच्या चित्ता ॥ ८ ॥

धन्य गुरुवरा, शांत मुनिवरा, धन्य तुझा महिमा ।
गो–दुग्धावर दिवस कंठुनि पूरेकरी नियमा ॥ ९ ॥

अंतःकरणी दया–शांति या असे शुद्ध वाव ।
क्षुधा तृषेला वडवर्गीला मूळ नसे ठाव ॥ १० ॥

योग परायण तत्पर स्वामी एकांती बसले ।
भीम सुताच्या म्हणुनी हृदयी भक्ती काव्य रुजले ॥ ११ ॥

( वरील कविता शीघ्रकवि श्री डी. बी. करशेट्टी B. A. S. T. C.
यांनी १९३८ साली "श्री" अनुष्ठान समाप्तीच्या वेळी म्हणून
दाखविली होती. )

बालशिवयोगी श्री ष. ब्र. गुरुशांत शिवाचार्य

# एक पावन मूर्ती



लेखक – लिंगराज हिरेमठ,
B. A., B. Ed. H. S. S.

**भव्य परंपरा –**

अमर वीरशैव तत्वज्ञानांचा प्रथम प्रचार या भूतलावर श्रीमद्‌जगद्‌गुरु पंचाचार्यांनी केला. त्याचा इतिहास व परंपरा अतिशय उज्वल आहे. वीरशैव धर्मांची स्थापना करणाऱ्या पंचाचार्यांनी धर्माचरणाच्या व शिक्षणाच्या सुव्यवस्थेकरितां सर्व भारतभर अनेक मठांची स्थापना केली. त्यांनी केलेली समाजरचना अत्यंत उत्कृष्ठ आहे. या परंपरेत श्रीशैल सूर्यसिहास–नाच्या गोत्रसूत्रांत प्रकाशमान होणारा गुरुस्थल मठ म्हणजेच कर्नाटक राज्यातील गुलबर्गा जिल्ह्यातील असलेला हिरेजेवरगी येथील बृहन्मठ होय. या मठाचे अधिपति बालशिवयोगी श्री ष. ब्र. गुरुशांतलिंग शिवा चार्य होत. या पुरातन परंपरेत त्याची मूर्ती एखाद्या ऋषिमुनीसारखी अखंड केलेल्या तपः साधनेप्रमाणे प्रज्वलित होत आहे. आपली परंपरा अतिशय कुशल-तेने सांभाळीत आहेत.

**स्वातंत्र्य पूर्वकाल –**

ज्यावेळी स्वामीजी मठाधिपति झाले त्या वेळी त्या भागात निजामाचे राज्य होते. त्यांत हिरेजेवरगी हा भाग जहागिरित मोडत असल्यामुळें सरकारकडून अथवा जहागिरदाराकडून जनतेच्या शिक्षणाचीं काळजी घेतली जात नसे. म्हणून शाळाच नव्हत्या. अतिमागास-लेला भाग जनतेत ज्ञानज्योत सतत तेवत ठेवण्याचे महान्‌कार्य स्वामीजीनी त्या वेळी केले. मठातच शाळा चालवीन. विद्यार्थ्यांना आश्रय देत. लोकामध्ये न्याय, नीति सदाचरण व धर्मप्रवृत्ति टिकवून आणत. मोठ मोठ्या विद्वानाची भाषणे करवित. भारताचा प्राचिन इतिहास लोकांना समजावा म्हणून नाटकरूपानें अनेक नाटके ते घडून आणीत. स्वातंत्र्याच्या चळवळीत मोठ्या उत्साहाने भाग घेवून जनतेला स्वातंत्र्य संग्रामात उडी घेण्याकरितां प्रेरित केले. अनेक भूमिगत स्वातंत्र्य योध्यांना अनेक तऱ्हेने मदत केलीं, त्यांचे स्वातंत्र्यप्रेम अतिशय प्रखर आहे. कट्टर सनातनी असूनसुधां अनेक सामाजिक सुधारणा घडवून आणण्यास प्रयत्नशील आहेत. स्वतंत्र विचार हा त्यांच्या व्यक्तिमत्वाचा गाथा आहे. पटेल ते निर्भयतेने वोलण्यास किंचितही कचरत नाहींत. म्हणून सर्व धर्मांचे व पंथाचे ते आवडते वनले आहेत.

**अखंड तपःचर्या –**

स्वातंत्र्यपूर्व काळात त्यांचा जन्म असल्यामुळें विद्याभ्यासाला त्यांनां फारसा वाव मिळालानाहीं. तरी सुद्धा आपल्या दिव्य आचरणानें लोकादरास पात्र झाले आहेत. विद्येने जे साध्य व्हायाला पाहिजे ते त्यांनी आचरणानें साध्य केलेआहे. ते विख्यात नैष्ठिक ब्रह्मचारी आहेत. त्यांची तुलनाफक्त महर्षिशुकमुनीशी करावी लागले. त्यांचे निष्कलंक चारित्र्य सर्वश्रुत आहे मोठ मोठे तपस्वी, विद्वान याच गुणामुळे त्याच्याकडे आद-राने पाहतात. त्यांची राहणी अत्यंत साधी आहे. खेड्यात राहून लोकोधाराचे काम करणे त्यांना अतिशय आवडते. आणि हे काम अतिशय अवघड असतें. खेड्यांतील जनता उच्च शिक्षणापेक्षा उच्च आचरणाकडे त्यागाकडे अधिक आकर्षित होतात. महा राजानी अनेक ठिकाणी अनुष्ठानें केली, अनुष्ठानानी आत्मक्लेशानी व स्वार्थत्यागानी लोकांत नीतिमत्ता मूळ धरते आणि उजळते. एक नवीन दिव्यचेतना जनतेंत निर्माण होते. अनुष्ठान म्हणजे प्रत्यक्ष सत्याचरणच !

कुठल्याही धार्मिक समारंभांत, अनुष्ठान समाप्तींत त्याची गैरहजेरी म्हणजे मनाला चटका बसणारी गोष्ट ठरते. सर्वगुरुवर्गामध्यें तें अत्यंत आवडते असे गुरुवर्य आहेत. ते बोलतात कमी पण त्यांचे दिव्य आचरणच अखंड धर्मोपदेश करित असते. ( Deeds speak louder than words ) ही उक्ती त्यांच्या बाबतीत अतिशय सार्थ आहे. वीरतपस्वी श्री ष. ब्र. चन्नवीर शिवाचार्य होटगी यांचेतर तें अतिशय आवडतें आचार्य होते. कर्मकांड आडंबर, आणि झगमगाटापेक्षां त्यांची साधी रहाणीं व प्रेममय वाणीपाहुन मनमुग्ध होवून जाते. कधीही त्यांच्यात अहंकार वास केलेला नाहीं अहंकारानी माणसाचा अधःपात होतो हे जणू तें आपल्या आचरणानी दाखवतात.

त्याच्या तपःश्चर्येचे दुसरे गूढ असे आहे कीं, निव्वळ बैठे धर्मगुरु ते नाहींत. Work is Worship "कायकवे कैलास" या उक्तीप्रमाणें तें सतत उद्योगात रममाण असतात. अंग मेहनत हे अतीशय त्यांना प्रिय आहे. श्रमिक शेतकरी वर्गाचे या गुणामुळे आवडते बनले आहे. त्यांच्या सुखदुःखाशी ते समरस होतात. मार्गदर्शन करतात. स्वतः शेती व्यवसायात ते रस घेतात. एका "नांगर योऱ्या" प्रमाणें त्याचे हे कार्म अखड चाललेले आहे. ते स्वप्नाळू तपस्वी नसून जमिनी वर पाय टेकलेली व्यवहारवादी, वास्तववादी, योगी आहेत.

**शैक्षणिक व सांस्कृतिक कार्यक्रम –**

स्वामीजीना शैक्षणिक व सांस्कृतिक कार्यक्रम अतिशय अभिरुचि आहे. मोठ्या हिंमतीने त्यानी दुधनी (ता. अक्कलकोट) येथे माध्यमिक विद्यालय काढले. हिरेजेवर्गी येथे स्वातंत्र्यानंतर फार मोठी प्राथमिक शाळा व माध्यमिक शाळा काढण्यास प्रोत्साहन दिले. सरकारचे सर्व शैक्षणिक सोई खेड्यात उपलब्ध करून दिले. टपालाची व्यवस्था, लाइटची व्यवस्था, चांगले मार्ग सर्व कांहीं सरकारकडून मिळविले. स्वग्राम संपन्न केले. अनेक विद्यार्थी आज खेडयांत राहून चांगलेशिक्षण घेतात. गांवकऱ्यांची व हजारो भक्तांची त्यांच्यावर नितांत श्रृद्धा आहे. निजामच्या काळातसुद्धा अनेक पौराणिक नाटके करवून उच्च धार्मिक भावना सतत तेवत ठेविली. कलेला आश्रय दिला. जगद्विख्यात महापुरुषांचे पुराण मठात नेंहमीच घडवून आणतात. अनेक चांगले धार्मिक संस्कार अशा कार्यक्रमातून सतत करीत असतात.

त्यांच्यात सर्वांत मोठा गुण म्हणजे परधर्मसहिष्णुतां. दुसऱ्या धर्मातील विद्वानाना सुद्धां तें अतिशय आदराने पाहतात.

ते पुराण मतवादी आहेत पण हटवादी नाहींत. त्यांचे मन फार मोठे विशाल आहे. शैक्षणिक व धार्मिक कार्यात सढळ हातानें मदत करतात.

निजामच्या राजवठींतगरीव विद्यार्थ्यानां चांगले शिक्षण मिळावे म्हणून अनेक आचार्यांच्या साहयानें गुलबर्गा या जिल्ह्याच्या ठिकाणी बोर्डिंग काढले. कित्येक विद्यार्थ्यांचा या मुळे फायदा झाला. आज या बोर्डिंगमधलें विद्यार्थी राजसरकारात मोठ्या हुद्द्यावर काम करीत आहेत. त्यांना मनांमन वातें कीं समाजा करितां गरुवर्यानीं फार मोठा त्याग केला पाहिजे. त्यांच्या करितां अनेक कष्ट झेलले पाहिजेत. ज्या समाजावर गुरुवर्ग सत्ता गाजवितो त्या समाजाचे कल्याण करणे हेच ध्येय त्यांचे असले पाहिजे. अन्यथा मठांचे काम काय? जनतेज्या कल्याणाकरिताच मठांची व आचर्यांची परंपरा निर्माण झाली आहे. सत्ता हे चांगला सेवेकरीतां आहे. आणि ते असायाला पाहिजे ही त्यांची धारण आहे. सत्तेंने माणूस स्वैराचारी बनता कामानये. सत्ताही जसी स्वर्ग निर्माण करू शकतें त्याच प्रमाणें ती नरक ही निर्माण करुंशकते. शिक्षणानें समाज सुधारतो. त्याला गती मिळते. आणि सदाचरणाने समाजाला स्थैर्य व शांति लाभते आणि सततोद्योगानेच समाज संपन्न होतो अशी त्यांची धारणा आहे.

कष्ट न करता चमत्काराने धनवान होणारा, न्याय नीतिला सोडून संपन्न बनणारा, प्रतिष्ठा मिळविणारा माणूस लवकर निस्तेज होतो त्यांचा अधःपतन होतो हे त्यांना माहित आहे. सतत केलेल्या कष्टान, त्यागाने आणि तपःस्चर्यानेच माणूस मोठा होतो. तोच समाजाचा, राष्ट्राचा आधार आणि आदर्श ठरतो. हा महास्वामीजींच्या उपदेशाला गाभा असतो.

आत्महित जनहित सर्व कांही तपःश्चर्यानेच साध्य होते.

स्वामीजींनी फार मोठे सांस्कृतिक केंद्र निर्माण केले आहे. आपल्या बरोबर अनेक भक्तांना सर्व ज्योति लिंगाचे दर्शन घडविले. अनेक तीर्थस्थानांच्या यात्रा करविल्या. अनेक देशधर्म दाखविले. लोकाच्या ज्ञानकक्षा वाढविल्या· विचाराला गति दिली.

अशा तऱ्हेने तपस्वी जीवत कंठता, अनेक तीर्थ स्थाने, ज्योतीर्लिंगांचे दर्शन करुन, होईल तेवढे परोप कार करता, खऱ्या धर्मगुरुंचें कार्य बजावता बजावतां या पुण्यपावन जीवनाला साठ वर्षे पूर्ण होतात हे पाहून मनाला हर्ष होत आहे. परमेश्वरांनी त्यांना आणखी उदंड आयुष्य देवून लोकोपयोगी कामे करवून घ्यावीत हीच प्रभूचरणी प्रार्थना आहे.

**जीवनाचे मर्म :–**

सर्वोपि सुखिन्सन्तु, सर्वेसन्तु निरामयाः ।
सर्वेभद्राणि पश्यन्तु, न कदाश्चित दुःखमाप्नुयात्॥

हा त्यांच्या जीवनांचे मर्म आहे. एकपुण्य पावन मूर्ती!

– समाप्त –

# योगीराज श्री गुरुशांत स्वामी

चाल :– चंद्रकांत

योगीराज हे कोण ? नव्हे का गुरुशांत स्वामी ।
जप तप ध्यानी मग्न सदा हे लीन ईश चरणी ॥१॥
पदरजानें पुनीत झाले जे ऊरगी ग्राम ।
प्रिय तयांना पुण्यभूमीपरी प्रज्ञापुरी धाम ॥२॥
महा तपस्वी, परमपूज्य श्री स्वामीजी तुमच्या ।
शांतवृत्तीला अनन्वयाचा अलंकार साचा ॥३॥
भौतिक सृष्ठी भोग भोगते, सृष्ठीची रीत ।
त्यागामध्ये भोग, मानुनी तुम्ही सदा शांत ॥४॥
पंच व्रतांचे पालन करुनी महाव्रती बनला ।
अष्ठावर्णी पूजेचा तुम्ही पुरस्कार केला ॥५॥
ब्रम्हचर्य हे जीवन तुमचे महा विरागी परी ।
केली का जीवनात या भीष्म प्रतिज्ञा खरीं ॥६॥
शिक्षण प्रेमी, कार्य धुरंधर, लौकिक हा तुमचा ।
ज्ञानहीन तव सानिध्याने ज्ञानवंत साचा ॥७॥
विश्वनाथ महामहेश जगती अवतरले जेथे ।
पावित्र्याहुनी पवित्र झालीं वाराणाशी तेथे ॥८॥
पावन क्षेत्री छात्र ठेवूनी ज्ञानचक्षू दिधले ।
गिरवाण गिरा तय पंडित करुनीं जीवन उजळविले ॥९॥
शिवाचार्य शिवयोगी आले पूनीत झाली धरा ।
नमःशिवाय गुरु, नमःशिवाय गुरु सत्य शिवं सुन्दरा ॥१०॥
शिक्षा दीक्षा धर्मगुरु महा मोक्षदायका तूं ।
दीर्घायुरारोग्य लाभू दे शरदशतं भव तूं ॥११॥

भक्तानुभक्त,
धा. भी. करशेट्टी



